

# ವ್ಯಾಸಪರ್ವ

ದುರ್ಗಾ ಭಾಗವತ್

Jayant Kaikini

'ಪ್ರಮತಿ'ಯ ೨ನೆಯ ಪ್ರಕಟನೆ

# ವ್ಯಾಸಪರ್ವ

(ಮಹಾಭಾರತದ ಹತ್ತು ಪ್ರಮುಖ ಪಾತ್ರಗಳ ಮೇಲೆ ಹೊಸಬೆಳಕು)

ಲೇಖಿಕೆ :

ಶ್ರೀಮತಿ ದುರ್ಗಾ ಭಾಗವತ

ಮರಾಠಿಯಿಂದ ಅನುವಾದ :

ಶ್ರೀ ಗೌರೀಶ ಕೈಕಿಣಿ

ಅನುವಾದ ಸಹಾಯ :

ಡಾ. ಕೆ. ಜಿ. ನಾರಾಯಣಪ್ರಸಾದ

೧೯೭೨

ಪ್ರಮತಿ ಪ್ರಕಾಶನ - ಸುಬ್ರಹ್ಮಣ್ಯ

ಮತ್ತು

ಮರಾಠೀ-ಕನ್ನಡ ಸ್ನೇಹವರ್ಧನ ಕೇಂದ್ರ-ಪುಣೆ

VYĀSA PARVA (Critical analysis of ten leading characters in Mahabharata). By Smt. Durga Bhagwat.
Translated from Marathi by Shri Gaurisha Kaikini.
(Translation assistance, by Dr K. G. Narayana Prasad).
Published by Pramati Prakashana,
Subrahmanya, D. K. Dist. 574 238

First Impression : 1992

Pages : xx + 188 Price : 40/-



Illustrations :
Shri B. R. Kulkarni, Bombay

Cover design :
Shri Mohan Sona, Vittal

ಬೆಲೆ : ರೂಪಾಯಿ ನಲುವತ್ತು

ಮುದ್ರಕರು :
ಶೋಭಾ ಪ್ರೊಸೆಸ್ ಪ್ರಿಂಟರ್ಸ್
ದರ್ಬೆ - ಪುತ್ತೂರು, ದಕ್ಷಿಣ ಕನ್ನಡ
ದೂರವಾಣಿ : 6565

# ಮುಡಿಪು



'ವ್ಯಾಸಪರ್ವ'ದ ಕನ್ನಡ ಪ್ರಕಟನೆಯ
ಮೂಲ ಪ್ರೇರಕರೂ
ಕನ್ನಡ-ಮರಾಠೀ ಸಾಹಚರ್ಯದ ಸಾಕಾರ ಸ್ವರೂಪರೂ
ಆಗಿದ್ದ

## ಡಾ. ಶಂ. ಬಾ. ಜೋಶಿ

-ಅವರಿಗೆ

ಬಿಡುಗಡೆ ಸಮಾರಂಭ

# ಪೀಠಿಕೆ

ಮಹಾರಾಷ್ಟ್ರದ ಹಿರಿಯ ಲೇಖಕರೂ, ಈ ವರ್ಷ ಕೊಲ್ಹಾಪುರದಲ್ಲಿ ಜರುಗಿದ ಅ.ಭಾ. ಮರಾಠೀ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆದ ಶ್ರೀ ರಮೇಶ ಮಂತ್ರಿಯವರು ಕೆಲ ವರ್ಷಗಳ ಹಿಂದೆ ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಬಂದಿದ್ದರು. (ನಾನಾಗ ವಿಭಾಗದ ಮುಖ್ಯಸ್ಥನಿದ್ದೆ) ಶ್ರೀ ಮಂತ್ರಿಯವರು ತಮ್ಮ ಕರ್ನಾಟಕ ಸಂಚಾರದಲ್ಲಿ ಧಾರವಾಡಕ್ಕೆ ಹೋದಾಗ ಡಾ. ಶಂ.ಬಾ. ಜೋಶಿಯವರನ್ನು ಕಂಡಿದ್ದರ ಪ್ರಸ್ತಾಪವಮಾಡಿ, ಶ್ರೀಮತಿ ದುರ್ಗಾ ಭಾಗವತರ ಸುಪ್ರಸಿದ್ಧ ಮರಾಠೀ ಕೃತಿ ''ವ್ಯಾಸಪರ್ವ''ವನ್ನೂ ಶಂ.ಬಾ. ಅವರು ಅನುವಾದಿಸ ಬಯಸಿದ್ದಾರೆಂದು ತಿಳಿಸಿದರು. ಮರಾಠಿ ಕನ್ನಡ ಸಾಹಚರ್ಯದ ಬಗ್ಗೆ ವಿಧಾಯಕ ಯೋಜನೆಯನ್ನು ರೂಪಿಸಿ ಕಾರ್ಯಪ್ರವೃತ್ತವಾಗಿದ್ದ ಕನ್ನಡ ವಿಭಾಗವು ಇದರ ಪ್ರಕಟನೆಯನ್ನು ಎತ್ತಿಕೊಳ್ಳಬಹುದಾಗಿ ನನಗೆ ತೋರಿತು. ಹಾಗೆಂದು ಸಮ್ಮತಿಸಿದೆ.

ಆದರೆ ಹಣ್ಣು ವಯಸ್ಸಿನ ಶಂ.ಬಾ. ಅವರು ಅನುವಾದ ಮಾಡುವ ಶ್ರಮವಹಿಸುವುದು ನನಗೆ ಬೇಡವೆಂದು ಕಂಡಿತು. ಅವರೊಂದಿಗೆ ಸಮಾಲೋಚನೆ ಮಾಡಿ, ಆ ಕೆಲಸವನ್ನು ಶ್ರೀ ಗೌರೀಶ ಕೈಕಿಣಿಯವರಿಗೆ ಒಪ್ಪಿಸಬೇಕೆಂದು ಉಭಯತರಲ್ಲಿ ಒಪ್ಪಿಗೆಯಾಯಿತು. ಶ್ರೀ ಕೈಕಿಣಿಯವರೂ ೭೫ರ ಗಡುವನ್ನು ದಾಟಿದವರು. ಆದಾಗ್ಯೂ ಪೂಜ್ಯ ಶಂ.ಬಾ. ಅವರ ಆಶಯವನ್ನು ನೆನೆದು ಅನುವಾದ ಕಾರ್ಯವನ್ನೂ ಆರಂಭಿಸಿಬಿಟ್ಟರು. ಶ್ರೀಮತಿ ದುರ್ಗಾ ಭಾಗವತರ ವಿಚಾರಸರಣಿಯು ನೇರ ಹಾಗೂ ಸ್ಪಷ್ಟವಾದದ್ದೆಂದು ಕಂಡರೂ ಅವರು ಈ ಕೃತಿಯಲ್ಲಿ ಮರಾಠೀ ಶಬ್ದಗಳನ್ನು ವ್ಯಂಜಿಸಿದ ರೀತಿ ಅನುವಾದಕ್ಕೆ ಒಗ್ಗುವಂತಹ ದಲ್ಲ. ಶ್ರೀ ಕೈಕಿಣಿಯವರು ಈ ಗುರುತರ ಕಾರ್ಯವನ್ನು ಮುಗಿಸಿಕೊಟ್ಟಿದ್ದಾರೆ. ಕೈಕಿಣಿಯವರಂತಹ ಗಣ್ಯ ಲೇಖಕರು ಇದರ ಅನುವಾದ ಮಾಡಿದ್ದು ನಮಗೆ ಹೆಮ್ಮೆ ತರುವಂತಹದೇ.

ಮಿತ್ರರಾದ ಶ್ರೀ ಆನಂದ ಪರ್ಟಿ ಹಾಗೂ ಶ್ರೀ ವಿರೂಪಾಕ್ಷ ಕುಲಕರ್ಣಿ ಯವರು ಹಸ್ತಪ್ರತಿಯನ್ನು ಮೂಲದೊಂದಿಗೆ ಹೋಲಿಸಿ ನೋಡಿ, ಅಲ್ಲಲ್ಲಿ ಸರಿಪಡಿಸಿಕೊಟ್ಟಿದ್ದಾರೆ.

ಉತ್ತರ ಕರ್ನಾಟಕದವರ ಬರವಣಿಗೆಗೆ ತನ್ನದೇ ಆದ ವೈಶಿಷ್ಟ್ಯವಿದೆ. ಇದಂತೂ ಮರಾಠಿಯಿಂದ ಅನುವಾದಗೊಂಡ ಕೃತಿ. ಈ ಕನ್ನಡಾನುವಾದದ ನುಡಿಗಟ್ಟು

ನಾಡಿನ ದಕ್ಷಿಣಕ್ಕೂ ಸುಕರವಾಗುವ ದೃಷ್ಟಿಯಿಂದ, ಹೈದರಾಬಾದಿನ ಓಸ್ಮಾನಿಯಾ ವಿಶ್ವವಿದ್ಯಾಲಯದ ಕಾಲೇಜಿನ ಕನ್ನಡ ಅಧ್ಯಾಪಕ ಡಾ. ಕೆ.ಜಿ. ನಾರಾಯಣ ರಾವ್ ಪ್ರಸಾದರ ವಿಶೇಷ ಸಹಾಯ ಪಡೆದದ್ದನ್ನೂ ಪ್ರತ್ಯೇಕವಾಗಿ ಉಲ್ಲೇಖಿಸಬೇಕು.

ಕನ್ನಡಿಗರಿಗೆ ಶ್ರೀಮತಿ ದುರ್ಗಾಬಾಯಿಯವರ ಜೀವನ-ಕಾರ್ಯ ವೈಶಿಷ್ಟ್ಯ ವನ್ನು ಪರಿಚಯಿಸಬೇಕೆಂದು, ಡಾ.(ಸೌ.) ಸರೋಜಿನಿ ವೈದ್ಯರನ್ನು ಕೇಳಿಕೊಂಡೆ. ಆಕೆ ಮುಂಬಯಿ ವಿಶ್ವವಿದ್ಯಾಲಯದ ಮರಾಠೀ ವಿಭಾಗದ ಮುಖ್ಯಸ್ಥೆ. ತಾವು ಲೇಖಿಕೆಯ ಬಗ್ಗೆ ಬರೆದುದಷ್ಟೇ ಅಲ್ಲ, 'ವ್ಯಾಸಪರ್ವ'ದ ಬಗೆಗೂ ಡಾ.(ಸೌ.) ಮೀನಾ ವೈಶಂಪಾಯನರಿಂದ ಕಿರು ಲೇಖನವನ್ನು ಬರೆಯಿಸಿಕೊಟ್ಟರು.

ಇದು ವ್ಯಕ್ತಿಚಿತ್ರದ ಪುಸ್ತಕ ತಾನೇ. ಇಲ್ಲಿಯ ಪಾತ್ರಗಳಿಗೆ ಸೂಕ್ತವಾದ ರೇಖಾ ಚಿತ್ರಗಳನ್ನೂ, ಮುಖಪುಟವನ್ನೂ, ಮುಂಬಯಿಯ ಕಲಾವಿದ ಶ್ರೀ ಬಿ.ಆರ್. ಕುಲಕರ್ಣಿಯವರು ಕಲಾತ್ಮಕವಾಗಿ ರೂಪಿಸಿದ್ದಾರೆ. ಶ್ರೀಮತಿ ದುರ್ಗಾಬಾಯಿ ಯವರ ಚಿತ್ರವಿನ್ಯಾಸವೂ ಅವರದೇ.

ಇವರೆಲ್ಲ ಎಷ್ಟೊಂದು ಶ್ರದ್ಧೆಯಿಂದ ಕಾರ್ಯವನ್ನು ನಿರ್ವಹಿಸಿರುವ ರೆಂಬುದನ್ನು ನಾನು ಚೆನ್ನಾಗಿ ಬಲ್ಲೆ. ಅದಕ್ಕೆ ಕಾರಣ, ಶ್ರೀಮತಿ ದುರ್ಗಾಬಾಯಿ ಯವರ ಉಜ್ವಲ ವ್ಯಕ್ತಿತ್ವ. ಅವರು ಮರಾಠೀ ಸಾಹಿತ್ಯದ ಅತಿ ಶ್ರೇಷ್ಠ ಲೇಖಿಕೆ ಎಂಬುದರಲ್ಲಿ ಎರಡು ಮಾತಿಲ್ಲ. ಜೊತೆಗೆ ಅವರು ಧೀಮಂತ ವಿಚಾರವಾದಿ ಎನಿಸಿದ್ದಾರೆ. ಬರೆದಂತೆಯೇ ಬಾಳುವುದು ಸಾಹಿತ್ಯಕರಿಗೆ ಸಹಜಸ್ಫೂರ್ತಿ ಪ್ರವೃತ್ತಿ ಅಲ್ಲ. ಶ್ರೀಮತಿ ಭಾಗವತರು ವಿಚಾರ ಹಾಗೂ ಲೇಖನ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದವರಲ್ಲದೆ, ತಮ್ಮ ಜೀವನವಿಡೀ ಪಾಲಿಸಿಕೊಂಡು ಬಂದವರು - ಅವೆಷ್ಟೋ ಪ್ರಶಸ್ತಿಗಳನ್ನು - ವಿಶೇಷತಃ ಸರಕಾರದಿಂದ ಬಂದವುಗಳನ್ನು ನಿರಾಕರಿಸಿದ್ದಾರೆ. ಕಳೆದ ವರ್ಷ, ಮಹಾರಾಷ್ಟ್ರ ಸರಕಾರವು, ರಾಷ್ಟ್ರಮಟ್ಟದಲ್ಲಿ ಸನ್ಮಾನಿತರಾಗಿದ್ದ, ಸಾಹಿತಿ, ಕಲಾವಿದರಿಗೆ ಪುನಹ ಪುರಸ್ಕಾರ ನೀಡಬಯಸಿತು. ಒಂದು ಲಕ್ಷ ರೂ.ಗಳದ್ದು (ಮುನ್ನೂರಕ್ಕೂ ಮೇಲ್ಪಟ್ಟು ವ್ಯಕ್ತಿಗಳಿಗೆ) ಇದರಿಂದ ಲೇಖನ ಸ್ವಾತಂತ್ರ್ಯಕ್ಕೆ ಪರ್ಯಾಯವಾಗಿ ಧಕ್ಕೆ ತಗುಲಿದಂತೆ - ಎಂದು ಹಲವಾರು ಮರಾಠೀ ಲೇಖಕರು ಬಗೆದರು. ಪತ್ರಿಕೆಗಳಲ್ಲಿ ಬರೆದರು. ಅವರಲ್ಲಿ ಶ್ರೀಮತಿ ದುರ್ಗಾ ಭಾಗವತರೂ ಒಬ್ಬರು. ಆದರೆ ಅಂತಿಮವಾಗಿ ಎಲ್ಲರೂ ಆ ಪುರಸ್ಕಾರವನ್ನು ಸ್ವೀಕರಿಸಿದರು. ಅಂತಿಮವಾಗಿ ನಿರಾಕರಿಸಿದವರು ದುರ್ಗಾ ಬಾಯಿಯವರೊಬ್ಬರೇ.

ಇದೇ ಬಗೆಯ ಪ್ರಾಮಾಣಿಕತೆ ಮತ್ತು ಸತ್ಯನಿಷ್ಠತೆ ಮಹಾಭಾರತದ ಪಾತ್ರಗಳ ವಿಶ್ಲೇಷಣೆಯಲ್ಲಿಯೂ ಕಂಡುಬರುತ್ತದೆ. ವ್ಯಾಸರು ಕಂಡರಿಸಿದ ಪ್ರಮುಖ ವ್ಯಕ್ತಿಗಳ ಜೀವನಾಡಿಯನ್ನು ಅವರಿಲ್ಲಿ ಶೋಧಿಸಿದ್ದಾರೆ. ಕನ್ನಡದಲ್ಲಿ ಮಹಾಭಾರತವನ್ನು

ಆಧರಿಸಿದ ಕಾವ್ಯ, ನಾಟಕ, ಕಾದಂಬರಿಗಳು ಪಂಪನಿಂದ ಹಿಡಿದು ಭೈರಪ್ಪ ಅವರ ವರೆಗೂ ಮೂಡಿಬಂದಿವೆ; ವಿಮರ್ಶನ ಪ್ರಬಂಧಗಳೂ ಇವೆ. ಆದಾಗ್ಯೂ ಈ ಕೃತಿಯಲ್ಲಿಯ ವಿಚಾರಮಂಡನೆ ವಿನೂತನವೇ ಆಗಿದೆ.

'ವ್ಯಾಸಪರ್ವ'ದ ಹಸ್ತಪ್ರತಿಯೇನೊ ಸಿದ್ಧವಾಯಿತು. ಅದರ ಪ್ರಕಟನೆಗಾಗಿ ವಿಶ್ವವಿದ್ಯಾಲಯದವರು ಹೆಚ್ಚಿನ ಧನಸಹಾಯವನ್ನೂ ಒದಗಿಸಿದ್ದರು. ಆದರೆ ಆ ವೇಳೆಗೆ ನಾನು ನಿವೃತ್ತನಾದೆ (೧೯೮೯). ಪ್ರಕಟನ ಕಾರ್ಯವು ಮುಂದು ವರಿಯಲಿಲ್ಲ. ಆಗ ನಮ್ಮ ಮರಾಠಿ ಕನ್ನಡ ಸ್ನೇಹವರ್ಧನ ಕೇಂದ್ರವು ಇದರ ಪ್ರಕಾಶನವನ್ನು ಎತ್ತಿಕೊಂಡಿತು.

ಈ ಕನ್ನಡಾನುವಾದದ ಮೂಲ ಕಲ್ಪನೆ ಪೂಜ್ಯ ಶಂ.ಬಾ. ಅವರದು. ಅವರ ಮೇಲಿನ ಭಕ್ತ್ಯಾದರದಿಂದ ಶ್ರೀ ಗೌರೀಶ ಕೈಕಿಣಿಯವರು ಹಾಗೂ ನಾನು ಅವರ ಸಂಕಲ್ಪವನ್ನು ಈಡೇರಿಸಹೊರಟೆವು. ಆದರೆ ಅವರು ಬದುಕಿ ಇರುವಾಗ ಇದನ್ನು ಹೊರತರುವುದಾಗಲೇ ಇಲ್ಲ. ಅದರಿಂದ ನಮಗಿಬ್ಬರಿಗೂ ಆದ ಬೇಸರ ಅಷ್ಟಿಷ್ಟಲ್ಲ. ಈಗ ಅದು ಪ್ರಕಟವಾಗಿದ್ದರೂ ಶಂ.ಬಾ. ಅವರು ಇದನ್ನು ಕಣ್ಣಾರೆ ನೋಡಲಿಲ್ಲ ವೆಂಬ ವ್ಯಥೆ ನಮ್ಮಲ್ಲಿ ಸದಾ ಉಳಿಯುವಂತಾಯಿತು.

ಇಂಥ ಮನಃಸ್ಥಿತಿಯಲ್ಲಿದ್ದಾಗ ಸುಬ್ರಹ್ಮಣ್ಯ ಮಠದ ಶ್ರೀ ವಿದ್ಯಾಭೂಷಣ ತೀರ್ಥಸ್ವಾಮೀಜಿಯವರ ಪರಿಚಯವಾಯಿತು. ಹಸ್ತಪ್ರತಿಯನ್ನು ಪರಿಶೀಲಿಸಿದ ಕೂಡಲೇ, 'ಪ್ರಮತಿ-ಪ್ರಕಾಶನ'ವನ್ನು ಜೊತೆಗೂಡಿಸಿದರು. ತಿಂಗಳೊಪ್ಪತ್ತಿನಲ್ಲಿ ಗ್ರಂಥ ಹೊರಬರುವುದಕ್ಕೂ ಕಾರಣರಾದರು. ಅವರ ಉದಾರ ಸಹೃದಯತೆ ಯನ್ನು, ಸದೈವ ಮನದಲ್ಲಿ ಉಳಿಸಿಕೊಂಡಿರುವೆ.

ಶ್ರೀನಿವಾಸ ಹಾವನೂರ
ಸಂಪಾದಕ

ಪುಣೆ, ಫೆಬ್ರುವರಿ, ೧೯೯೨

**ಸೂಚನೆ :**

*ಈ ಗ್ರಂಥದಲ್ಲಿ ಉಪಯೋಗಿಸಿಕೊಂಡ ಮೂಲ ಮಹಾಭಾರತದ ಮಾತೃಕೆ ಎಂದರೆ, ನೀಲಕಂಠ ವ್ಯಾಖ್ಯಾಸಹಿತವಾದ ಕಲಕತ್ತೆಯ ಆವೃತ್ತಿಯದು.*
*(ಪ್ರಕಟನೆ : ಚಿತ್ರಶಾಳಾ ಪ್ರೆಸ್, ಪುಣೆ)*

# ಮರಾಠಿ ಕನ್ನಡ ಸ್ನೇಹವರ್ಧನ ಕೇಂದ್ರದ ವತಿಯಿಂದ

ಮರಾಠಿಗಳು ಹಾಗೂ ಕನ್ನಡಿಗರಲ್ಲಿಯ ಪರಸ್ಪರ ಸ್ನೇಹ ಸಂಬಂಧವನ್ನು ಸಾಹಿತ್ಯ, ಕಲೆ ಮತ್ತು ಸಾಮಾಜಿಕ ಸಂಪರ್ಕ - ಇವುಗಳ ಮೂಲಕ ಉಳಿಸಿ ಬೆಳೆಸಲೆಂದು, ೧೯೭೯ರ ಏಪ್ರಿಲ್ ತಿಂಗಳಲ್ಲಿ ಈ ಕೇಂದ್ರದ ಸ್ಥಾಪನೆಯಾಯಿತು.

ಆ ತಿಂಗಳಲ್ಲಿ ಜರುಗಿದ, ಮರಾಠೀ ಸಾಹಿತ್ಯಕಾರ ಶ್ರೀ ಪು.ಲ. ದೇಶಪಾಂಡೆ ಇವರ ಸತ್ಕಾರ ಸಮಾರಂಭವು ಕೇಂದ್ರದ ಪ್ರಥಮ ಕಾರ್ಯಕ್ರಮವೆನ್ನಬೇಕು. ಶ್ರೀ ಗಿರೀಶ ಕಾರ್ನಾಡರ ಅಧ್ಯಕ್ಷತೆಯಲ್ಲಿ ಜರುಗಿದ ಆ ವಿಶೇಷ ಕಾರ್ಯಕ್ರಮಕ್ಕೆ, ಮುಂಬಯಿ ಹಾಗೂ ಪುಣೆಯ ವಿಶ್ವವಿದ್ಯಾಲಯಗಳ ಕುಲಪತಿಗಳೂ, ನಮ್ಮವರೇ ಆದ ಡಾ. ಹಾ.ಮಾ. ನಾಯಕರೂ ಆಮಂತ್ರಿತರಾಗಿದ್ದರು. ಇದರ ಒಂದು ವಿಶೇಷ ಫಲಶ್ರುತಿ ಎಂದರೆ, ಕನ್ನಡ-ಮರಾಠಿ ಸಂಯುಕ್ತ ವಿಷಯಗಳ ಅಭ್ಯಸನಕ್ಕೆಂದು, ಪುಣೆ ವಿಶ್ವವಿದ್ಯಾಲಯದಲ್ಲಿ ಒಂದು ಪೀಠದ ನಿರ್ಮಾಣದ ಬೀಜಾರೋಪಣ.

ಮರುವರ್ಷ (೧೯೮೦) ಅದೇ ತಿಂಗಳಲ್ಲಿ ಕನ್ನಡ ಚಲನಚಿತ್ರಗಳ ರಸಗ್ರಹಣದ ಕಾರ್ಯಕ್ರಮವನ್ನು ರೂಪಿಸಲಾಗಿತ್ತು. ಅದಕ್ಕಾಗಿ ತಬರನ ಕಥೆ, ಬೆಟ್ಟದ ಹೂವು ಕನ್ನಡ ಚಿತ್ರಗಳನ್ನು ಪ್ರದರ್ಶಿಸಿ, ಅವುಗಳ ದಿಗ್ದರ್ಶಕರಾದ ಸರ್ವಶ್ರೀ ಗಿರೀಶ ಕಾಸರವಳ್ಳಿ, ಲಕ್ಷ್ಮೀನಾರಾಯಣರನ್ನು ಕರೆಯಿಸಿ, ಅವರಿಂದ ಆ ಚಿತ್ರಗಳ ಕಥಾಂಶಗಳನ್ನು ವಿವರಿಸಲಾಯಿತು.

ಗ್ರಂಥ ಪ್ರಕಟಣೆ ಕೇಂದ್ರದ ಇನ್ನೊಂದು ಪ್ರಮುಖ ಕಾರ್ಯರಂಗವಾಗಿದೆ. ಡಾ. ಕೃಷ್ಣ ಕೊಲ್ಹಾರ-ಕುಲಕರ್ಣಿಯವರ 'ಕಾಖಂಡಕಿಯ ಮಹಿಪತಿ-ರಾಯರು' ಎಂಬ ಸಂಶೋಧನ ಗ್ರಂಥವನ್ನು ಪ್ರಕಟಿಸಿದ್ದೇವೆ. ಎರಡನೆಯ ಗ್ರಂಥ ಕಾರಂತರ ಕಾದಂಬರಿಗಳನ್ನು ಕುರಿತದ್ದು. ಕಾರಂತರ ಆರು ಕಾದಂಬರಿಗಳು ಮರಾಠಿಗೆ ಅನುವಾದಗೊಂಡಿದ್ದು ಅವುಗಳ ಸವಿವರ ವಿಮರ್ಶೆಯನ್ನು ಪ್ರಾಧ್ಯಾಪಕ ಸುಧಾಕರ ದೇಶಪಾಂಡೆಯವರು ಮಾಡುತ್ತ ಬಂದರು. ಈ ಕನ್ನಡ ಕಾದಂಬರಿಗಳನ್ನು ಕುರಿತ ಮಹಾರಾಷ್ಟ್ರೀಯರ ದೃಷ್ಟಿಕೋನ ಏನೆಂಬುದನ್ನು ತೋರಿಸಿಕೊಡುವ ದೃಷ್ಟಿಯಿಂದ, ಆ ಮರಾಠೀ ವಿಮರ್ಶೆಗಳನ್ನು ಕೇಂದ್ರದ ಕಾರ್ಯದರ್ಶಿ

(ಶ್ರೀ ವಿರೂಪಾಕ್ಷ ಕುಲಕರ್ಣಿಯವರು) ಅನುವಾದಿಸಿಕೊಟ್ಟರು. ಈ ಪ್ರಕಟಣ ಕಾರ್ಯದಲ್ಲಿ ಪುತ್ತೂರಿನ ಕರ್ನಾಟಕ ಸಂಘದವರು ಜೊತೆಗೂಡಿದರು. ಈ ನಮ್ಮ ಮೂರನೆಯ ಪ್ರಕಟನ ಕಾಲಕ್ಕೆ ಪುತ್ತೂರಿನ ಬಳಿ ಇರುವ ಸುಬ್ರಹ್ಮಣ್ಯದ ಪ್ರಮತಿ-ಪ್ರಕಾಶನದವರು ಜೊತೆಗೂಡಿದುದಲ್ಲದೆ, ಪುತ್ತೂರಲ್ಲಿಯೆ ಈ ಗ್ರಂಥದ ಬಿಡುಗಡೆಯಾಗುತ್ತಿರುವುದು ಒಂದು ಯೋಗಾಯೋಗ.

ನಮ್ಮ ಇನ್ನೊಂದು ಹೆಮ್ಮೆಯ ಪ್ರಕಟನೆಯೆಂದು, ಶ್ರೀ ಗ.ಪ್ರ. ಪ್ರಧಾನರ 'ಸ್ವಾತಂತ್ರ್ಯದ ಮಹಾಭಾರತ'ವನ್ನು ಉಲ್ಲೇಖಿಸಬೇಕು. ನಮ್ಮ ನಿಯಮದ ಪ್ರಕಾರ ಈ ಗ್ರಂಥದ ಪ್ರಕಟಣೆಗೆ ಹುಬ್ಬಳ್ಳಿಯ ಸಾಹಿತ್ಯ ಪ್ರಕಾಶನದ ಸಹಯೋಗ ದೊರೆತಿದೆ.

ಕೇಂದ್ರದ ತೀರ ಇತ್ತೀಚಿನ ಒಂದು ಯೋಜನೆ ವಚನ ಸಾಹಿತ್ಯವನ್ನು ಕುರಿತದ್ದು. ಡಾ. ಪ್ರಭುಶಂಕರರಿಂದ ಸಂಪಾದಿತವಾದ 'ನೂರೊಂದು ವಚನ' ಗಳನ್ನು ಮರಾಠಿಗೆ ಪರಿವರ್ತಿಸಿ, ಪ್ರಕಟಿಸುವುದಲ್ಲದೆ ಕೆಲವು ವಚನಗಳನ್ನು ಹಾಡಿಸಿ ಆ ಕೇಸೆಟ್ಟನ್ನು ಗ್ರಂಥದ ಜೊತೆಗೇ ಕೊಡಲಾಗುವುದು.

ಹೀಗೆ ಕೇಂದ್ರದ ಕಾರ್ಯವಿಧಾನ ಇನ್ನೂ ಹಲವಾರು ದಿಕ್ಕುಗಳಲ್ಲಿ ಹೊರಹೊಮ್ಮಿದೆ. ಭಾಷಣ, ವಿಚಾರಸಂಕಿರಣಗಳಂತೂ ಸರಿಯೇ. ಕನ್ನಡೇತರರಿಗೆ ಕನ್ನಡವನ್ನು ಕಲಿಸುವ ಯೋಜನೆ ಕೂಡ ಸದ್ಯದಲ್ಲಿ ಕಾರ್ಯಗತವಾಗಲಿದೆ. ಕೇಂದ್ರವು ಜನ್ಮ ತಾಳಿ ಮೂರೇ ವರ್ಷಗಳಾಗಿದ್ದರೂ ಅದರ ಸಕ್ರಿಯವಾದ ಸಾಧನೆ ಮಹತ್ವಪೂರ್ಣವಾದದ್ದೆಂಬುದನ್ನು ಮನಗಂಡ, ಮುಂಬಯಿಯ ಕರ್ನಾಟಕ ಸಂಘವು, ಬಿ. ವರದರಾಜ ಆದ್ಯರ ಹೆಸರಿನ ಹತ್ತುಸಾವಿರ ರೂ.ಗಳ ಪುರಸ್ಕಾರ ವನ್ನು ನಮ್ಮ ಕೇಂದ್ರಕ್ಕೆ ತಾನಾಗಿ ಕೊಡಮಾಡಿದ್ದನ್ನೂ ಇಲ್ಲಿ ಕಾಣಿಸಬೇಕು.

ಪ್ರಸ್ತುತ ಗ್ರಂಥದ ಪ್ರಕಟಣೆಯೂ, ಮರಾಠಿ-ಕನ್ನಡ ಬಾಂಧವ್ಯವನ್ನು ಬೆಳೆಸುವ ನಮ್ಮ ಧ್ಯೇಯಕ್ಕನುಗುಣವಾಗಿಯೇ ಇದೆ. ಅದನ್ನು ನಮಗೆ ಕೊಡಮಾಡಿದ, ಸಂಪಾದಕ ಡಾ. ಶ್ರೀನಿವಾಸ ಹಾವನೂರರು, ನಮ್ಮ ಕೇಂದ್ರದ ಉಪಾಧ್ಯಕ್ಷರು; ಅರ್ಥಾತ್ ನಮ್ಮವರೇ. ಪ್ರಮತಿ-ಪ್ರಕಾಶನದವರು ಕಳೆದ ತಿಂಗಳು ಮಾತ್ರವೇ ಒಪ್ಪಿಕೊಂಡು ಮರು ತಿಂಗಳಲ್ಲಿಯೇ ಹೊರತರುತ್ತಿರುವು ದಂತೂ ವಿಶೇಷ ಶ್ಲಾಘನೀಯವಾಗಿದೆ. ಅವರಿಗೆ ನಮ್ಮ ವಿಶೇಷ ಕೃತಜ್ಞತೆಗಳು.

ಅ.ರಾ. ತೋರೋ
ಅಧ್ಯಕ್ಷ

ಕೃ.ಶಿ. ಹೆಗಡೆ
ಪ್ರಧಾನ ಕಾರ್ಯದರ್ಶಿ

# ಪ್ರಕಾಶಕರ ನುಡಿ

‘ವ್ಯಾಸಪರ್ವ’ ಪ್ರಮತಿ ಪ್ರಕಾಶನ ಮತ್ತು ಮರಾಠೀ ಕನ್ನಡ ಸ್ನೇಹವರ್ಧನ ಕೇಂದ್ರ – ಪುಣೆ – ಇವೆರಡರ ಗೆಳೆತನದ ಒಪ್ಪಿಗೆಯ ಅಪ್ಪುಗೆಯಾಗಿ ಹೊರಬರುತ್ತಿದೆ. ಈ ಕೇಂದ್ರದ ವಕ್ತಾರರು ಡಾ। ಶ್ರೀನಿವಾಸ ಹಾವನೂರರು. ಈ ಮಹನೀಯರು; ಮರಾಠಿ – ಕನ್ನಡ ಎಂದೇನು? ತಮ್ಮ ಸನಿಹ ಸುಳಿಯುವ ಎಲ್ಲರಲ್ಲೂ ಗೆಳೆತನದ ಬೆಳೆ ತೆಗೆಯಬಲ್ಲ ಮೈತ್ರೀಪುರುಷರು. ಹಾವನೂರರ ಸಲಹೆ; ಸೂಚನೆ; ಎಲ್ಲ ಹಂತಗಳಲ್ಲೂ ಅನನ್ಯ ಸಹಕಾರಕ್ಕೆ ಪ್ರಮತಿ ಪ್ರಕಾಶನ ತನ್ನ ಹೃತ್ಪೂರ್ವಕ ಕೃತಜ್ಞತೆ ಅರ್ಪಿಸುವುದು.

ಈ ಹೊತ್ತಿನ ಭಾರತದ ರಾಜಕೀಯ; ಸಾಮಾಜಿಕ ಪರಿಸರ ಎಷ್ಟು ಕೆಟ್ಟಿವೆ ಎಂದರೆ ನದಿಯ ನಿರ್ಮಲ ನೀರು ಎರಡು ರಾಜ್ಯಗಳಲ್ಲಿ ಹರಿದ ತಪ್ಪಿಗೆ ಈ ಎರಡೂ ನೆರೆರಾಜ್ಯಗಳ ಜನ ಪರಸ್ಪರರ ನೆತ್ತರು ಹರಿಯಿಸುತ್ತಿದ್ದಾರೆ. ಇಂಥಲ್ಲಿ ಎರಡು ರಾಜ್ಯ ಭಾಷೆಗಳ ನಡುವೆ ಕೆಳೆ ಬೆಳೆಯಿಸುವ ಕೆಲಸ ಎಂಥ ಅಮೂಲ್ಯ, ಮಾನವೀಯ ಕೆಲಸ ಎಂದು ಬೇರೆ ಹೇಳಬೇಕಿಲ್ಲ. ಇಂಥ ಕೆಲಸಗಳ ಪರಿಣಾಮ ನಿಧಾನವಾಗಿ ತೋರಿ ಬರುವಂಥದ್ದು. ಇಂಥ ಒಂದು ಕೆಲಸದಲ್ಲಿ ಪ್ರಮತಿ ಪ್ರಕಾಶನವೂ ಜತೆಗೂಡಿದೆ ಎನ್ನುವುದು ನಮಗೆ ನೆಮ್ಮದಿಯ ವಿಷಯವಾಗಿದೆ. ಮರಾಠೀ ಕನ್ನಡ ಸ್ನೇಹವರ್ಧನ ಕೇಂದ್ರದ ಎಲ್ಲ ಸದಸ್ಯರಿಗೆ ನಾವು ಅಭಿವಂದನೆ ಹೇಳುತ್ತೇವೆ.

“ಮಹಾಭಾರತ” ಮತ್ತು ‘ವ್ಯಾಸಪರ್ವ’ದ ಬಗೆಗೆ ಎರಡು ಮಾತುಗಳು.

ವ್ಯಾಸರ ಅದ್ಭುತ ಸೃಷ್ಟಿಯಾದ ‘ಮಹಾಭಾರತ’ ಭಾರತೀಯ ಮನಸ್ಸಿನ ಸಮಗ್ರ ಅಭಿವ್ಯಕ್ತಿಯಾಗಿದೆ. ಅದಕಾರಣವೇ ಲೌಕಿಕದಿಂದ ಹೊರಟು ಲೌಕಿಕದಲ್ಲೇ ಪರ್ಯವಸಾಯಿಯಾಗುವ ಅರ್ಥಪರಂಪರೆ ಮಾತ್ರ ಅಲ್ಲ, ಆಧ್ಯಾತ್ಮಿಕ ಸ್ತರದಲ್ಲಿ ಕೂಡ ಮಹಾಭಾರತದ ಅರ್ಥದ ಟಿಸಿಲುಗಳು ಒಡೆಯುತ್ತವೆ. ಹಾಗಾಗಿಯೇ ಮಹಾಭಾರತಕ್ಕೆ ಮತ್ತು ಮಹಾಭಾರತಕ್ಕೆ ಮಾತ್ರ ‘ಪಂಚಮೋವೇದಃ’ ಐದನೆಯ ವೇದ ಎಂಬ ಅಪೂರ್ವ ಪ್ರಶಸ್ತಿ. ಏಕೆಂದರೆ ವೇದಗಳಿಗೂ ಮೂರು ಸ್ತರಗಳಲ್ಲಿ ಅರ್ಥದ ಹಬ್ಬುಗೆ ನಡೆದಿದೆ. ಇದು ಭಾರತೀಯ ಸಂಸ್ಕೃತಿಗೇ ವಿಶಿಷ್ಟವಾದ ಸಂಗತಿ.

ಸಂಸ್ಕೃತ ಭಾಷೆ ಜಗತ್ತಿನ ಎಲ್ಲ ಭಾಷೆಗಳಿಗಿಂತ ಹೆಚ್ಚಿನ ಶಬ್ದಸಂಪತ್ತನ್ನು ಪಡೆದ ಭಾಷೆಯಾಗಿರುವಾಗಲೂ ಈ ಭಾಷೆಯಲ್ಲಿ ಮಾತ್ರ ಒಂದು ವಾಕ್ಯಕ್ಕೆ ಎರಡು ಸ್ತರಗಳಲ್ಲಿ, ಮೂರು ಸ್ತರಗಳಲ್ಲಿ ಅರ್ಥ ವಿಸ್ತೃತಿ ನಡೆದಿದೆ.

ಇದು ಯಾವುದನ್ನು ಸೂಚಿಸುತ್ತದೆ?

ಅಭಿವ್ಯಕ್ತಿಯ ಹಂತದಲ್ಲಿ ನಿಂತು ನೋಡಿದರೆ ಅಸ್ತಿತ್ವಕ್ಕೆ ಅನೇಕ ಮುಖದ ಅಭಿವ್ಯಕ್ತಿಗಳಿವೆ. ಅಂತರಂಗದ ಕಡೆಗೆ ಹೊರಳಿ ನೋಡಿದರೆ ಈ ಎಲ್ಲ ಅಭಿವ್ಯಕ್ತಿಯ ಮೂಲದಲ್ಲಿರುವ ಅಸ್ತಿತ್ವದ ಪ್ರೇರಣೆ ಒಂದೇ ಆಗಿರುತ್ತದೆ. ಈ ವಿಶಿಷ್ಟ ಸಂಗತಿಯ ಕಡೆಗೆ ಗಮನವಿಡದಿದ್ದಲ್ಲಿ, ನಮಗೆ ಭಾರತೀಯ ಸಂಸ್ಕೃತಿಯ ಸೃಷ್ಟಿಶೀಲತೆಯ ರಹಸ್ಯ ತಿಳಿಯಲಾರದೆಂದು ಅನಿಸುತ್ತದೆ. ಆದುದರಿಂದಲೇ ಒಂದು ಕಾಲ ಖಂಡದಲ್ಲಿ ಒಂದು ಸ್ತರದ ಮೇಲೆ, ಅಭಿವ್ಯಕ್ತಿಯ ಒಂದು ಮುಖದ ಮೇಲೆ ಒತ್ತು ಬಿದ್ದಾಗ, ಇನ್ನೊಂದು ಕಾಲಖಂಡದಲ್ಲಿ ಇನ್ನೊಂದು ಸ್ತರದ ಮೇಲೆ ಬೆಳಕು ಚೆಲ್ಲಲ್ಪಡುತ್ತದೆ.

ಕನ್ನಡದ ಸಂದರ್ಭವನ್ನೆ ಗಮನಿಸಿ.

ಕನ್ನಡದ ಆದಿಕವಿ ಪಂಪ, 'ಮಹಾಭಾರತ'ವನ್ನು "ವ್ಯಾಸಮುನೀಂದ್ರ ರುಂದ್ರವಚನಾಮೃತ ವಾರ್ಧಿ"ಯನ್ನು 'ವಿಕ್ರಮಾರ್ಜುನವಿಜಯ'ದ ಅಲೆಗಳಾಗಿ ಪರಿವರ್ತಿಸಿದ. ಪಂಪನ ಒತ್ತು ಸ್ಪಷ್ಟವಾಗಿ ಲೌಕಿಕ ಸ್ತರದ ಮೇಲೆ. "ಬೆಳಗುವೆನಿಲ್ಲಿ ಲೌಕಿಕಮಂ" ಎಂದೇ ಆತನ ಉದ್ಘೋಷ. ಇದಾಗಿ ಸುಮಾರು ಐದು ಶತಕಗಳಾದ ಮೇಲೆ ಕನ್ನಡದ ಮತ್ತೊಬ್ಬ ಮಹಾಕವಿ ಕುಮಾರವ್ಯಾಸ ಅದೇ ವ್ಯಾಸಭಾರತವನ್ನು ಮತ್ತೆ ಕನ್ನಡಿಸಿದ. ಎಂಥ ವಿಚಿತ್ರ! ಈ ಮಹೋನ್ನತ ಕವಿಯ ಒತ್ತು ಆಧ್ಯಾತ್ಮಿಕ ಸ್ತರದ ಮೇಲೆ. "ತಿಳಿಯಹೇಳುವೆ-ಕೃಷ್ಣಕಥೆಯನು" ಎನ್ನುವ ಕುಮಾರವ್ಯಾಸನಿಗೆ ಭಾರತ; ಭಗವಂತನಾದ ಕೃಷ್ಣವಾಸುದೇವನ ಲೀಲಾವಿಹಾರ.

ಪಂಪನ ಅನಂತರ ಮತ್ತು ಕುಮಾರವ್ಯಾಸನಿಗಿಂತ ಮೊದಲು ಇದೇ ಕನ್ನಡದ ಭಾಗವಾದ ತುಳು ನೆಲದಲ್ಲಿ ಮತ್ತೊರ್ವ ಹಿರಿಯ ದಾರ್ಶನಿಕ ಮೈದಳೆದಿದ್ದಾರೆ ಮತ್ತು ಮಹಾಭಾರತವನ್ನು "ಏವಂ ಆಧ್ಯಾತ್ಮನಿಷ್ಠಂ ಹಿ ಭಾರತಂ ಸರ್ವ ಮುಚ್ಯತೇ" – ಹೀಗೆ ಭಾರತವೆಲ್ಲ ಆಧ್ಯಾತ್ಮಿಕ ಅರ್ಥಗಳಿಂದ ತುಂಬಿಬಿಟ್ಟಿದೆ - ಎಂದು ಘೋಷಿಸಿದ್ದಾರೆ. ಅವರೇ ಆಚಾರ್ಯ ಮಧ್ವ. ಇದು ಆಕಸ್ಮಿಕವೆಂದು ಕಂಡರೂ ಆಕಸ್ಮಿಕವಲ್ಲದ, ಭಾರತದ ಇತಿಹಾಸದಲ್ಲಿ ಮತ್ತೆ ಮತ್ತೆ ಮರುಕಳಿಸುವ ವಿದ್ಯಮಾನ.

ಇಂಥ ಅನೇಕಾರ್ಥಸಮೃದ್ಧವಾದ ಮಹಾಭಾರತವನ್ನು ಶ್ರೀಮತಿ ದುರ್ಗಾ ಭಾಗವತ ಸಂಶೋಧನೆಯ ವೈದುಷ್ಯದಿಂದ ನೋಡಿದ್ದಾರೆ. ವಿಮರ್ಶಾತ್ಮಕವಾಗಿ ನೋಡಿದ್ದಾರೆ. ಎಲ್ಲಕ್ಕಿಂತ ಹೆಚ್ಚು, ಸ್ತ್ರೀಸಹಜ ಮೃದುಕೋಮಲ ಅಂತಃಕರಣದಿಂದ ಮತ್ತು ಈ ಅಂತಃಕರಣಕ್ಕೆ ಮಾತ್ರ ಹೊಳೆಯುವ ಅಪೂರ್ವ ಒಳನೋಟಗಳಿಂದ ನೋಡಿದ್ದಾರೆ. ಅದುಕಾರಣವೇ ಈ ಬರಹ ಕಾವ್ಯಗುಣದಿಂದ ಚೇತೋಹಾರಿ ಯಾಗಿದೆ. ಹಾಗೆಂದು ಇಲ್ಲಿ ಪ್ರಕಟವಾದ ಅಭಿಪ್ರಾಯಗಳಿಗೆ ಭಿನ್ನಮತ, ಕನಿಷ್ಠ ಇಲ್ಲಿ ಕಾಣಸದ ಇನ್ನೊಂದು ಮುಖ ಇರುವುದು ಸಾಧ್ಯ. ಅದು ಸಹಜ ಕೂಡ. ಉದಾಹರಣೆಗೆ ಒಂದನ್ನು ಗಮನಿಸಬಹುದು.

ದ್ರೌಪದಿ ಮತ್ತು ಕೃಷ್ಣರ ಸಂಬಂಧದಲ್ಲಿ ಅನುಕ್ತವಾದ ಒಂದು ಎಳೆ; ಎಷ್ಟು ತೆಳುವಾಗಿಯಾದರೂ, ಇದೆ ಮತ್ತು ಈ ಎಳೆ ಭಕ್ತಿ ಮತ್ತು ಸಖ್ಯಭಾವಗಳಿಗೆ ಹೊರತಲ್ಲದೆಯೇ, ಪ್ರಣಯದ ಮೃದು ಗಂಧದಿಂದ ಪರಿಮಳಿತವಾಗಿದೆ ಎಂದು ದುರ್ಗಾ ಭಾಗವತ ಊಹಿಸುತ್ತಾರೆ. ಈ ಊಹೆ ತನ್ನಷ್ಟಕ್ಕೆ ತಾನೇ ಚೆಲುವಾಗಿದೆ, ಕಾವ್ಯಮಯವಾಗಿದೆ. ಆದರೆ ಮಹಾಭಾರತದಲ್ಲಿ ಇದಕ್ಕೆ ಆಧಾರ ಸಾಲದು ಎಂದು ನಾವು ತಿಳಿಯುತ್ತೇವೆ. "ಕೃಷ್ಣ, ನನಗೆ ನೀನೂ ಇಲ್ಲವೋ" ಎಂಬ ದ್ರೌಪದಿಯ ಮಾತಿನಲ್ಲಿರುವುದು ನಿಸ್ಸಂಶಯವಾಗಿ ಆರ್ತತೆ. ವಸ್ತ್ರಾಪಹರಣದ ಕಾಲದಲ್ಲಿ ಅವಳ ಮೊರೆಯನ್ನು ಕೇಳಿದವನು ಕೃಷ್ಣ ಮತ್ತು ಕೃಷ್ಣನೊಬ್ಬನೇ. ಆದುದರಿಂದಲೇ ಅವನನ್ನು, ವನವಾಸದಲ್ಲಿ ಕಂಡಾಗ ದ್ರೌಪದಿಯ ದುಃಖದ ಕಟ್ಟೆಯೊಡೆಯುತ್ತದೆ. ಕೃಷ್ಣನ ಮುಂದೆ ಮಾತ್ರ ಆಕೆ ಮುಕ್ತವಾಗಿ ಅಳುವುದು ಸಾಧ್ಯ.

ಕೃಷ್ಣನು ಕೆಲಮಟ್ಟಿಗೆ ಮೂರ್ತಿಮಂತ ಅರ್ಜುನನೇ ಆಗಿದ್ದನು ಎಂಬ ಮಾತಾದರೂ ಕೃಷ್ಣಾರ್ಜುನರ ಗೆಳೆತನದ ಗಾಢತೆಯನ್ನು ಸೂಚಿಸುವ ಮಾತಾಗಿಯೇ ಕಾಣುತ್ತದೆ. ಹಾಗಾದರೆ "ಪಾಂಡವಾನಾಂ ಧನಂಜಯಃ" ಎಂಬ ಮಾತೇ ಇದೆಯಲ್ಲ. ಅದು ಯಾವುದನ್ನು ಸೂಚಿಸುತ್ತದೆ ಎನ್ನೋಣ? ಇದಿರಲಿ. ಕರ್ಣನ ಬಳಿ ಕೃಷ್ಣ "ನೀನು ನಮ್ಮತ್ತ ಬಂದರೆ ದ್ರೌಪದಿ ನಿನ್ನನ್ನು ವರಿಸಬಹುದು" ಎಂದ ಮಾತನ್ನು ತನ್ನ ಊಹೆಗೆ ಆಧಾರವಾಗಿ ಒದಗಿಸುವುದು ಸ್ಪಷ್ಟವಾಗಿ ಅನನ್ವಯ.

ಶ್ರೀಮತೀ ದುರ್ಗಾ ಭಾಗವತರು ಹೀಗೆ ಊಹಿಸುವುದಕ್ಕೂ ಕಾರಣಗಳಿವೆ. ಮೊದಲನೆಯದು ಕೃಷ್ಣ ದ್ರೌಪದಿಗೆ ಮೈದುನನಾಗುತ್ತಾನೆ ಎಂಬ ಅವರ ಮಾತು. ಇದಕ್ಕೆ ಕಾರಣ ಸೋದರತ್ತೆಯ ಮಕ್ಕಳನ್ನು 'ಭಾವ' ಎಂಬ ಸಂಬಂಧದಿಂದಲ್ಲದೆ ಅಣ್ಣತಮ್ಮಂದಿರೆಂಬ ಭಾವದಿಂದ ಕರೆವ ಮಹಾರಾಷ್ಟ್ರೀಯ ಸಂಪ್ರದಾಯ. ಆದರೆ ಇದಕ್ಕೆ ವ್ಯಾಸರಲ್ಲಿ ಪುಷ್ಟಿ ಇಲ್ಲ. ಹಾಗಾದರೆ ತನ್ನ ತಂಗಿ ಸುಭದ್ರೆಯನ್ನು ಕೃಷ್ಣ

ಅರ್ಜುನನಿಗೆ ಮದುವೆ ಮಾಡಿಸಿದನಲ್ಲ - ಅದಕ್ಕೇನರ್ಥ? ಎರಡನೆಯದು ಮಹಾಭಾರತೋತ್ತರ ಕಾಲದಲ್ಲಿ ಭಕ್ತಿಪಂಥ ಅಸಾಧಾರಣವಾಗಿ ಬೆಳೆದ ಬಗೆ. ಸ್ತ್ರೀಪುರುಷ ಸಂಬಂಧದ ಎಲ್ಲ ಲೌಕಿಕ ಭಾವಗಳೂ ಭಕ್ತಿಭಾವಗಳಾಗಿ ರೂಪಾಂತರಗೊಂಡ ಅದ್ಭುತ, ಮೀರಾ; ಆಂಡಾಳ್; ಅಕ್ಕಮಹಾದೇವಿ ಮುಂತಾದ ಭಕ್ತೆಯರ ಕಾವ್ಯಗಳಲ್ಲಿ ದಾಖಲಾಗಿದೆ. ಈ ಹಿನ್ನೋಟದಲ್ಲಿ ದುರ್ಗಾ ಭಾಗವತ ಊಹಿಸುತ್ತಾರೆ. ಮೂರನೆಯದು ಕೃಷ್ಣನ ವ್ಯಕ್ತಿತ್ವ. ಇಡಿಯ ಭಾರತೀಯ ವಾಙ್ಮಯದಲ್ಲಿ ಸ್ತ್ರೀಯರ ಅಂತರಾಳವನ್ನು; ಹೃದಯವನ್ನು; ಸಮಗ್ರ ವ್ಯಕ್ತಿತ್ವವನ್ನು ಅರ್ಥಮಾಡಿಕೊಂಡ ಒಂದು ಪಾತ್ರ ಕೃಷ್ಣನಲ್ಲದೆ ಇನ್ನೊಂದಿಲ್ಲ. ಕೃಷ್ಣನನ್ನು ಮೊರೆ ಇಟ್ಟಾಗ ದ್ರೌಪದಿ ಬಳಸುವ ವಿಶೇಷಣವನ್ನು ನೋಡಿ. "ಗೋವಿಂದ ದ್ವಾರಕಾವಾಸಿನ್ ಕೃಷ್ಣ ಗೋಪೀಜನಪ್ರಿಯ". ಗೋಪೀಜನಪ್ರಿಯ ಎಂದಲ್ಲಿ ಹೆಣ್ಣಿನ ನೋವುನಲಿವುಗಳಿಗೆ ಮಿಡಿಯುವವನು ನೀನೊಬ್ಬನೇ ಅಲ್ಲವೆ ಎಂಬುದಲ್ಲವೆ ಧ್ವನಿ?

ಆದುದರಿಂದ, ಕೃಷ್ಣ ದ್ರೌಪದಿಯರ ಸಂಬಂಧ ಭಕ್ತಿಪ್ರವಣವಾದ ಸಂಬಂಧ, ಹಾಗಾಗಿಯೇ ಇಲ್ಲಿನ ಆಧ್ಯಾತ್ಮಿಕ ಸ್ತರವನ್ನು, ಸ್ವರವನ್ನು ಗಮನಿಸದೆ ಇರಲಾಗದು ಎಂಬುದಷ್ಟೆ ನಮ್ಮ ವಿನಮ್ರವಾದ ಅಭಿಮತ. ಈ ಕೃತಿ ವ್ಯಾಸರನ್ನು ಕುರಿತ ಇನ್ನಷ್ಟು ಜಿಜ್ಞಾಸೆಗೆ ಕಾರಣವಾಗಲಿ ಎಂದು ನಾವು ಕಳಕಳಿಯಿಂದ ಅಪೇಕ್ಷಿಸುತ್ತೇವೆ.

ಇಂಥ ಒಂದು ಕೃತಿಯನ್ನು ಕನ್ನಡದಲ್ಲಿ ಅನುವಾದಿಸಲು ಒಪ್ಪಿಗೆಯಿತ್ತ ಮೂಲ ಲೇಖಕಿ ಶ್ರೀಮತಿ ದುರ್ಗಾ ಭಾಗವತರಿಗೆ, ಅನುವಾದಿಸಿದ ಹಿರಿಯರಾದ ಶ್ರೀ ಗೌರೀಶ ಕೈಕಿಣಿ ಹಾಗೂ ಸಹಾಯವಿತ್ತ ಶ್ರೀ ಕೆ.ಜಿ. ನಾರಾಯಣ ಪ್ರಸಾದರಿಗೆ, ಮುದ್ರಣದ ಕೆಲಸವನ್ನು ಮಿಂಚಿನಂತೆ, ಅದೂ ಸರ್ವಾಂಗಸುಂದರವಾಗಿ, ಮುಗಿಸಿ ನಮ್ಮನ್ನು ದಂಗುಬಡಿಸಿದ ಶೋಭಾ ಪ್ರೋಸೆಸ್ ಪ್ರಿಂಟರ್ಸ್‌ನ ಶ್ರೀ ಎಂ.ಎಸ್. ರಘುನಾಥರಾವ್ ಹಾಗೂ ಬಳಗದವರಿಗೆ, ಮುಖಪುಟವನ್ನು ವಿನ್ಯಾಸಮಾಡಿದ ನಮ್ಮ ನಡುವಿನ ಸೃಜನಶೀಲ ಕಲಾವಿದ ಗೆಳೆಯ ಮೋಹನಸೋನರಿಗೆ - ನಾವು ಆತ್ಯಂತಿಕವಾಗಿ ಋಣಿಗಳಾಗಿದ್ದೇವೆ.

ಪ್ರಕಾಶಕರು
ಪ್ರಮತಿ ಪ್ರಕಾಶನ, ಸುಬ್ರಹ್ಮಣ್ಯ

# ದುರ್ಗಾಭಾಗವತ

"ಧೀಮತಾಂ ನಾಸ್ತಿ ಕಶ್ಚಿತ್ ಅವಿಷಯೋ ನಾಮ" ಎಂಬ ಉಕ್ತಿಯಂತೆ ವ್ಯಾಸಂಗವನ್ನು ನಡೆಸುತ್ತಿರುವ ಶ್ರೀಮತಿ ದುರ್ಗಾಬಾಯಿ ಭಾಗವತರೆಂದರೆ ಮರಾಠಿ ಸಾಹಿತ್ಯ ವಿಶ್ವದಲ್ಲಿಯ ಒಂದು ಅದ್ವಿತೀಯ ವ್ಯಕ್ತಿತ್ವ. ಇಂದು ಎಪ್ಪತ್ತೈದನೆಯ ವಯಸ್ಸಿನ ಹೊಸಿಲನ್ನು ದಾಟಿದ ದುರ್ಗಾಬಾಯಿಯವರ, ಮರಾಠಿ ಮನಸ್ಸಿನಲ್ಲಿಯ ಮಾನಸಿಕ ಪ್ರತಿಮೆಯಿದ್ದುದು, ಯುಯುತ್ಸು ತೇಜಸ್ವಿನಿಯದು. *[ಜನ್ಮ, ೧೦ ಫೆಬ್ರವರಿ ೧೯೧೦]*

*ದುರ್ಗಾಬಾಯಿಯವರ ಇಂದಿನ ವರೆಗಿನ ಬಾಳ ಪಯಣದಲ್ಲಿ ಎರಡು ಭಿನ್ನ ಪ್ರೇರಣೆಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಮನೆಯಲ್ಲಿ ಇಲ್ಲವೆ ಗ್ರಂಥಾಲಯದಲ್ಲಿ ಗಂಟೆಗಟ್ಟಲೆ ಕುಳಿತುಕೊಂಡು ಅವರು ಯಾವುದಾದರೊಂದು ವಿಷಯದ ಮೇಲೆ ವರ್ಷಾನುಗಟ್ಟಲೆ ಸಾಕಷ್ಟು ವಾಚನ ಮನನಗಳನ್ನಾದರೂ ಮಾಡುತ್ತ ಇರುತ್ತಾರೆ; ಇಲ್ಲವೆ ದಿವಸಗಟ್ಟಲೆ, ಸಂಪನ್ನ ಜೀವನದ ಮತ್ತು ನಿಸರ್ಗದ ಸಾನ್ನಿಧ್ಯದಲ್ಲಿ, ಮನಃಪೂರ್ವಕವಾಗಿ, ಸ್ವಾರಸ್ಯದಿಂದ, ಬಿಚ್ಚುಮನಸ್ಸಿನಿಂದ ಅಲೆದಾಡುತ್ತಿರುತ್ತಾರೆ. ಈ ಎರಡೂ ಪ್ರೇರಣೆಗಳು ಒಂದುಗೂಡಿ ಅವರ ಲೇಖನವು ರೂಪುಗೊಂಡಾಗ, ಮಹಾರಾಷ್ಟ್ರದ ಬೌದ್ಧಿಕ ಜಗತ್ತಿನ ಅನೇಕ ಪರಂಪರೆಗಳೊಂದಿಗೆ, ವಿಚಾರಧಾರೆಗಳೊಂದಿಗೆ ಅವರ ನಂಟು ಇದ್ದರೂ ಅದು ಎಂದಿಗೂ ಹೊಚ್ಚ ಹೊಸದಾಗಿ, ಹುರುಪಿನಿಂದ, ಹುಲುಸಾಗಿ ಹೊರಬರುತ್ತದೆ. ಕಳೆದ ಐವತ್ತು ವರ್ಷಗಳಿಂದ ಸಂವೇದನಾ ಶೀಲತೆಯಿಂದ ಸ್ವಾನುಭವವನ್ನು ಎದುರಿಸುವ ಅವರ ಆಲೋಚನಾ ಶಕ್ತಿಯು, ಮರಾಠಿ ರಸಿಕ ವಾಚಕರಿಗೆ ವಿಶೇಷ ಪ್ರಭಾವಶಾಲಿಯಾಗಿಯೂ ಚಿತ್ತಾಕರ್ಷಕವಾಗಿಯೂ ಕಂಡುಬಂದಿದೆ. ವಾಚಕರ ದೃಷ್ಟಿಯಲ್ಲಿ, ಒಂದೊಂದು ವಿಷಯದಲ್ಲೂ ಆಸಕ್ತಿ ತೋರಿಸಿ ವರ್ಷಾನುಗಟ್ಟಲೆಯಿಂದ ಅದರಲ್ಲಿ ಮಗ್ನವಾಗಿರುವ ಪ್ರವೃತ್ತಿಯ ಇನ್ನೊಂದು ಹೆಸರು ದುರ್ಗಾಬಾಯಿ ಭಾಗವತ.*

*ಲೇಖನ ವಾಚನಗಳಲ್ಲಿ ಬಹಳವಾಗಿ ತೊಡಗಿರುವ ಹವ್ಯಾಸವು ಅವರಿಗೆ ಶಾಲಾದಿನಗಳಿಂದಲೇ ವಾಡಿಕೆಯಾಗಿ ಬಿಟ್ಟಿತ್ತು. ಕಾಲೇಜಿನಲ್ಲಿ ಕಲಿಯುವಾಗಲೇ ರವೀಂದ್ರನಾಥ ಠಾಕೂರರ ಗೀತಾಂಜಲಿಯನ್ನು ಇಂಗ್ಲಿಷಿನಿಂದ ಸಂಸ್ಕೃತಕ್ಕೆ ಅವರು ಅನುವಾದಿಸಿದರು. ಆದರೆ ಈ ಅನುವಾದವನ್ನು ಬಂಗಾಲಿ ಮೂಲವನ್ನು*

ನೋಡಿಯೇ ಮಾಡಿದ್ದರೆ ಚೆನ್ನಾಗಿತ್ತೆಂದು ಚಿಂತಿಸಿದ ಅವರು, ಒಳ್ಳೆಯ ಸಾಹಿತ್ಯವನ್ನು ಮೂಲಭಾಷೆಯಲ್ಲೇ ಓದಬೇಕೆಂದು ಅವರು ಬೇರೆ ಬೇರೆ ಭಾಷೆಗಳನ್ನು ಕಲಿಯಹತ್ತಿದರು. ಈಗ ಅವರು ಇಂಗ್ಲಿಷ್, ಮರಾಠಿ, ಸಂಸ್ಕೃತ ಮತ್ತು ಪಾಲಿ ಇವುಗಳ ಜೊತೆಗೆ, ಬಂಗಾಳಿ, ಹಿಂದಿ, ಗುಜರಾತಿ ಭಾಷೆಗಳನ್ನೂ ತಿಳಿದುಕೊಂಡಿದ್ದಾರೆ. ಅಷ್ಟೇ ಅಲ್ಲ ಇನ್ನೆಷ್ಟೋ ಭಾಷೆಗಳ ಪ್ರಾಥಮಿಕ ಜ್ಞಾನವೂ ಅವರಿಗಿದೆ. ತುರ್ತುಪರಿಸ್ಥಿತಿ (೧೯೭೭) ಮುಗಿದೊಡನೆ ನಡೆದ ಚುನಾವಣೆಯ ಸಭೆಗಳಲ್ಲಿ ಮಾತಾಡುವಾಗ ವಿವಿಧ ಪ್ರಾಂತಗಳಲ್ಲಿ ಅವರು ಅಲ್ಲಿಯ ಸ್ಥಳೀಯ ಭಾಷೆಗಳಲ್ಲಿಯೇ ಮಾತಾಡಿದ್ದಾರೆ. ಕರ್ನಾಟಕದಲ್ಲಿ ಕನ್ನಡದಲ್ಲಿಯೂ!

ಆದ್ಯಶಂಕರರ ಪ್ರಸ್ಥಾನತ್ರಯಿಯ ಮೇಲಿನ ಭಾಷ್ಯವು ಕಾಲೇಜಿನ ದಿನಗಳಲ್ಲೇ ಅವರ ಓದಿಗೆ ಬಂತು. ಅದರಲ್ಲಿಯ ಸಿದ್ಧಾಂತಗಳ ಬಗ್ಗೆ ಮನಸ್ಸಿನಲ್ಲಿ ಹುಟ್ಟಿದ ಅನೇಕ ಸಂದೇಹಗಳ ನಿರಸನವನ್ನು ಮಾಡಿಕೊಳ್ಳಲು ದುರ್ಗಾಬಾಯಿಯವರು ಬೌದ್ಧ ಧರ್ಮದ ಅಭ್ಯಾಸದ ಕಡೆಗೆ ಹುಮ್ಮಸಿನಿಂದ ಹೊರಳಿದರು. ಎಂ.ಎ. ಸಲುವಾಗಿ *Early Buddhist Jurisprudence* ಎಂಬ ವಿಷಯದ ಮೇಲೆ ಪ್ರಬಂಧ ಬರೆದು ಪದವಿಯನ್ನು ಸಂಪಾದಿಸಿದರು. ಆಕ್ಸ್‌ಫರ್ಡ್-ಕೇಂಬ್ರಿಜ್‌ಗಳಲ್ಲಿಯ ಪ್ರಾಚ್ಯ ವಿದ್ಯಾವಿಶಾರದರೂ ಈ ಪ್ರಬಂಧವನ್ನು ಗೌರವಿಸಿದ್ದಾರೆ. ಎಂ.ಎ. ಆದ ನಂತರ ಡಾಕ್ಟರೇಟ್ ಸಲುವಾಗಿ ಅವರು ಆಯ್ದುಕೊಂಡ ವಿಷಯವು ಅವರ ಪರಿಭ್ರಮಣ ವೃತ್ತಿಗೆ ಸಾಕಷ್ಟು ಪ್ರೋತ್ಸಾಹ ನೀಡುವಂತಿತ್ತು. *Synthesis of Hindu and tribal Cultures of the Central Provinces of India* – ಈ ವಿಷಯವನ್ನು ಅಭ್ಯಸಿಸುವಾಗ ದುರ್ಗಾಬಾಯಿಯವರು ಮಧ್ಯಪ್ರದೇಶದ ನಾಡು-ಕಾಡುಗಳಲ್ಲಿ ಆರು ವರ್ಷ ಎಡೆಬಿಡದೆ ಸುತ್ತಾಡಿದರು. ಅಲ್ಲಿಯ ವಸತಿಗಳಲ್ಲಿಯೇ ವಾಸಿಸಿ ಅಲ್ಲಿಯ ಜನಜೀವನವನ್ನು ಅಭ್ಯಾಸಿಸಿದರು. ಅಪರಿಚಿತ ಭಾಷೆ ಸಂಸ್ಕೃತಿಗಳ ಪರಿಚಯ ಮಾಡಿಕೊಳ್ಳುವಾಗ ಸಹಜವಾಗಿಯೇ ಗ್ರಹ-ಪೂರ್ವಗ್ರಹಗಳನ್ನು ಮೀರಿದ ಒಂದು ಸ್ವತಂತ್ರ ದೃಷ್ಟಿಯು ಅವರಲ್ಲಿ ರೂಪುಗೊಂಡಿತು. ಇದರಿಂದಾಗಿ ಕೈಗೆ ದೊರಕಿದ ಸಿದ್ಧಾಂತಗಳನ್ನು ಪ್ರಬಂಧದ ರೂಪದಲ್ಲಿ ಸಾದರಪಡಿಸುವಾಗ ಮಾರ್ಗದರ್ಶಕ ಪ್ರಾಧ್ಯಾಪಕರೊಂದಿಗೇ ತಾತ್ವಿಕ ಮತಭೇದಗಳುಂಟಾದವು. ಪಟ್ಟುಹಿಡಿಯುವ ಪ್ರವೃತ್ತಿಯ ದುರ್ಗಾಬಾಯಿಯವರು ಪದವಿಗಾಗಿ ಪ್ರಬಂಧವನ್ನೇ ಕಳುಹಿಸಲಿಲ್ಲ. ತಾವು ಮಾಡಿದ ಅಭ್ಯಾಸವನ್ನು ಕೆಲವು ಕಾಲಾನಂತರದಲ್ಲಿ ಹೊರದೇಶದ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದರು. ಇದರಿಂದ, ವಿದ್ವತ್‌ಕ್ಷೇತ್ರದ ಅಂತಾರಾಷ್ಟ್ರೀಯ ಮಾನ್ಯತೆಯು ಅವರೆಡೆಗೆ ತಾನಾಗಿಯೇ ನಡೆದು ಬಂತು.

ಮಧ್ಯಪ್ರದೇಶದ ಕಾಡಿನಲ್ಲಿಯ ದೀರ್ಘವಾಸ್ತವ್ಯವು ಮಾತ್ರ ನಾಜೂಕು ಪ್ರಕೃತಿಯ ಅವರಿಗೆ ತ್ರಾಸದಾಯಕವಾಯಿತು. ಒಮ್ಮೆ ವಿಷಪೂರಿತ ಗೆಡ್ಡೆಯೊಂದನ್ನು ಸೇವಿಸಿದ್ದರಿಂದ ಉಂಟಾದ ನಂಜಿನ ಬಾಧೆಯಿಂದ, ಅಷ್ಟ

ತಾರುಣ್ಯದಲ್ಲೇ ಎಷ್ಟೋ ತಿಂಗಳವರೆಗೆ ಹಾಸಿಗೆಯಲ್ಲೇ ಬಿದ್ದಿರಬೇಕಾಯಿತು. ಆದರೆ ಈ ಕಾಲದಲ್ಲೇ 'ಋತುಚಕ್ರ'ವೆಂಬ ಒಂದು ಅಸಾಧಾರಣ ಮರಾಠಿ ಕೃತಿಯನ್ನು ರಚಿಸಿದರು. ಅನೇಕ ಘಟಕಗಳ ಜರಾಮರಣಗಳಿಂದುಂಟಾಗುವ ಸೃಷ್ಟಿಯ ಸಾತತ್ಯ ವನ್ನು ಹಾಸಿಗೆಯ ಬಳಿಯ ಕಿಟಕಿಯಿಂದ ಅವರು ಕಂಡುಕೊಳ್ಳುವಂತಾಯಿತು.

ಇಂದು ದುರ್ಗಾಬಾಯಿಯವರ ಹೆಸರಿನಲ್ಲಿ ಮರಾಠಿ ಮತ್ತು ಇಂಗ್ಲಿಷಿನಲ್ಲಿ ಒಟ್ಟಾರೆ ಇಪ್ಪತ್ತೇಳು ಕೃತಿಗಳು ಪತ್ತು ಅನುವಾದ ಸಂಪುಟಗಳು, ವಿವಿಧ ಭಾಷೆಗಳ ಜಾನಪದ ಕತೆಗಳ ಅನೇಕ ಸಂಗ್ರಹಗಳು – ಹೀಗೆ ಸಾಕಷ್ಟು ಹಿರಿದಾದ, ವೈವಿಧ್ಯ ಪೂರ್ಣವಾದ ಸಾಹಿತ್ಯ ಸಂಪತ್ತಿದೆ. ಇತಿಹಾಸ, ಧರ್ಮ, ಜೀವನ, ಸಮಾಜಶಾಸ್ತ್ರ, ಭಾಷಾಶಾಸ್ತ್ರ, ಮಾನವಶಾಸ್ತ್ರ, ವ್ಯಾಕರಣ, ಜಾನಪದ ಸಾಹಿತ್ಯ, ನಾಗರ ಸಾಹಿತ್ಯ, ಸಾಹಿತ್ಯ ಸಮೀಕ್ಷೆ ಇತ್ಯಾದಿ ಅನೇಕ ವಿಧದ ವಿಷಯುಗಳು ಅವರ ಬರವಣಿಗೆಯಲ್ಲಿ ಸಮಾವೇಶಗೊಂಡಿವೆ. ಸ್ವತಂತ್ರ ಲಲಿತ ಲೇಖನ ಕೃಷಿಯನ್ನು ಮಾಡುತ್ತಿರುವಾಗಲೇ ಸಂಕಲನ, ಸಂಪಾದನೆ, ಅನುವಾದಗಳನ್ನೂ ಮಾಡುವುದು ಅವರಿಗೆ ಕೀಳೆನಿಸಲಿಲ್ಲ. ಇತ್ತೀಚೆಗೆ ಅವರು ಬಾಣನ ಪ್ರಸಿದ್ಧ ಕೃತಿಯಾದ 'ಕಾದಂಬರಿ'ಯನ್ನು ಮರಾಠಿಗೆ ಅನುವಾದಿಸಿದ್ದಾರೆ.

ಅವರ 'ಋತುಚಕ್ರ', 'ಭಾವಮುದ್ರಾ', 'ವ್ಯಾಸಪರ್ವ' – ಈ ಲಲಿತ ಕೃತಿ ಗಳಿಗೆ ಮೇಲ್ಪಟ್ಟದ ಸಾಹಿತ್ಯಕ್ಕೆ ನೀಡಲಾಗುವ ಮಹಾರಾಷ್ಟ್ರ ರಾಜ್ಯ ಪುರಸ್ಕಾರಗಳು ಲಭಿಸಿವೆ. ಹಾಗೆಯೇ 'ಪೈಸ'ವೆಂಬ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ದೊರೆತಿದೆ.

'ಋತುಚಕ್ರ'ದಲ್ಲಿ ನಿಸರ್ಗದ ಚಕ್ರನೇಮಿಕ್ರಮಣದ ವರ್ಣನೆಯನ್ನು ಮಾಡುವಾಗ ಋತುಗಳ ವರ್ಣವೈವಿಧ್ಯದ ರೂಪದರ್ಶನದಿಂದ ಪ್ರಫುಲ್ಲಿತವಾದ ದುರ್ಗಾಬಾಯಿಯವರ ನೈಜ ರಸಿಕತೆಯು ಓದುಗರನ್ನು ಆಕರ್ಷಿಸುತ್ತದೆ. 'ಭಾವ ಮುದ್ರಾ', 'ರೂಪರಂಗ' ಇವುಗಳಲ್ಲಿಯ ವ್ಯಕ್ತಿ ಚಿತ್ರಣಗಳು ವಾಚಕರ ಮನಸ್ಸನ್ನು ಸೆರೆಹಿಡಿಯುತ್ತವೆ; ಹಾಗೆಯೇ 'ಪೈಸ'ದಲ್ಲಿಯ ಲಲಿತ ಪ್ರಬಂಧಗಳಲ್ಲಿ ಅವರ ಅಂತರ್ಮುಖವೃತ್ತಿಯಿಂದಾಗಿ ಪ್ರಕಟವಾದ ಅಮೂರ್ತದ ಆಕರ್ಷಣೆಯು ವಾಚಕ ರನ್ನು ವ್ಯಾಪಕ ವಿಶ್ವದಲ್ಲಿ ಹಗುರವಾಗಿ ವಿಹರಿಸಿ ತರುತ್ತದೆ.

ದುರ್ಗಾಬಾಯಿಯವರ ಲಲಿತ-ಲೇಖನ ಶೈಲಿಯು ಶ್ರೇಷ್ಠ ಸಾಹಿತ್ಯದ ಸಂಸ್ಕಾರದಿಂದಾಗಿ ಸಂಪನ್ನವಾಗಿದೆ ಮತ್ತು ಜಾನಪದ ಸಾಹಿತ್ಯದ ಸೆಳೆತದಿಂದಾಗಿ ವಿಲಕ್ಷಣ ಪ್ರಸನ್ನತೆಯನ್ನೂ ಮೃದುತ್ವವನ್ನೂ ಪಡೆದುಕೊಂಡಿದೆ. ಅದರಿಂದಾ ಗಿಯೇ ಮಹಾಭಾರತಕಾರರಾದ ವ್ಯಾಸರ ಕೃತಿಯ 'ವ್ಯಾಸಪರ್ವ'ವೆಂಬ ಒಂದು ಅಸಾಮಾನ್ಯ ಲಲಿತ-ಆವಿಷ್ಕಾರವು ಅವರಿಂದ ಮರಾಠಿಯಲ್ಲಿ ಪ್ರಕಟವಾಗಿದೆ.

ಸಾಹಿತಿ ದುರ್ಗಾಬಾಯಿ ಭಾಗವತರ ಈ ಪರಿಚಯದಲ್ಲಿ ಅವರ ವೈಯಕ್ತಿಕ ಜೀವನದಲ್ಲಿಯ ಇನ್ನೊಂದು ವಜ್ರಕೊರೆಯನ್ನು ಸೇರಿಸದಿದ್ದರೆ ಅವರ ಪರಿಚಯವು ಅಪೂರ್ಣವಾಗಿ ಉಳಿಯಬಹುದು. ತೇಜಸ್ವಿ ವೃತ್ತಿಯ ಅವರ ಸ್ವಾತಂತ್ರ್ಯ ಪ್ರೇಮವು ಕಳೆದ ಐವತ್ತು ವರ್ಷಗಳ ಅವಧಿಯಲ್ಲಿ ವಿವಿಧ ಪ್ರಸಂಗಗಳಲ್ಲಿ ಉತ್ಕಟವಾಗಿ ಪ್ರಕಟವಾಗಿದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಅವರು ತಮ್ಮ ಕಾಲೇಜು ವಿದ್ಯಾಭ್ಯಾಸವನ್ನೂ ಕೆಲವು ಕಾಲ ಬಿಟ್ಟು ಕೊಟ್ಟಿದ್ದರು. ೧೯೭೭ರ ತುರ್ತುಪರಿಸ್ಥಿತಿಯಲ್ಲಿ ಲೇಖಕರ ಲೇಖನ ಸ್ವಾತಂತ್ರ್ಯಕ್ಕೆ ಐದು ತಿಂಗಳ ಕಾರಾಗೃಹ ವಾಸವನ್ನೂ ಅನುಭವಿಸಿದರು – ಎಪ್ಪತ್ತರ ವಯಸ್ಸಿನಲ್ಲಿ.

ದುರ್ಗಾಬಾಯಿ ಭಾಗವತರ ಕೈಯಲ್ಲಿ ಲೌಕಿಕ ಅರ್ಥದಲ್ಲಿ, ಯಾವ ಅಧಿಕಾರ ಸ್ಥಾನವೂ ಇಲ್ಲ. ಆದರೆ ವ್ರತಸ್ಥಯೋಗಿನಿಯಂತೆ ಅವರು ಜ್ಞಾನಸಾಧನೆಯಲ್ಲಿ ತೊಡಗಿದ್ದಾರೆ. ಮತ್ತು ಮಾನವತೆಯ ಹಾಗೂ ಸೌಂದರ್ಯ ದೃಷ್ಟಿಯ ತೊರೆಯು ಅವರ ಅಂತರ್ಜೀವನದಲ್ಲಿ ಜುಳುಜುಳು ಹರಿಯುತ್ತಿರುವುದನ್ನು ಅರಿತ ಮರಾಠಿ ಜನರು ಅವರಿಗೊಂದು ಬೇರೆಯೇ ನೈತಿಕ ಅಧಿಕಾರವನ್ನು ವಹಿಸಿಕೊಟ್ಟಿದ್ದಾರೆ. ಅವರ ವ್ಯಕ್ತಿತ್ವವನ್ನು ವಿನಮ್ರತೆಯಿಂದ ತಿಳಿದುಕೊಳ್ಳುವಾಗ ಅವರು ತಮ್ಮ ಸ್ವಂತದ ಜೀವನ ಮೌಲ್ಯಗಳನ್ನೂ ಪರಾಮರ್ಶಿಸುತ್ತಿರುತ್ತಾರೆ. ದುರ್ಗಾಬಾಯಿಯವರಿಗೆ ದೊರೆತ ಈ ಸ್ಥಾನವು ಕೇವಲ ಅನನ್ಯ ಸಾಧಾರಣವಾದುದು.

–ಸರೋಜಿನಿ ವೈದ್ಯ

# ವ್ಯಾಸಪರ್ವ

ಶ್ರೇಷ್ಠ ವಾಙ್ಮಯದ ಆಕರ್ಷಣೆಯು ಎಂದಿಗೂ ಮುಗಿಯದಂತಹದು. ಅನೇಕ – ಜನರು ವಿವಿಧ ದೃಷ್ಟಿಕೋನಗಳಿಂದ ಆ ವಾಙ್ಮಯದ ಪರಿಶೀಲನೆಯನ್ನು ಮಾಡಿದರೂ ಈ ಶೋಧಕ್ಕೆ ಕೊನೆಯಿಲ್ಲ. ಮಹಾಭಾರತದ ವಿಷಯವನ್ನು ಕೂಡ ಹೀಗೇ ಅನೇಕರು ಬೇರೆ ಬೇರೆ ರೀತಿಯಿಂದ ಪ್ರತಿಪಾದಿಸಿದ್ದಾರೆ. ಆದರೂ ಕಾಲಾತೀತವಾದ ವಿಷಯದಿಂದ, ಯಾವಾಗಲೂ ವ್ಯಕ್ತಿಗನುಗುಣವಾಗಿ ಬೇರೆ ಬೇರೆ ಅರ್ಥಗಳು ಪ್ರತೀತವಾಗುತ್ತ ಬಂದಿವೆ.

ಮಹಾಭಾರತದ ಕಡೆಗೆ, ಸಂಪೂರ್ಣವಾಗಿ ಕಲಾತ್ಮಕ ದೃಷ್ಟಿಯಿಂದಲೂ, ಸೌಂದರ್ಯ ವೃತ್ತಿಯಿಂದಲೂ ನೋಡುವ ಮರಾಠಿಯಲ್ಲಿಯ ಮೊದಲ ಪ್ರಯತ್ನ ಇದು – ವ್ಯಾಸಪರ್ವ. ದುರ್ಗಾಬಾಯಿಯವರು ಸಂಶೋಧನೆಯ ನಿಮಿತ್ತವಾಗಿ ಮಹಾಭಾರತವನ್ನು ಅಭ್ಯಸಿಸಿದರು. ಆಗ ಅದರಲ್ಲಿಯ ಅನೇಕ ಪಾತ್ರಗಳಲ್ಲಿ ಕೆಲವು ವ್ಯಕ್ತಿರೇಖೆಗಳು ಅವರ ಮನಸ್ಸಿನ ಮೇಲೆ ಮೂಡಿಸಿದ ಕೋಮಲ ರೇಖಾಕೃತಿಗಳಿಗೇ ಅವರು ವ್ಯಾಸಪರ್ವದಲ್ಲಿ ಶಬ್ದಾಕಾರವನ್ನು ಕೊಟ್ಟರು.

ವ್ಯಾಸಪರ್ವ ಎಂಬ ಹೆಸರು ಹೇಗೆ ಸೂಚಕವಾಗಿದೆಯೋ, ಹಾಗೆಯೇ ಅದರಲ್ಲಿಯ ಹತ್ತೂ ಅಧ್ಯಾಯಗಳ ಶೀರ್ಷಿಕೆಗಳೂ ಅನ್ವರ್ಥಕವಾಗಿವೆ. ದುರ್ಗಾಬಾಯಿಯವರ ಶೈಲಿಯ ನಿರ್ದಿಷ್ಟತೆ ಹಾಗೂ ಆಶಯದ ತಿರುಳಿಗೇ ಕೈಹಾಕುವ ಅವರ ವೃತ್ತಿ, ಈ ಶಿರೋನಾಮಗಳಿಂದ ಸ್ಪಷ್ಟವಾಗುತ್ತವೆ. ಆಗ 'ಪೂರ್ಣಪುರುಷ'ನಾದ ಕೃಷ್ಣನೇ ಇರಲಿ, 'ಏಕಾಕಿ'ಯಾದ ಕರ್ಣನಿರಲಿ, ಇಲ್ಲವೆ 'ಕಂಬನಿಗಳು ಆರಿದ ಮೇಲೆ' ನಿಚ್ಚಳನಾಗಿ ಕಾಣುವ ಭೀಷ್ಮನೇ ಇರಲಿ – ಈ ಹತ್ತೂ ವ್ಯಕ್ತಿಚಿತ್ರಗಳಲ್ಲಿ, ಒಂದೊಂದೂ ಉತ್ಕೃಷ್ಟವಾದ ಲಲಿತ ನಿಬಂಧವಾಗಿದ್ದು ಸ್ವತಂತ್ರವಾದ ಸಾಹಿತ್ಯಕ ಮೌಲ್ಯವನ್ನು ಹೊಂದಿದೆ.

ಮಹಾಭಾರತದಲ್ಲಿಯ ಘಟನೆಗಳನ್ನು ಅರ್ಥಮಾಡಿಕೊಳ್ಳುವ ವಿಷಯದಲ್ಲಿ ದುರ್ಗಾಬಾಯಿ ಮತ್ತು ಕೆಲವು ವಿದ್ವಾಂಸರಲ್ಲಿ ಮತಭೇದವಿದ್ದರೂ, 'ವ್ಯಾಸಪರ್ವ'ದಲ್ಲಿಯ ಕಾವ್ಯಮಯತೆ, ಉತ್ಕಟತೆ ಮತ್ತು ಜೀವಂತ ಹಾಗೂ ಮನಮುಟ್ಟುವ ಚಿತ್ರಣಗಳ ಬಗ್ಗೆ ಮಾತ್ರ ಎಲ್ಲರ ಒಮ್ಮತವಿದೆ.

ಮಹಾಭಾರತದ ಮೂಲಕ ವ್ಯಾಸರ ಮನಸ್ಸಿನ ಜಾಡನ್ನು ಹಿಡಿಯುವ ದುರ್ಗಾಬಾಯಿಯವರ ತಳಮಳವು 'ವ್ಯಾಸಪರ್ವ'ದ ಪ್ರಸ್ತಾವನೆಯಲ್ಲಿ ಸ್ಪಷ್ಟ ವಾಗಿ ಕಾಣುತ್ತದೆ. ಸಂಶೋಧಕರ ದುರಾರಾಧ್ಯ ಚಿಕಿತ್ಸೆ, ಸೃಜನಕ್ರಿಯೆಯ ಮತ್ತು ಮನೋವ್ಯಾಪಾರಗಳ ರಹಸ್ಯವನ್ನು ಭೇದಿಸಲು ಪ್ರಯತ್ನಿಸುವ ಚಿಂತನಶೀಲತೆ ಮತ್ತು ವ್ಯಾಸರಂತಹ ಅತಿಪ್ರಾಚೀನ ಕಾಲದ ಋಷಿ-ಕವಿಯ ನಿರ್ಮಿತಿಯಲ್ಲಿ ಹರಡಿದ ಕೋಮಲ ಭಾವ ಚಿತ್ರಗಳ ಬಂಗಾರವನ್ನು ಆರಿಸುವ ಕೌಶಲ, ಇವೆಲ್ಲದರ ಅಪೂರ್ವಸಂಗಮ ಇಲ್ಲಿ ಆದದ್ದು ನಮಗೆ ಕಂಡುಬರುತ್ತದೆ. ಮಹಾಭಾರತದ ಪಾಂಡಿತ್ಯಪೂರ್ಣ ಅಭ್ಯಾಸದಲ್ಲಿ ಕಳೆದುಹೋದ ಜೀವನನಾಟಕವು ನಮ್ಮ ಮುಂದೆ ತೆರೆಯುತ್ತಹೋದಂತೆ ದುರ್ಗಾಬಾಯಿಯವರ ಭಾಷೆಯ ಅತಿ ಕೋಮಲವಾದ ಮತ್ತು ಅತಿ ಸಮೃದ್ಧವಾದ ಸ್ವರೂಪವು ಇಲ್ಲಿ ಪ್ರಕಟವಾಗುತ್ತದೆ.

ಮಹಾಭಾರತವೆಂಬುದು ಒಂದು ಕಾವ್ಯಶಿಲ್ಪವಾಗಿದೆಯೆಂಬ ಸತ್ಯವು ಇಷ್ಟು ಉತ್ಕಟವಾಗಿ ಅಭಿನವ ರೀತಿಯಲ್ಲಿ ಮರಾಠೀ ಸಾಹಿತ್ಯವಿಶ್ವದಲ್ಲಿ ಹಿಂದೆಂದೂ ಪ್ರಕಟವಾಗಿರಲಿಲ್ಲ.

–ಮಿಾನಾ ವೈಶಂಪಾಯನ

# ಪರಿವಿಡಿ



# ವ್ಯಾಸಪರ್ವ : ಪ್ರಸ್ತಾವನೆ

ಮಹಾಭಾರತದ ಆಧಾರ, ಭಾರತೀಯ ಮನಸ್ಸಿಗೆ ಅದೆಷ್ಟಿದೆಯೆಂದು ಹೇಳಬೇಕೆ? ಆದರೆ ಈ ಆಧಾರದ ದಾರಿ ಮಾತ್ರ ಒಬ್ಬೊಬ್ಬರದು ಒಂದೊಂದು ಆಗಿರುತ್ತದೆ, ಅಥವಾ ಆಗಿರಲೂಬೇಕು. ನಿಜ ಸಂಗತಿಯೆಂದರೆ, ಬಹಳಷ್ಟು ಜನಕ್ಕೆ ಮಹಾಭಾರತವು ಕೌರವ ಪಾಂಡವರ ಕಥೆಯಿರುವ ಬಹಳ ಅವಾಂತರ ವಿವರಗಳಿಂದ ಕೂಡಿದ, ಸಡಿಲವಾದ ಮತ್ತು ಸಂಕೀರ್ಣವಾದ ನೀತಿಕಥೆ ಯೆನಿಸುತ್ತದೆ. ಯಾರಿಗೆ ಲಲಿತಸಾಹಿತ್ಯದಲ್ಲಿ ಆಸಕ್ತಿಯೋ ಅಂಥವರಿಗೆ ಅದರಲ್ಲಿಯ ಲಲಿತವಲ್ಲದ ವಿಸ್ತೀರ್ಣಭಾಗಗಳಿಂದಾಗಿ, ಮಹಾಭಾರತವನ್ನು ಕಥೆಯೆಂದು ಒಪ್ಪಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಲಲಿತ ಸಾಹಿತ್ಯದ ಸೊಗಡು ಮತ್ತು ಕಾವ್ಯದ ಸಹಜ ಮಧುರ ಭಾವ ಇವು, ಸಂಸ್ಕೃತಕಾವ್ಯದ

ಕಾಲಿದಾಸೀ ಷೋಕಿನವರಿಗೆ ಇಲ್ಲಿ ಸಿಕ್ಕುವುದು ಕಷ್ಟ. ಮತ್ತು ಕಾಲಿದಾಸೀ ಅಭಿರುಚಿಯೇ ನಮ್ಮ ಪುರಾತನ ಸಂಸ್ಕೃತ ಕಾವ್ಯವಾಙ್ಮಯದ ಪರೀಕ್ಷೆ ಮಾಡುವ ಅಳತೆಗೋಲೆಂದು ನಿರ್ಧಾರವಾಗಿಬಿಟ್ಟದ್ದರಿಂದ, ಹಲವರ ಕೈವಾಡ ಗಳಿಂದ ಕೂಡಿದ ಮತ್ತು ಹಲವಾರು ಕಾಲಖಂಡಗಳಲ್ಲಿ ವಿಭಕ್ತವಾದ ಮಹಾಭಾರತದಂಥ ಅವಾಢವ್ಯ ಕೃತಿಯ ರಸಾಸ್ವಾದದ ಮಾತಿರಲಿ, ಅದರ ಸಾದಾ ಪರಾಮರ್ಶನವೂ ಸಹ, ಸಾಹಿತ್ಯ ವಿಮರ್ಶೆಯ ಚೌಕಟ್ಟಿಗೆ ಒಗ್ಗುವಂತೆ ಇದ್ದಿಲ್ಲ. ಅಂತೆಯೇ ಈ ಕಾವ್ಯವಿಮರ್ಶೆಯ ಪ್ರತಿಕೂಲ ಅಂಗವನ್ನು ಬದಿಗೊತ್ತಿ ಪಂಡಿತರು, ತತ್ತ್ವವೇತ್ತರು, ರಾಜಕಾರಣಪಟುಗಳು ಮುಂತಾದವರು ತಮ್ಮ ಮೆಚ್ಚುಗೆಯ ಜೀವನ ಕ್ಷೇತ್ರಗಳ ಸಮರ್ಥನೆಯ ಸಲುವಾಗಿ, ಮಹಾಭಾರತದ ಅರ್ಥವನ್ನು ವಿವಿಧ ರೀತಿಯಲ್ಲಿ ಮಾಡಿಕೊಂಡರು. ಇದರಿಂದಾಗಿ ಇತರ ಅನೇಕ ಕ್ಷೇತ್ರಗಳು ಬೆಳಗಿದವು; ವಿಚಾರಗಳ ಕ್ಷಿತಿಜಗಳು ಬಿತ್ತರಗೊಂಡವು. ಆದರೆ, ಇಲ್ಲಿಯ ಕಾವ್ಯಮಯಭಾವಗಳು ಮಾತ್ರ ಮಸುಕಾಗಿ ಮುಚ್ಚಿಹೋದವು.

ಅನೇಕರಿಗೆ, ಮಹಾಭಾರತವು ಭಗವದ್ಗೀತೆಯ ಚೌಕಟ್ಟೆಂದೆನಿಸುತ್ತದೆ; ಮತ್ತು ಈ ಅನಿಸಿಕೆಯಲ್ಲಿ ಅತಿಶಯೋಕ್ತಿಯಿದೆಯೆಂದೂ ಅಲ್ಲ. ಏಕೆಂದರೆ ಮಹಾಭಾರತವು ಅದರ ಹೆಸರಿನಿಂದಲೇ ಭಾರತೀಯ ರಾಷ್ಟ್ರೀಯ ತತ್ತ್ವಜ್ಞಾನದ ಪ್ರತೀಕವಾಗಿ ಕಳೆದ ನೂರೈವತ್ತು ವರ್ಷಗಳಲ್ಲಿ ಭಾರತದ ಯುಯುತ್ಸೂರಾಷ್ಟ್ರವಾದದ ಮೂಲಕ ಆಪಾತತಃ ಮಾರ್ಪಟ್ಟಿತು. ಭಗವದ್ಗೀತೆ ಯನ್ನು ಕೈಯಲ್ಲಿ ಹಿಡಿದು ನೇಣುಗಂಬದ ಸಾವನ್ನು, ಮದನಲಾಲ ಧಿಂಗ್ರಾನಂತೆ ಹಲವಾರು ಹುತಾತ್ಮರು ಆನಂದದಿಂದ ಅಂಗೀಕರಿಸಿದರೆಂಬುದೂ ನಿಜವೇ. ಭಗವದ್ಗೀತೆಯಲ್ಲಿ ಉಪನಿಷತ್ತುಗಳ ನವನೀತವನ್ನು ಆ ಗೋಪಾಲನಂದನನು ತುಂಬಿಟ್ಟನು. ಶಂಕರಾಚಾರ್ಯರು ಗೀತೆಯ ಪ್ರಪ್ರಥಮ ಉದ್ಧಾರವನ್ನು ಮಾಡಿದರು. ಅಂದಿನಿಂದ ಗೀತೆಯು ವೇದಾಂತದ ಮುಖವೇ ಎಂಬಂತೆ ಆಯಿತು. ಸಂತ ಜ್ಞಾನೇಶ್ವರರು ಗೀತೆಯಲ್ಲಿ ತಮ್ಮ ಸ್ಫೂರ್ತಿಕ್ಷೇತ್ರವನ್ನೂ ಜೀವನಸೂತ್ರವನ್ನೂ ಕಂಡುಕೊಂಡರು. ಅನಂತರ ಕೆಲವರು ಗೀತೆಯಲ್ಲಿ ಜ್ಞಾನಯೋಗವನ್ನು ಕಂಡರು; ಕೆಲವರು ಕರ್ಮಯೋಗವನ್ನೂ, ಇನ್ನು ಕೆಲವರು ಅನಾಸಕ್ತಿಯೋಗವನ್ನೂ ಕಂಡರು. ಕೆಲವರಿಗೆ ಅದರಲ್ಲಿ ಭಕ್ತಿಯೋಗ ಸಿಕ್ಕಿತು. ಗೀತೆಯು, ಎಲ್ಲ ಬಗೆಯ ಕರ್ಮಾನುಸಂಧಾನೀ ಅಂತೆಯೇ ವಿರಕ್ತ ಯೋಗಾನು ಸಂಧಾನೀ ಆಧುನಿಕರಿಗೆ ದೈವೀಮಾತೆಯೇ ಆದಳು. 'ದೈವೀಸಂಗೀತ'ಕ್ಕೆ

ಕಿವಿಗೊಡುವವರೂ ಹೊರಟರು. ಒಟ್ಟಾರೆ, ಏನು, ಹೇಗೆ, ಯಂತ್ರಯುಗದ ವೇಗವೂ ಉದ್ವೇಗವೂ ವೃದ್ಧಿಗೊಂಡಿತೋ ಹಾಗೆಯೇ ಭಗವದ್ಗೀತೆಯ ಲೋಕವಿಖ್ಯಾತಿಯೂ ವೃದ್ಧಿಂಗತವಾಗುತ್ತ ಹೋಯಿತು. ಅದರ ಅಗತ್ಯ ಬೆಳೆದುದರಿಂದ ಅದರ ತೇಜವೂ ತುಂಬಿಕೊಂಡಿತು. ಏಕೆಂದರೆ, ಯುದ್ಧದಿಂದ ಉಧ್ವಸ್ತವಾದ ಜಗತ್ತಿನಲ್ಲಿ ಅಮರವಾದ ಶ್ರದ್ಧಾಸ್ಥಾನಗಳನ್ನು ಹುಡುಕುವುದಕ್ಕೆ ಜ್ಞಾನವಂತರ ಹೆಣಗಾಟ ಕಳೆದ ಐದು ವರ್ಷಗಳಿಂದ ನಡೆಯುತ್ತಿರುವಷ್ಟು ಹಿಂದೆ ಎಂದೂ ನಡೆದಿದ್ದಿಲ್ಲ. ಇಂದಿನ ಜಗತ್ತಿನಲ್ಲಿ ಮಾನವತೆಯು ಕಾಲಕೆಳಗಿನ ಮಳಲು ಜಾರುತ್ತ ನಡೆದಿದೆ. ಮತ್ತು ವಿನಾಶದ ಕಾಲಪ್ರವಾಹವು ಸಮೃದ್ಧಿಯ ಕ್ಷಣದಲ್ಲಿಯೂ, ಸಮಗ್ರ ಸಂಸ್ಕೃತಿಯನ್ನೇ ಪೂರ್ತಿ ನುಂಗಿ ಹಾಕಲು ಎದ್ದಿದೆ. ಇಂಥ ಪರಿಸ್ಥಿತಿಯು ಒಂದೇ ಒಂದು ಪುರಾಣ ಕಥೆಯ ಪ್ರಸಂಗದೊಂದಿಗೆ ಹೋಲಿಸಿ ತೂಗಬಹುದು – ಅದೇ ಭಾರತಯುದ್ಧದ ಪ್ರಸಂಗ. ಆದ್ದರಿಂದಲೇ ಶ್ರಾಂತನೂ ಭ್ರಾಂತನೂ ಆದ ಮನುಷ್ಯನಿಗೆ, ಪ್ರತಿಗಳಿಗೆಯ ಸಣ್ಣ ದೊಡ್ಡ ಸಂಕಷ್ಟಗಳಲ್ಲಿ ತಪ್ಪದೆ ದಾರಿ ಕಾಣಿಸುವ ಶ್ರೇಷ್ಠ ಧರ್ಮಗ್ರಂಥವು ಭಗವದ್ಗೀತೆಯೇ ಎಂದೆನಿಸುವುದು ಅಸ್ವಾಭಾವಿಕವಲ್ಲ. ಅಂತಹ ಗ್ರಂಥವು ಮಹಾಭಾರತದಲ್ಲಿ ಅಡಕವಾಗಿದೆಯೆಂದೇ ಮಹಾಭಾರತದ ಹಿರಿಮೆಯು ಶಾಶ್ವತವಾಗಿ ಉಳಿಯಿತು; ಮತ್ತು ಅದರಲ್ಲಿಯ ಕೌರವ ಪಾಂಡವರ ಕಥೆಯು ಇತರ ಉಪಕಥೆಗಳ ಸಂಭಾರ ಸಹಿತವಾಗಿ ಉನ್ನಯನಗೊಂಡಿತು.

ಮಹಾಭಾರತದ ಸೂಕ್ಷ್ಮ ಅಭ್ಯಾಸವು ದೇಶವಿದೇಶಗಳಲ್ಲಿ ಕೂಡ ಕಡಿಮೆ ಪ್ರಮಾಣದಲ್ಲೇನೂ ನಡೆದಿಲ್ಲ. ಮಹಾಭಾರತದ ಕರ್ತೃವು ಅದನ್ನು ಇತಿಹಾಸವೆಂದು ಕರೆದಿದ್ದಾನೆ. ಆದ್ದರಿಂದ ಪ್ರಾಚೀನ ಇತಿಹಾಸದ ಎಲ್ಲ ಶಾಖೆಗಳ ವೇದವನ್ನೂ ಅಭ್ಯಾಸಕರು ಅದರೊಳಗಿಂದ ಪಡೆದಿದ್ದಾರೆ. ರಾಜಕೀಯ ಇತಿಹಾಸ, ಧರ್ಮಶಾಸ್ತ್ರದ ಇತಿಹಾಸ, ತತ್ತ್ವಜ್ಞಾನದ ಇತಿಹಾಸ, ಸಾಮಾಜಿಕ ಇತಿಹಾಸ, ಭೌಗೋಲಿಕ ಇತಿಹಾಸ, ವಾಂಶಿಕ ಇತಿಹಾಸ, ಭಾಷಿಕ ಇತಿಹಾಸ, ಚರಿತ್ರೇತಿಹಾಸ – ಹೀಗೆ ಸರ್ವ ರೀತಿಯ ಇತಿಹಾಸಗಳ ಟೊಂಗೆ ಟಿಸಿಲುಗಳನ್ನು ವಿದ್ವಾಂಸರು ಈ ಪುರಾಣ ಗ್ರಂಥದ ವೃಕ್ಷದಿಂದ ಮನಸ್ಸಿಗೆ ಬಂದಂತೆ ಕಡಿದು ತೆಗೆದು ತಮ್ಮ ಶಾಖೆಯೇ ಮಹಾಭಾರತದ ಸಾರವೆಂಬ ಶ್ರದ್ಧೆಯಿಂದ ಆಯಾ ವಿಷಯದ ಪರಾಮರ್ಶ ನಡೆಯಿಸಿದರು. ವಿಷಯಾನು ಸಾರವಾಗಿ ಮಹಾಭಾರತದ ಪರಾಮರ್ಶವನ್ನು ಕೈಗೊಂಡರೆ ಅದರಲ್ಲಿ ಏನೂ

ತಪ್ಪಿಲ್ಲ; ಮತ್ತು, ಅದರ ಅಪಾಘವ್ಯ ಆಕಾರ ಹಾಗೂ ವಿಲಕ್ಷಣ ಸಿಕ್ಕುಸಿಕ್ಕಿನ ನೇಯ್ಗೆಯನ್ನು ಗಮನಿಸಿದಲ್ಲಿ, ಒಂದೊಂದು ವಿಷಯದ ಬಿಚ್ಚುಗಡೆ ಬೇರೆ ಬೇರೆ ವ್ಯಕ್ತಿಗಳಿಂದ, ಬೇರೆ ಬೇರೆ ಕಾಲದಲ್ಲಿ, ಬೇರೆ ಬೇರೆ ಧೋರಣೆಗಳಿಂದ ನಡೆದುಹೋದದ್ದು ಒಳ್ಳೆಯದೇ ಆಯಿತು. ಆದಾಗ್ಯೂ ಮಹಾಭಾರತದ ಅಚ್ಚುಕಟ್ಟಾದ ಸಮಗ್ರತೆಯ ದರ್ಶನವು ಅದರ ಅಂತರಂಗದ ಪೃಥಃಕರಣದ ಮೂಲ ಹಾಗೂ ಮುಖ್ಯ ಉದ್ದೇಶವಾಗಿದೆಯೆಂಬುದಕ್ಕೆ ಶಂಕೆಯಿಲ್ಲ; ಅದರ ಪ್ರತ್ಯಯವು ಈ ಅಭ್ಯಾಸದಲ್ಲಿ ನೇರ ನಿಖರವಾಗಿ ಬರುತ್ತದೆಂಬುದರ ನೇಮವಿಲ್ಲ. ಮಹಾಭಾರತದ ಯಾವದೊಂದು ಅಂಗದ ಪರಿಜ್ಞಾನವು ಅದರಲ್ಲಿಯ ಸಾಮರ್ಥ್ಯಪೂರ್ಣವೂ ಸೌಂದರ್ಯಶಾಲಿಯೂ ಆದ ತಿರುಳಿನ ಸಂಪೂರ್ಣದರ್ಶನವಲ್ಲ. ಮೇಲೆ ಉಲ್ಲೇಖಿಸಿದ ಅಂಗಗಳಲ್ಲಿ ಮಹಾಭಾರತದ ಸಾಮರ್ಥ್ಯದ ಪ್ರತೀತಿಯು ನಿಸ್ಸಂದೇಹವಾಗಿಯೂ ಆಗುತ್ತದೆ. ಅದರೊಳಗಿನ ಯೌಗಿಕ ಭೂಮಿಕೆಯ ಪ್ರತೀತಿಯೂ ಆಗುತ್ತದೆ. ಜ್ಞಾನದ ವಿದಗ್ಧತೆಯೂ ಸಹಜವಾಗಿ ಗೋಚರಿಸುತ್ತದೆ. ಮಾನವೀ ವ್ಯವಹಾರದ ಜಟಿಲತೆಯೂ ಅರಿವಾಗುತ್ತದೆ. ದೈವಗತಿಯ ವಕ್ರತೆಯು ಮನಸ್ಸನ್ನು ನಡುಗಿಸುತ್ತದೆ. ಕಥೆಯ ಓಘವು ಪ್ರಬಲವಾಗಿದೆಯೆಂಬುದು ಮನವರಿಕೆಯಾಗುತ್ತದೆ. ಪಾತ್ರಗಳ ಪರಿಮಾಣವು ವಿಲಕ್ಷಣ ವಿಶಾಲವಾಗಿದೆ. ಇದರ ಅರಿವು ಆರಂಭದಿಂದ ಅಂತ್ಯದವರೆಗೂ ಒಂದು ಕ್ಷಣವೂ ಜಾರುವುದಿಲ್ಲ. ಇದುವೇ ಮಹಾಭಾರತದ ಸಾಮರ್ಥ್ಯದ ತೀರ್ಮಾನ. ಆದರೆ ಮಹಾಭಾರತದ ಸೌಂದರ್ಯವು ಅದರ ಈ ಉತ್ತುಂಗವಾದ ಬಲಾವೇಗದಲ್ಲಿ ಮಾತ್ರವೇ ಇರುವುದಲ್ಲ. ಈ ಸ್ಥೂಲ ಸಾಮರ್ಥ್ಯಕ್ಕಿಂತ ಅತಿ ಸೂಕ್ಷ್ಮವೂ ಅಭೇದ್ಯವೂ ಆದ ಕೋಮಲತೆಯ ತಿರುಳು, ಕಾವ್ಯ ಛಂದಸ್ಸಿನ ಅನುರೋಧವಾಗಿ, ಕಥೆಯ ಲಾಲಿತ್ಯಕ್ಕೆ ಅನುಷಂಗಿಕವಾಗಿ ಮಹಾಭಾರತದ ಕಠಿಣಕವಚದ ಅಂತರ್ಯದಲ್ಲಿ ತುಂಬಿರುತ್ತದೆ. ಇದರ ಸಾಕ್ಷಾತ್ಕಾರವಾದಾಗಲೇ ಮಹಾಭಾರತದ ಕಲಾವಂತಿಕೆಯ ಅರಿವು ಬರುವ ಸಂಭವವಿದೆ. ಇಲ್ಲವಾದರೆ ಅಭ್ಯಾಸಕರಿಗೆ ಹಸಿಮೇವನ್ನು ಪೂರೈಸುವ ಒಂದು ಹುಲ್ಲುಗಾವಲೆಂಬುದಷ್ಟೇ ಅದರ ಪ್ರಯೋಜನದ ಮೌಲ್ಯವೆಂದಾಗುತ್ತದೆ; ಆ ಮೌಲ್ಯವು ವ್ಯಾವಹಾರಿಕ ಜ್ಞಾನಕ್ಕಾಗಿ ಇರಲಿ, ತತ್ತ್ವ ನಿಷ್ಕರ್ಷಕ್ಕಾಗಿ ಇರಲಿ, ನೀತಿಯ ಪುರಸ್ಕಾರಕ್ಕಾಗಿ ಇರಲಿ, ಅಥವಾ ಆಧ್ಯಾತ್ಮಿಕ ಅಗತ್ಯಕ್ಕಾಗಿಯೇ ಇದ್ದಿರಲಿ.

ಅದರಲ್ಲೂ ಮೋಜಿನ ಮಾತೆಂದರೆ, ಎಂದಾದರೊಮ್ಮೆ ಭಾರತೀಯ ಸಂಸ್ಕೃತಿಯ ಅಭ್ಯಾಸಕನು ಈ ಗಹನ ಕ್ಷೇತ್ರದಲ್ಲಿ ಹೋಗುವುದೂ ಉಂಟು. ನದಿಗಳೆಲ್ಲ ಸಮುದ್ರವನ್ನು ಸೇರುವವೇ. ಹಾಗೆಯೇ ಸಮಾಜಶಾಸ್ತ್ರದ ಶಾಖೆಗಳು ಐತಿಹಾಸಿಕ ಪರ್ಯಟನದಲ್ಲಿ ತಿರುವು ಸುತ್ತುತ್ತ, ದಡಬಡಿಸುತ್ತ, ಧಾವಿಸುತ್ತ ಬಂದು ಮಹಾಭಾರತಕ್ಕೆ ಕೂಡೇ ಕೂಡುತ್ತವೆ. ಮಹಾಭಾರತವನ್ನು ತಳ್ಳಿ ಸಾಮಾಜಿಕ ಆಶಯದ ಸಮ್ಯಕ್ ಸ್ವರೂಪವನ್ನು ಗುರುತಿಸುವುದು ಅಥವಾ ವಿಶದಗೊಳಿಸಿ ಹೇಳುವುದು ಸಾಧ್ಯವಾಗಲಿಕ್ಕಿಲ್ಲ. ಇತರರಂತೆ ನಾನೂ ಈ ಗಹನ ಪ್ರಾಂತದಲ್ಲಿ ಪ್ರವೇಶಿಸಿದೆ; ಪ್ರವೇಶಿಸಲೇಬೇಕಾಯಿತು. ಇತರರಿಗೆ ಏನು ಅನುಭವ ಬಂತೋ ಅದು ನನಗೆ ಗೊತ್ತಿಲ್ಲ. ಆದರೆ ನನಗೆ ಮಾತ್ರ ಉಸಿರುಕಟ್ಟಿದಂತಾಯಿತು. ಈ ಗಹನ ವಿದ್ಯಾರಣ್ಯದಲ್ಲಿ ನನಗೆ ದಾರಿತಪ್ಪಿದಂತೆ ಅನಿಸಿತು. ನಾನು ತುಂಬ ಸುತ್ತಾಡಿದೆ. ಈ ಗ್ರಂಥದ ಕೀರ್ತಿಯ ಒತ್ತಡದಿಂದಲೇ ಅರೆಸತ್ತಂತಾಗುತ್ತಿತ್ತು ನನಗೆ. ಯಾವುದಾದರೊಂದು ಹಳೆಯ ಸಂದರ್ಭವನ್ನು ತಿಳಿಯಲು ನನ್ನ ವಿಧಾನಕ್ಕೆ ಬಲಬರುವಂತೆ ತೂಕ ತುಂಬಲೆಂದು, ಎಂದರೆ ಕೇವಲ ಪ್ರಯೋಜನದ ಧೋರಣೆಯಿಂದ, ವ್ಯಾಸರ ಹೆಸರಿನ ಅವರ ಕೃತಿಯ ಉಪಯೋಗವನ್ನು ಮಾಡಲಿಕ್ಕೆ ನಾನು ಮಹಾಭಾರತವನ್ನು ಮೊದಲಿಗೆ ಮುಟ್ಟಿದೆ. ಅದನ್ನು ಬಳಸುವಾಗ ಅದರ ಪುರಾಣಗಂಧ, ಅದರ ಆ ಪುರಾತನತ್ವದ ಜಡಭಾರದ ಭಾಷೆಯ ಆ ಆಡಂಬರ, ಅದೆಲ್ಲ ತೂಗುವುದು ನನ್ನ ಅಳವಿನ ಕಸುವಿನ ಹೊರಗಿನ ಕೆಲಸವಾಗಿತ್ತು. ಕೇವಲ, ನನ್ನ ವಿಧಾನಗಳಿಗೆ ಪೋಷಕವಾಗುವ ಸಂದರ್ಭಗಳಷ್ಟೇ ನನಗೆ ಬೇಕಾಗಿದ್ದವು. ಚಿಕ್ಕಂದಿನಿಂದಲೂ ಪಾಂಡವರ ಕಥೆ ಕೇಳಿಸಿಕೊಳ್ಳುತ್ತಿದ್ದ ಮೂಲಕ ಕಥೆಯ ಎಳೆ–ದಾರಗಳು ಸುಮ್ಮನೆ ಸಂದರ್ಭಶೋಧನದಲ್ಲಿ ಅಡೆತಡೆಯುಂಟುಮಾಡುತ್ತಿರುವಂತೆ ನನಗೆ ಅನಿಸುತ್ತಿತ್ತು. ಆದರೆ ಈ ಅಡೆತಡೆಗಳಿರುವುದರಿಂದಲೇ ಮಹಾಭಾರತದಲ್ಲಿಯ ಉಲ್ಲೇಖಗಳಿಗೆ, ಪ್ರಮಾಣಗಳಿಗೆ ಮಹತ್ವವಿದೆ ಎಂಬುದೂ ಮನೋಮಯ ವಾಗಿ ನನ್ನಲ್ಲಿ ಜಾಗ್ರತವಿದ್ದುದರಿಂದ ವೇಳೆ ಅವೇಳೆ ಎಂಬುದಿಲ್ಲದೆ, ಬೇಕಿರಲಿ ಬೇಡವಿರಲಿ, ಈ ಸಂದರ್ಭವನ್ನು ಹುಡುಕಾಡುವ, ಈ ಹವ್ಯಾಸವನ್ನು ಹಟದಿಂದ ನಾನು ಹಚ್ಚಿಕೊಂಡೆನು. ಆದರೆ ಈ ಹವ್ಯಾಸವು, ಏನೇ ಅಂದರೂ, ಮೇಲುಮೇಲಿನದಾಗಿತ್ತು. ಮೈಯೆಲ್ಲ ಬೆವರಿಳಿಸಿ ಸಂದರ್ಭ ಹುಡುಕುವುದು ಮತ್ತು ಬಿಡುಗಡೆಯ ಒಂದು ನಿಟ್ಟುಸಿರು ಬಿಟ್ಟು ಪುಸ್ತಕವನ್ನು ಮುಚ್ಚುವುದು – ಹೀಗೆ ಸಾಗಿತ್ತು. "ನಾನು ಮಹಾಭಾರತದಲ್ಲಿ ಪುಟ ತಿರುವಿ ಹಾಕಿದೆ" ಎಂಬುದರ ಅಮಲು ಕೆಲಕಾಲ ಏರಿರಬೇಕು ಮತ್ತು ಅನಂತರ

ಸ್ವಾಭಾವಿಕವಾಗಿಯೇ ಈ ಸಂದರ್ಭ ಹುಡುಕುವ ಶ್ರಮವು ಬರಿಯ ಒಣ ಉಸಾಬರಿಯೆಂಬುದರ ಗ್ಲಾನಿಯುಂಟಾಗುತ್ತಿತ್ತು. ಈ ಒಣ ಹೆಣಗಾಟ ಮಾಡುವುದರ ಪ್ರಯೋಜನವೇನು? ಎಂಬ ಪ್ರಶ್ನೆಯೂ ಮನಸ್ಸಿನಲ್ಲಿ ಒಂದೇ ಸಮನೆ ಬರುತ್ತಿತ್ತು. ಆದರೆ ಅದಕ್ಕೆ ವ್ಯಾವಹಾರಿಕ ಉತ್ತರವನ್ನು ಚತುರ ಮನಸ್ಸು ಕೊಡುತ್ತಿತ್ತು – "ದೊಡ್ಡ ದೊಡ್ಡ ಪಂಡಿತರು ಇದನ್ನು ಮಾಡಿದರು. ಅವನ್ನೇ ನೀನು ಮಾಡು. ಅದರ ಹೊರತು ಬಿಡುಗಡೆ ಇಲ್ಲ" ಎಂದು. ಆ ಮಹಾಜನರು ಹೋದ ಹಾದಿಯಿಂದಲೇ ನಾನೂ ಹೋಗುವುದೆಂದು ನಿರ್ಧರಿಸಿದೆ. ಈ ರೀತಿಯಲ್ಲಿ ಒಮ್ಮೆ ಅಗತ್ಯ ನೀಗಿದ ಕೂಡಲೇ ಪುಸ್ತಕವನ್ನು ಮುಚ್ಚುವುದು ಮತ್ತು ಅದನ್ನು ಮತ್ತೊಮ್ಮೆ ಅಗತ್ಯವೆನಿಸುವ ತನಕ ತೆರೆಯದಿರುವುದು – ಹೀಗೆ ನಡೆದಿತ್ತು. ಆದರೆ ಅಗತ್ಯಗಳೇ ಹೆಚ್ಚಾಗಹತ್ತಿದವು; ಆ ಮೂಲಕ ಈ ಗ್ರಂಥವನ್ನು ಮುಚ್ಚಿ ಬದಿಗಿರಿಸದಂತಹ ಸ್ಥಿತಿಯಾಯಿತು. ವ್ಯಾವಹಾರಿಕ ಅಗತ್ಯಗಳು ಈಗ ಹೆಚ್ಚು ವ್ಯವಸ್ಥಿತವಾಗಿ ನೀಗುತ್ತಿದ್ದವು. ಈ ವೇಳೆಗೆ ಹೊಸ ಸೂಕ್ಷ್ಮಗಳು ಕಂಡು ಬರತೊಡಗಿದ್ದವು. ಅಭ್ಯಾಸದ ಫಲವು ಕೈಗೆಟುಕಿದಂತಾಗಿತ್ತು. ಆದರೆ ನಿಶ್ಚಿತವಾಗಿ ಈ ಫಲಸಿದ್ಧಿಯ ಕಾಲವೆ ನನ್ನ ಮನಸ್ಸಿನಲ್ಲಿ ಅಸಮಾಧಾನದ ಹಾಗೂ ಅಶ್ರದ್ಧೆಯ ಸ್ಫೋಟ ಸಿಡಿದೆಬ್ಬಿಸುವಂತಹದಾಯಿತು. ನನಗೇ ಅರಿವಾಗದಂತೆ, ಮಹಾಭಾರತದಲ್ಲಿಯ ಆಖ್ಯಾನಗಳಲ್ಲಿಯ ಕೆಲವು ಭಾಗಗಳು ನನ್ನನ್ನು ಅಸ್ವಸ್ಥಗೊಳಿಸಿದವು. ಗ್ರಂಥದ ಸಮಾಜಶಾಸ್ತ್ರೀಯ ಪ್ರಯೋಜನವು ನನಗೆ ನೂರಕ್ಕೆ ನೂರರಷ್ಟು ಮನವರಿಕೆಯಾಗಿತ್ತು. ಆದರೆ ದುಡಿದು ದಣಿದಾಗ ಮನುಷ್ಯನು ಕತೆಗಳಲ್ಲಿ ತನ್ಮಯನಾಗಲು ನೋಡುವುದಿದ್ದೇ ಇದೆ. ಶ್ರಮ ಪರಿಹಾರಕ್ಕಾಗಿ ಕತೆಯನ್ನು ತಾನಾಗಿಯೇ ಅಪ್ಪಿಕೊಳ್ಳಲಾಗುತ್ತದೆ. ಇಂಥ ಕಾವ್ಯಶಾಸ್ತ್ರವಿನೋದದ ಅಗತ್ಯದಲ್ಲಿ ನಾನು ಕಥಾನಕದ ಕಡೆಗೆ ಹೊರಳಿ, ಕೇವಲ ಖಚಿತವಾದ ಕಥೆಯನ್ನು ಮಗುವಿನ ಮನೋವೃತ್ತಿಯಿಂದ ಹುಡುಕ ತೊಡಗಿದೆನು. ಆಗ ನನಗೆ ಬೇಕಾಗಿತ್ತು–ಓರೆಕೋರೆಗಳಿಲ್ಲದ ನೇರ ಏರಿಳಿತ ಗಳುಳ್ಳ ರಂಜಕವಾದ ಕಥೆ. ಮೂಲತಃ ನನಗೆ ಗೊತ್ತಿದ್ದದ್ದೇ. ಆದರೆ ಅದನ್ನು ಈಗ ಹಿರಿಯರ ಮುದುಕರ ಬಾಯಿಯಿಂದ ಕೇಳುವುದಿದ್ದಿಲ್ಲ; ಮಕ್ಕಳ ಪುಸ್ತಕದಿಂದ ಓದುವದಿದ್ದಿಲ್ಲ; ವ್ಯಾಸರ ಮುಖದಿಂದಲೇ ಕೇಳುವುದಿತ್ತು. ಆದರೆ ಅದನ್ನು ಕೇಳುವಾಗ ಇದ್ದ ಅಪೇಕ್ಷೆ ಇಷ್ಟೇ – ನಾವು ಮನೋಮಯವಾಗಿ ಎತ್ತಿಕೊಂಡಿದ್ದ ಕಥೆಯನ್ನು ಅದೇ ಥಾಟಿಯಲ್ಲಿ ಅದೇ ಅಭಿನಿವೇಶದಲ್ಲಿ, ವ್ಯಾಸರೂ ಹೇಳಬೇಕು. ಹಾಗೆಂದು ಓದತೊಡಗಿದಾಗ ಈ ಅಪೇಕ್ಷೆಯು ನುಚ್ಚು ನೂರಾಯಿತು.

ಭೀಷ್ಮನು ಶರಪಂಜರದ ಮೇಲೆ ಒರಗಿದನಷ್ಟೆ. ಇದು ಕಥೆಯ ಹಾಗೂ ಭೀಷ್ಮನೆಂಬ ಪಾತ್ರದ ದೃಷ್ಟಿಯಿಂದ ಸರಿಯೇ. ಆದರೆ ಮುಂದೆ ಅವನ ಸಾವನ್ನು ಮುಂದೂಡುತ್ತ ಶಾಂತಿಪರ್ವದೊಳಗಿನ ಬಣ್ಣ ಬೆಡಗಿನ ಕಥೆಗಳನ್ನು ಅವನ ಬಾಯಿಯಿಂದ ಆಡಿಸಿದ್ದೇಕೆ? ಮೋಕ್ಷಧರ್ಮದ, ರಾಜಧರ್ಮದ ರಗಳೆಯನ್ನು ಅಲ್ಲಿ ರಚಿಸಿದ್ದೇಕೆ? ಸರಿ; ರಚಿಸಿದ್ದು ರಚಿಸಿಯಾಯಿತು. ಗಣರಾಜ್ಯದ ನಿಂದೆ, ಹೆಂಗಸರ ಅವಹೇಳನ ಅವನ ಬಾಯಿಯಲ್ಲಿ ಏಕೆ ಹಾಕಬೇಕು? ಗಣರಾಜ್ಯವನ್ನು ನಿಂದಿಸುವ ಭೀಷ್ಮ ಮತ್ತು ಗಣರಾಜ್ಯದ ಆದರ್ಶದಂತೆ ತನ್ನ ಸಂಘರಚನೆಯನ್ನು ಮಾಡುವ ಗೌತಮಬುದ್ಧ ಇವರಲ್ಲಿ ಯಾರ ನಿಲುವು ಹೆಚ್ಚು ಉನ್ನತ? ಯುದ್ಧದ ಕ್ಷಣ ಬಂದುಬಿಟ್ಟಿದೆ; ಅಲ್ಲಿಯೇ ಗೀತೆಯನ್ನು ಅರುಹುವ ಉಮ್ಮಳ ಕೃಷ್ಣನಿಗೆ ಏಕೆ ಬರಬೇಕು? ಅರ್ಜುನ ಅವನ ಮಿತ್ರ. ಅಂದಾಗ ಅವನ ಮನಸ್ಸಿನ ವಿವಿಧ ಸಂಮೋಹಗಳು ಅವನಿಗೆ ಮುಂಚೆ ತಿಳಿದಿರಲೇ ಇಲ್ಲವೆ? ತೀರ ಈಗಲೇ ಹದಿನೆಂಟು ಅಧ್ಯಾಯಗಳಲ್ಲಿ ಹೇಳಿದ್ದನ್ನು ಮನೆಯಲ್ಲಿ ಸ್ವಸ್ಥವಾಗಿ ಕೂತು ಅರ್ಜುನನಿಗೆ ಕಾಲಕಾಲಕ್ಕೆ ಹೇಳಲು ಬರುತ್ತಿದ್ದಿಲ್ಲವೇ? ಕಾರಸ್ಥಾನ ಮತ್ತು ಪಾಂಡವರ ಪಕ್ಷಪಾತ ಇವನ್ನು ಬಿಟ್ಟು ಕೃಷ್ಣನ ಪ್ರಯೋಜನವು ಈ ಗ್ರಂಥದಲ್ಲಿ ಏನಿದೆ? ಹೀಗೆ ವಿವಿಧ ಪ್ರಶ್ನೆಗಳು ನನ್ನ ಮುಂದೆ ನಿಂತವು. ಅವುಗಳ ಹಿಂದಿದ್ದ ನನ್ನ ಆಕ್ಷೇಪವೆಂದರೆ – ಕಥೆಯ ಸೂತ್ರಕ್ಕೆ ಈ ದೂರಾನ್ವಯದ ಭಾಗಗಳಿಂದ ಸಡಿಲ ಉಂಟಾಗಿದೆಯೆಂಬುದು. ಕಥಾನಕದ ಗತಿ ತಡೆದಿದೆ. ಒಳಗಿನ ಭಾವನೆಗಳ ಆವೇಶವನ್ನು ಕುಂಠಿತಮಾಡಿದೆ. ಆಗ ಮನಸ್ಸಿನಲ್ಲಿ ಹೀಗೊಂದು ಪ್ರಶ್ನೆ ಯುಂಟಾಯಿತು : ಈ ಎಲ್ಲ ಅತಿರಿಕ್ತ ಸಾಮಾಜಿಕ ಮತ್ತು ತಾತ್ತ್ವಿಕ ಸಾಹಿತ್ಯದ, ಅನುಷಂಗವು, ಮೂಲದ ಸ್ವಲ್ಪ ಸ್ಖಲಿತ ಕಥೆಯ ಪ್ರತಿಷ್ಠೆಯನ್ನು ಬೆಳೆಸಿದೆ ಎಂದರೆ, ಯಾವ ಕಥಾನಕವು, ಹಾಗೆಯೇ ಸಂಶ್ಲಿಷ್ಟವೂ ವಾಙ್ಮಯೀನ ಗುಣಗಳಿಂದ ಪರಿಪೂರ್ಣವೂ ಆಗಬಹುದಿತ್ತೋ ಅದರ ಅಂದಗೇಡಿನ ಈ ಅವಾಂತರವು ವಿಸ್ತಾರದಿಂದ ಹರಡಿಕೊಂಡಿದೆ? ಕಥಾನಕದ ಅನುಷಂಗದಿಂದ ಈ ಪ್ರಶ್ನೆಗಳ ಸುಳಿಗಳು ನನ್ನ ಮನಸ್ಸಿನಲ್ಲಿ ಸುತ್ತತೊಡಗಿದಾಗ, ಕಥಾನಕದ ಇಡಿಯ ತಳವೇ ಕುಸಿದಂತಾಯಿತು. ನೊರೆ–ಕೆಸರು ಒಂದಾಯಿತು. ಮೂಲದ ಆ ಸರಳಕಥೆಯು ಬಾಲ್ಯದಿಂದ ಮನಸ್ಸಿನಲ್ಲಿ ಅಚ್ಚೊತ್ತಿ ನಿಂತಿದ್ದು ಅದರ ಭಾವನಿಕ ನಿಚ್ಚಳವೇ ಹೊರಟುಹೋಯಿತು. ಕಲಕಿರಾಡಿಯಾದ ಒಂದು ಬಗೆಯ ಕತ್ತಲೆಯು ಕಥೆಯ ಪ್ರಸಂಗಗಳನ್ನು, ವ್ಯಕ್ತಿವ್ಯಕ್ತಿಗಳನ್ನು ಜಡಭಾರವಾಗಿಸಿ ಎಲ್ಲೆಡೆಗೆ ತುಂಬಿತು. ಪರಂಪರೆಯಿಂದ ಕೇಳಿಬಂದ ವ್ಯಕ್ತಿರೇಖೆಗಳ ಆಕಾರವು ಈ ಕತ್ತಲೆಯಲ್ಲಿ ಮುಳುಗಿಹೋಯಿತು. ಕತ್ತಲಲ್ಲಿ ಕಣ್ಣರಳಿಸಿ ನೋಡುವಂತೆ ನಾನು

ಆಗ ಈ ಕಥಾನಕದ ಆಕೃತಿ ಬಂಧದ ಬದಲು, ವ್ಯಕ್ತಿರೇಖೆಗಳ ಆಧಾರದಿಂದ ನೋಡಹೊರಟೆ. ಆದರೇನು? ಈ ವ್ಯಕ್ತಿದರ್ಶನ ಘಟಿಸಿದ್ದು ಹೀಗೆ - ಪ್ರತಿಯೊಂದು ವ್ಯಕ್ತಿಯೂ ತನ್ನ ಮಟ್ಟಿಗೆ ಭದ್ರವಾಗಿ ತನ್ನದೇ ಎರಕದಲ್ಲಿ ಹೂತು ಕುಳಿತಿತ್ತು. ಧಾತುರಸಗಳ ಎರಕಹೊಯ್ದ ಪ್ರತಿಮೆಗಳಿರುವಂತೆ, ಬಯಲು ವಾತಾವರಣದಲ್ಲಿ ವ್ಯವಹರಿಸುವ ಜೀವಂತ ವ್ಯಕ್ತಿಗಳ ಬದಲು ಈ ಮರದ ಗೊಂಬೆಗಳನ್ನು ವ್ಯಾಸರು ಅತಿ ಚಪಲತೆಯಿಂದ ಆ ಭವ್ಯಪಟದ ಮೇಲೆ ಕುಣಿಸಿರುವಂತೆ ಅನಿಸಿತು. ಏಕೆಂದರೆ ಮೊದಲು ಆಯಾ ಪಾತ್ರದ ಸ್ವರೂಪವನ್ನು ವ್ಯಾಸರು ಗ್ರಹಿಸಿದರು; ಅದೇ ರೀತಿ ಪ್ರಸಂಗಗಳ ಗುಂಪನ್ನು ಮಾಡಿ ಆಯಾ ವ್ಯಕ್ತಿವಿಶೇಷವನ್ನು ಕೊರೆದು ತಿದ್ದಿ ಕಾಯಂ ಮಾಡಿಬಿಟ್ಟರು. ಭೀಷ್ಮ ಶಾಶ್ವತ ಅವಿವಾಹಿತ ಮತ್ತು ಅಧಿಕಾರತ್ಯಾಗದ ಪ್ರತಿಜ್ಞೆ ಮಾಡಿದವನು. ಪ್ರತಿಜ್ಞಾ ಪೂರ್ತಿಯ ಅಮಲನ್ನು ಅನುಭವಿಸುವುದಕ್ಕಾಗಿಯೇ ಎಂಬಂತೆ ತನ್ನ ಇಚ್ಛೆಯ ಪ್ರತಿಷ್ಠೆಯನ್ನು ಆತ ಸತತವಾಗಿ ಬೆಳೆಸುತ್ತಲೇ ಇರುತ್ತಾನೆ. ಶರಶಯ್ಯೆಯ ಮೇಲಿನ ಇಚ್ಛಾಮರಣವನ್ನು ಪತಿಕರಿಸುತ್ತಾನೆ. ದ್ರೌಪದಿಯು ರೂಪದ ಅಭಿಮಾನದಿಂದ ಆವೇಶವೇರಿದವಳು. ಒಮ್ಮೆ ಹಿಡಿದ ಛಲ ಅಥವಾ ಹವ್ಯಾಸವನ್ನು ಕೊನೆಯತನಕವೂ ಆಕೆ ಬಿಡುವುದಿಲ್ಲ. ಭೀಮನು ಕೌರವರ ಮೇಲೆ ಉರಿಯುವುದನ್ನು ಬಿಡುವುದಿಲ್ಲ. ಅರ್ಜುನನು ಕಾದಾಡುವುದನ್ನು ಬಿಡುವುದಿಲ್ಲ. ಯುಧಿಷ್ಠಿರನು ಚಿಂತನ ಮಾಡುವುದನ್ನು ಬಿಡುವುದಿಲ್ಲ. ವಿದುರನು ಇತರರಲ್ಲಿ ತನ್ನನ್ನು ಕಾಣುವುದನ್ನು ಬಿಡುವುದಿಲ್ಲ. ದುರ್ಯೋಧನನು ದ್ವೇಷವನ್ನು ಬಿಡುವುದಿಲ್ಲ. ಕರ್ಣನು ತ್ವೇಷದ ಬಿಗಿತವನ್ನು ಬಿಡುವುದಿಲ್ಲ. ಕುಂತಿಯು ಚಿಂತೆಯನ್ನು ಬಿಡುವುದಿಲ್ಲ. ಕೃಷ್ಣನು ನಿರ್ಘೃಣ ವ್ಯವಹಾರಪಟುತ್ವವನ್ನು ಬಿಡುವುದಿಲ್ಲ. ಯಾರೂ ತಮ್ಮ ಯಾವುದನ್ನೂ ಬಿಡಲು ಸಿದ್ಧರಿರುವುದಿಲ್ಲ. ಹಟಮಾರಿ ಮಗುವು ತನ್ನ ಹಣದ ಗಂಟನ್ನು ಎದೆಗವಚಿಕೊಳ್ಳುವಂತೆ, ಕೋಮಲ ಭಾವಗಳೊಂದಿಗೆ ಸರ್ವಥಾ ವಿರೋಧವಿರುವ ತಮ್ಮ ಹಠಾತ್ತಾದ ದೇಹಸ್ವಭಾವವನ್ನು ಒಗೆಯಲು ಇಲ್ಲಿ ಯಾರೊಬ್ಬರೂ ಸಿದ್ಧರಿರದಿರುವಾಗ, ಈ ಎಲ್ಲ ಪಾತ್ರಗಳನ್ನು ತಾರಣ ಮಾಡಲು ಒಂದೇ ಉಪಾಯವು ವ್ಯಾಸರ ಮುಂದೆ ಇತ್ತು. ಅದೆಂದರೆ, ನೀತಿ, ತತ್ತ್ವಬೋಧೆ, ವಿವಿಧ ಬಗೆಯ ಜ್ಞಾನ – ಇವನ್ನೊಳಗೊಂಡ ಕಥೆಯಲ್ಲಿ ಕಾಲಕಾಲಕ್ಕೆ ಸೇರಿಸಿ ಸಮಾಜದಲ್ಲಿ ಪ್ರತಿಷ್ಠೆ ಪಡೆದ ಆ ಮೌಲ್ಯಗಳ ಆಧಾರದಿಂದ ಕಥೆಯ ಪ್ರತಿಷ್ಠೆಯನ್ನು ಕಾಪಾಡುವುದು. ಆಗ ನಾನು ಅನೈತಿಕ ಮೌಲ್ಯಗಳ ಜ್ಞಾನಾವಿಷ್ಕಾರದ ನಿರೀಕ್ಷಣವನ್ನು ತುಸು ಸೂಕ್ಷ್ಮವಾಗಿ ಮಾಡಲು ಆರಂಭಿಸಿದೆ. ಆದಿಪರ್ವವು ಅದರಲ್ಲಿಯ ಉಪಕಥೆಗಳಿಂದ

ಸುಂದರವಾಗಿ ಸಿಂಗರಿಸಲ್ಪಟ್ಟಿದೆ. ಆದರಲ್ಲಿ ಕೌರವ ಪಾಂಡವರ ಕಥೆಯೇ ತೀರ ಸಪ್ಪೆಯೆನಿಸುವಷ್ಟು ಅದು ಮೋಹಕವಾಗಿದೆ. ಪುರೂರವನ ಕಥೆ, ಗರುಡನ ಕಥೆ, ಯಯಾತಿಯ ಕಥೆ, ಶಕುಂತಲೆಯ ಕಥೆ, ಭೀಷ್ಮ ಜನ್ಮದ ಕಥೆ – ಇವೆಲ್ಲ ಪೂರ್ಣ ರೋಮಾಂಚಕಾರಿಯಾಗಿವೆ. ಈ ರೋಮಾಂಚಕಾರಿತ್ವದ ಮೆಚ್ಚು ಮದ್ದು ಹಾಕಿ ವ್ಯಾಸರು ನಮ್ಮನ್ನು ಮೋಸಗೊಳಿಸಿಲ್ಲವಷ್ಟೇ – ಎನ್ನುತ್ತಲೇ ನಾನು ಸಭಾ ಪರ್ವವನ್ನು ಪ್ರವೇಶಿಸಿದೆ. ರಾಜಕಾರಣ, ಕಾರಸ್ಥಾನ, ಮುತ್ಸದ್ದಿತನ, ಜೂಜು – ಈ ಎಲ್ಲ ಕಠೋರ ಪರಿಣಾಮಗಳಿಂದ ತುಂಬಿದೆ ಈ ಸಭಾಪರ್ವ. ವನಪರ್ವವು ಸಾವಿತ್ರಿ, ಧರ್ಮವ್ಯಾಧ ಮುಂತಾದವರ ಪರಮಸುಂದರ ಆಖ್ಯಾನಗಳಿಂದ ತುಂಬಿದೆ. ಈ ದೂರಸ್ಥ ಕಥಾನಕಗಳಿಂದ ಅದರಲ್ಲಿ ಮಾಧುರ್ಯ ಹೊಮ್ಮಿದೆ; ಇದರಲ್ಲಿ ಸಂಶಯವಿಲ್ಲ. ಸಭಾಪರ್ವದಲ್ಲಿ ಅಂಥದೇನೂ ಇಲ್ಲ. ಜಗಳ, ವಾದ ವಿವಾದ, ತಿರುವು ಮುರುವು ನಿಲುಮೆಗಳು, ಸಮಾರಂಭಗಳು, ರಾಜಕೀಯ ಮಹತ್ವಾಕಾಂಕ್ಷೆಯ ವಿದಾರಕ ಸ್ವರೂಪ ಹೀಗೆ ಸ್ಥೂಲಮಾನದ ಪ್ರಪಂಚ ಇಲ್ಲಿ ಕಂಡುಬರುತ್ತದೆ. ಆದಾಗ್ಯೂ ಅಲ್ಲಿಯ ಎರಡು ಸಾಲುಗಳನ್ನು ಓದುವಾಗ ಏನೋ ಸಿಕ್ಕಂತೆ ಭಾಸವಾಗಿ ನಾನು ತಡೆದೆ. ಸಾಲುಗಳು ಸರಳ ಸಾದಾ; ಯಾವುದೇ ಉತ್ಕಟಭಾವ ಇಲ್ಲದವು. ಪಾಂಡವರ ಮನೆಯಿಂದ ಹೊರಡುವಾಗ ಸುಭದ್ರೆಗೆ ವಿದಾಯ ಹೇಳುವ ಸಂದರ್ಭ; ಆ ಸಾಲುಗಳು ಹೀಗಿವೆ :

*ಸಾರ್ಥಂ ತಥ್ಯಂ ಹಿತಂ ವಾಕ್ಯಂ ಪ್ರಿಯಂ ಯುಕ್ತಮನುತ್ತರಮ್ ।*
*ಉವಾಚ ಭಗವಾನ್ ಭದ್ರಾಂ ಸುಭದ್ರಾಂ ಭದ್ರಭಾಷಿಣೀಮ್ ॥*

ಇಲ್ಲಿ, ಇದರಲ್ಲಿಯ ಪ್ರಾಸಕ್ಕಿಂತ ಇದರ ಲಯವು ನನ್ನನ್ನು ಕೆರಳಿಸಿತು. ಈ ಸಾಲುಗಳು ಅರಿವಿಲ್ಲದೆ ಕಂಠಪಾಠವಾದವು; ಮನಸ್ಸಿನಲ್ಲಿ ಮೊಳಗಹತ್ತಿದವು. ಕೃಷ್ಣನ ಮುಖದಿಂದ ಒಡಮೂಡಿದ ನಾದಪೂರ್ಣ ಶಬ್ದಗಳ ವೇದವನ್ನು ಪಡೆಯಲು ಪ್ರಯತ್ನಿಸಿದೆ. ಅರ್ಥಪೂರ್ಣವಾದ, ಕಲ್ಯಾಣಕಾರಿಯಾದ, ಉಚಿತವಾದ, ಪ್ರಿಯವಾದ ಮತ್ತು ಪ್ರತ್ಯುತ್ತರಕ್ಕೆ ಎಡೆಕೊಡಲಾರದಂಥ ಪ್ರಿಯ ವಾದ ಮಾತುಗಳನ್ನು ಕೃಷ್ಣನು ಆಡಿದ್ದನು. ಸುಭದ್ರೆಯು ಮಂಜುಭಾಷಿಣಿ. ಅವಳೊಂದಿಗೆ ಮಾತಾಡುವುದರಲ್ಲಿ ಕೃಷ್ಣನು ಭಾಷಣಸೌಷ್ಠವದ ಶಿಖರವನ್ನು ಮುಟ್ಟಿದನು. ಇದಕ್ಕೂ ಉತ್ಕಟ ಪ್ರಸಂಗಗಳು ಬಂದಾಗ ಅವನ ದನಿಯು ಇನ್ನೂ ಹೆಚ್ಚು ಶ್ರವಣೀಯವಾಗಿರಬಹುದು. ಗೀತೆಯನ್ನು ಆತ ಈ ನಿಲುಮೆಯಲ್ಲಿಯೇ ಹೇಳಿದನು. ಗೀತೆಯ ಆ ಪ್ರವಚನದಲ್ಲಿ ನನಗೆ ತರತರದ ಶ್ರಾವ್ಯನಾದಗಳ ಆವರ್ತನೆಗಳು ಸಿಗಹತ್ತಿದವು. ಗೀತೆಯಲ್ಲಿಯಂಥ ಶ್ರವಣಸುಭಗತೆ ಕೇಳ

ಸಿಗುವುದೇ ಅಪರೂಪ. ಇದಕ್ಕೆ ಅಪವಾದ, ವೈದಿಕ ಋಕ್ಕುಗಳದೇ. ಇಲ್ಲಿಂದ ವ್ಯಾಸರ ಶೈಲಿಯ ಸೌಭಾಗ್ಯವು ಪ್ರತೀತವಾಗತೊಡಗಿತು, ಕೃಷ್ಣನ ವಾಣಿಯ ಝೇಂಕಾರವು ಹೆಚ್ಚು ಸ್ಪಷ್ಟವಾಯಿತು.

ಅಲ್ಲಿಂದ ಮುಂದೆ, ಓದಲು ಬಿಗಿಯಾದದ್ದು, ಓದುವಂತೆ ಆಯಿತು. ರೂಕ್ಷವಾದದ್ದು ಸರಸವಾಯಿತು. ಇದರ ಹೊರತು ಹೆಚ್ಚಿನ ತಾದಾತ್ಮ್ಯ ಉಂಟಾಗಿದ್ದಿಲ್ಲ. ಸಭಾಪರ್ವವೇ ಇನ್ನೂ ನಡೆದಿತ್ತು. ರಾಜಸೂಯಯಜ್ಞ, ಮಯಸಭೆ ಇವುಗಳ ಝುಗಝುಗಿಸುವ ಪ್ರಭೆಯು ಮನಸ್ಸಿನ ಮೇಲೆ ಇನ್ನೂ ಸುಳಿದಾಡುತ್ತಲೇ ಇತ್ತು. ಜೂಜಾಟದ ಅನಂತರ ಪಾಂಡವರ ತೇಜಸ್ಸೆಲ್ಲ ಕಂದಿ ಹೋಗಿತ್ತು. ಅವರು ದಾಸರಾಗಿದ್ದರು. ರಜಸ್ವಲೆಯಾದ ದ್ರೌಪದಿಯ ಆಕ್ರೋಶ ನಡೆದಿತ್ತು. ಈ ವಿಡಂಬನೆಯ ಪ್ರಸಂಗದಲ್ಲಿ, ಎಲ್ಲ ಕಲೆಗಳೂ ಎಲ್ಲ ಧರ್ಮಗಳೂ ಯಾವ ಸತ್ಯವನ್ನು ಸದಾ ಹುಡುಕುತ್ತಿರುವುವೋ, ಮತ್ತು ಆ ಹುಡುಕಾಟ ದಿಂದಲೇ ಸತ್ವಶಾಲಿಗಳಾಗುವುವೋ ಆ ಸತ್ಯದ ಮಾನವೀ ಮೂಲಾಧಾರಕ್ಕೇ ದ್ರೌಪದಿಯು, ಆವೇಗದ ಭರದಲ್ಲಿ ಅನವಧಾನದಿಂದ ಕೈಹಾಕಿದಳು. ಅಲ್ಲಿಯ ಒಂದು ಶ್ಲೋಕವು ನೂರು ನಾದಗಳಿಂದ ನನ್ನ ಮನಸ್ಸಿನಲ್ಲಿ ಮೊಳಗಿತು. ತೀರಾ ಸಾದಾ, ಅದರ ರಚನೆ. ಪ್ರಾಸದ ಅವಗುಂಠನವೂ ಇಲ್ಲ. ಉಪಮೆ ಉತ್ಪ್ರೇಕ್ಷೆಗಳ ಸಿಂಗಾರವಿಲ್ಲ. ಆದರೆ ಬುದ್ಧಿವಂತರ, ಜ್ಞಾನವಂತರ, ಧರ್ಮಜ್ಞರ ಅನುಭವದ ಸಾರಸರ್ವಸ್ವವೇ ಅದರಲ್ಲಿ ತುಂಬಿದೆ. ಸತ್ಯದ ವ್ಯಾಖ್ಯೆ ಇರುವ, ಪರಾಕಾಷ್ಠೆಯ ತೀವ್ರಸ್ವರದಲ್ಲಿ ಉಚ್ಚರಿಸಿದ ಆ ಶ್ಲೋಕ ಇಂತಿದೆ :

*ನ ಸಾ ಸಭಾ ಯತ್ರ ನ ಸಂತಿ ವೃದ್ಧಾಃ*
*ನ ತೇ ವೃದ್ಧಾಃ ಯೇ ನ ವದಂತಿ ಧರ್ಮಮ್ ।*
*ನಾಸೌ ಧರ್ಮೋಯತ್ರ ಚ ನಾಸ್ತಿ ಸತ್ಯಂ*
*ನ ತತ್ಸತ್ಯಂ ಯಚ್ಛಲೇನಾನುವಿದ್ಧಮ್ ॥*

ಇದನ್ನು ಓದಿದಾಗ, ಸುಗಮಕಾವ್ಯಗಳಿಂದ ಆಗದಂತಹ ಭಾವಾಂದೋಲನ ವನ್ನು ಆ ಕ್ಷಣಕ್ಕೆ ಅನುಭವಿಸಿದೆ. ಒಂದು ಭಾವನಾತೀತವಾದ ಭಾವಾನು ಭವವನ್ನು ಪಡೆದೆ. ಅದರ ಸ್ವರೂಪ ಹೇಗಿತ್ತೆಂಬುದನ್ನು ಇಂದಿಗೂ ನನಗೆ ಹೇಳಲು ಬರುವಂತಿಲ್ಲ. ಆದರೆ ಮಹಾಭಾರತದ ಕರ್ತೃವಿನ ಪ್ರತಿಭೆಯ ಸಾಕ್ಷಾ ತ್ಕಾರವನ್ನು ನನಗೆ ಆ ನಾಲ್ಕು ಸಾಲುಗಳು ಖಂಡಿತವಾಗಿಯೂ ಮಾಡಿಕೊಟ್ಟವು. ಮುಚ್ಚಿದ್ದ ವಾತಾವರಣವು ತೆರೆಯಿತು. ಹೊಸ ಕಿರಣಗಳು ಹೊಸ ಭಾವಗಳನ್ನು

ಎಬ್ಬಿಸುತ್ತ ಬಂದವು. ಆಗ ನನಗೆ ದ್ರೌಪದಿಯು ಬೇರೆಯೇ ಆಗಿ ಕಂಡಳು. ಕೃಷ್ಣನೂ ಬೇರೆಯಾಗಿ ಕಂಡನು. ಇವರಿಬ್ಬರ ಮೇಲೆ ಲಕ್ಷ್ಯವನ್ನು ಕೇಂದ್ರೀಕರಿಸಿದ ಮೇಲೆ ನಿಯಮಿತ ಕಥೆಯ ಚೌಕಟ್ಟು ಹಾಗೆಯೇ ಉಳಿಯಿತು. ಆದರೂ ಈ ಪಾತ್ರಗಳ ಪರಿಮಾಣ, ಆಕಾರ ಮತ್ತು ಸಮಗ್ರ ಕಥೆಯೊಳಗೆ ಅವುಗಳ ಪ್ರಯೋಜನ, ನನಗೆ ಬೇರೊಂದು ಸಂದರ್ಭದಲ್ಲಿ ಕಂಡು ಬರತೊಡಗಿದವು. ಪ್ರತಿ ಪ್ರಸಂಗದಲ್ಲಿ ನಾಟ್ಯವೇ ಕಂಡುಬಂದಿತು. ಸತ್ವ ಕವಿತೆ ಯದು; ತಾಲ ಛಂದಸ್ಸಿನದು; ಆದರೆ ಆತ್ಮ ನಾಟ್ಯದ್ದು – ಹೀಗೆ ಈ ಸಮಗ್ರಕೃತಿಯು ನನಗೆ ತೋರಿಬಂತು. ಮೂಲಕಥೆಯಲ್ಲಿ, ಉಪಕಥೆಗಳಿರುವ ಕೃತಿಗೆ ಪಾರಿಭಾಷಿಕವಾಗಿ "ಪರಿಮಂಡಲ ಕಥೆ" ಎಂಬ ಹೆಸರಿದೆ. ಬೃಹತ್ಕಥೆ ಹಾಗೂ ಅರೇಬಿಯನ್ ನೈಟ್ಸ್ – ಇವು ಈ ವರ್ಗದವು. ಬೃಹತ್ಕಥೆಯು ತನ್ನೆದುರು ಮಹಾಭಾರತದ್ದೇ ಮಾದರಿಯನ್ನು ಇಟ್ಟಿತು. ಆದರೂ ಬೃಹತ್ಕಥೆಗೆ ಮಹಾಭಾರತವನ್ನು ಅನುಕರಿಸುವುದು ಸಾಧ್ಯವಾಗಲಿಲ್ಲ. ದೊಡ್ಡ ಕಥೆಯಲ್ಲಿ ಅಸಂಖ್ಯ ಸಣ್ಣ ಕಥೆಗಳು – ಇಷ್ಟೇ ಒಂದು ಸ್ಥೂಲಗುಂಫನವನ್ನು ಬೃಹತ್ಕಥೆ ಎತ್ತಿಕೊಂಡಿತು; ಛಂದೋ ಬದ್ಧತೆಯನ್ನು ಎತ್ತಿಕೊಂಡಿತು. ಆದರೆ ಮಹಾ ಭಾರತದ ಅಂತರ್ಯವನ್ನು ತುಂಬಿಕೊಂಡ ನಾಟ್ಯಕೃತಿಗಳ ವೇದ ಗುಣಾಢ್ಯನಿಗೆ ಹಿಡಿಯಲಾಗಲಿಲ್ಲ. ದೊಡ್ಡ ನಾಟ್ಯಬಂಧದಲ್ಲಿ ಸಣ್ಣ ನಾಟ್ಯಬಂಧಗಳನ್ನು ವ್ಯಾಸರು ದಟ್ಟವಾಗಿ ತುಂಬಿದ್ದಾರೆ; ಆ ಮೂಲಕವೇ ಅವರ ಕೃತಿಗೆ ಅತಿ ಬಲಿಷ್ಠ ಭರಣ ಪುಷ್ಟಿಯು ಒದಗಿ ಬಂದಿದೆ. ಈ ನಾಟ್ಯವನ್ನು ಅವರು ತುಂಬಿದ್ದರಲ್ಲಿ ತಾಂತ್ರಿಕ ಅಡಿಪಾಯವೇನೂ ಇಲ್ಲ. ಸಂವಾದಗಳು ಮತ್ತು ದ್ರುತ ಕೃತಿ – ಇವುಗಳೊಳಗಿಂದ ನಾಟ್ಯಭಾವವು ಪ್ರಕಟವಾಗುತ್ತದೆ. ಅರ್ಥಾತ್ ಇಂಥ ಕೃತಿ ಅನುಕರಣಕ್ಕೆ ಸುಲಭವಿರುವುದಿಲ್ಲ. ಆದ್ದರಿಂದಲೇ ರಾಮಾಯಣವನ್ನು ಆಧರಿಸಿ ರಚಿತವಾದಷ್ಟು ಕೃತಿಗಳು ಮಹಾಭಾರತವನ್ನು ಆಧರಿಸಿ ಆಗಲಿಲ್ಲ.

ಪ್ರವೃತ್ತಿ ನಿವೃತ್ತಿಗಳ ನಡುವಿನ ಸಮತೋಲದಲ್ಲಿ ವ್ಯಾಸರ ನಾಟ್ಯದ ಧಾರಣೆ ಹುಟ್ಟಿದೆ. ನಾಟ್ಯದೊಳಗಿನ ನಾಟ್ಯಗಳನ್ನು ಮಹಾಭಾರತದಲ್ಲಿಯೇ ನೋಡ ಬೇಕು. ಅನೇಕ ದೃಶ್ಯಗಳನ್ನು ವಿವಿಧ ಛಾಯೆಗಳಲ್ಲಿ, ವಿವಿಧ ಬಣ್ಣಗಳಲ್ಲಿ, ಕೆಲವು ಸಲ ವರ್ಣನೆಯಲ್ಲಿ, ಕೆಲವು ಸಲ ಸಂವಾದಗಳಲ್ಲಿ, ಇನ್ನೂ ಕೆಲವು ಸಲ ಸೂಚನೆಯಲ್ಲಿಯೇ ವ್ಯಾಸರು ವ್ಯಾಪಕವಾಗಿ ಸೃಷ್ಟಿಸಿದ್ದಾರೆ. ಇಷ್ಟೇ ಅಲ್ಲ, ಹಿಂದು ಮುಂದಿನ ವಿಚಾರವನ್ನು ಮಾಡಿರದಂತೆ, ಅವಕಾಶ ಸಿಕ್ಕಲ್ಲಿ ಅವನ್ನು

ಚೆಲ್ಲುವರಿಸಿದ್ದಾರೆ. ಹೆಜ್ಜೆಹೆಜ್ಜೆಗೆ ಅವುಗಳ ರೂಪ ಕಾಣಬೇಕು, ಕ್ಷಣ ಹೊತ್ತು ಪ್ರೇಕ್ಷಕನು ತಡೆಯಬೇಕು. ಅಥವಾ ಆ ಸೂಕ್ಷ್ಮ ನವುರು ರಂಗೋಲಿಯ ಕಡೆಗೆ ನೋಡಲು ಸಮಯವಿಲ್ಲದ್ದರಿಂದ ಓದುಗನು ಈ ಬೇಸರ ತರುವ ಭಾಗ ಬಿಟ್ಟು, ಎದ್ದು ಕಾಣುವ ಥಾಳವಾದ ಪ್ರಸಂಗಗಳ ಕಡೆಗೇ ಲಕ್ಷ್ಯಕೊಡಬೇಕು – ಎಂಬ ರೀತಿಯಲ್ಲಿ.

ವ್ಯಾಸರ ಅನುಪಮವಾದ ನಾಟ್ಯಾವಧಾನವು ಪ್ರಕಟವಾದ ರೀತಿಯಂತೂ ಬಹಳ ನಾಜೂಕಾಗಿದೆ; ಸೂಕ್ಷ್ಮವೂ ತರಲವೂ ಆಗಿದೆ. ಅತಿ ಕಡಮೆ ಶಬ್ದಗಳಲ್ಲಿ, ಕೆಲವೊಮ್ಮೆ ಸೂತ್ರಬದ್ಧ ಪದ್ಧತಿಯಿಂದಲೂ ಈ ನಾಟ್ಯವು ಪ್ರಕಟವಾಗುತ್ತದೆ. ಭಾಷೆ, ಭಾವನೆ, ರಂಗು ರಸಗಳ ಈ ವಿಲಕ್ಷಣ ಮಿತವ್ಯಯ, ಹಾಗಿದ್ದರೂ ಅವುಗಳ ಗುಂಫನದೊಳಗಿಂದ ಭವ್ಯ ಭಾವಾನುಭವದ ಆವಿಷ್ಕಾರವನ್ನು ಮಾಡುವ ಕಲೆ ಮಹಾಭಾರತದಲ್ಲಿ ವಿಪುಲವಾಗಿ ಸಿಕ್ಕುತ್ತದೆ. ಅಂಥ ಪ್ರಸಂಗ ಗಳಲ್ಲಿ ತನಗೆ ಅರಿವಿಲ್ಲದೆ ಆಯಾ ಪಾತ್ರದ ಸ್ಥೂಲವ್ಯಕ್ತಿಗತ ಭಾವವು ವಾಲುತ್ತದೆ. ವಿರೋಧಿ ಸ್ವರದ ಮೇಲೆ ತುಸು ಆನಿಕೊಂಡು ಮತ್ತೆ ಸ್ಥಿರವಾಗುತ್ತದೆ. ಉದಾಹರಣೆಗೆ ವಿದುರನದೇ ತೆಗೆದುಕೊಳ್ಳೋಣ. ಪ್ರಸಂಗವು, ದ್ರೌಪದೀ ಸ್ವಯಂವರಾನಂತರ ಪಾಂಡವರು ಮರಳಿ ಸಪತ್ನೀಕರಾಗಿ ಇಂದ್ರಪ್ರಸ್ಥಕ್ಕೆ ಬರುವ ಸಮಯದ್ದು. ಆ ಪೂರ್ವದಲ್ಲಿ ಅರಗಿನ ಮನೆಯಲ್ಲಿ ಪಾಂಡವರು ಸುಟ್ಟು ಸತ್ತರೆಂಬ ವಾರ್ತೆಯು ಹಸ್ತಿನಾಪುರದಲ್ಲಿ ಹಬ್ಬಿತ್ತು. ಅಂಥ ಧೃತರಾಷ್ಟ್ರನಿಗೂ ಈ ತನಕವೂ ಹಾಗೆಯೇ ಅನಿಸುತ್ತಿತ್ತು. ಅವನಿಗೆ ಈ ವಾರ್ತೆಯಿಂದ ಒಂದೆಡೆಗೆ ನಾಚಿಕೆ, ಇನ್ನೊಂದೆಡೆಗೆ ಮರುಳು ವಾತ್ಸಲ್ಯದಿಂದಾಗಿ ಸುಖ – ಎನಿಸುತ್ತಿತ್ತು. ಆದರೆ ಭೂಮಿಕೆ ರಾಜನದಾದ್ದರಿಂದ ಯಜಮಾನನ ಭೂಮಿಕೆಯನ್ನು ಗಂಭೀರವಾಗಿ, ಮೇಲೆ ಮೇಲೆ ಉದಾಸನಾಗಿ ನಿರ್ವಹಿಸುತ್ತಿದ್ದನು. ಆಗ ಅವನಿಗೆ, "ಪಾಂಡವರು ದ್ರೌಪದಿಯನ್ನು ಗೆದ್ದರು" ಎಂಬ ಸುದ್ದಿಯು, ಅವರು ಬರುವ ವೇಳೆಗೆ, ವಿದುರನಿಂದ ತಿಳಿಯಿತು. ಆದರೆ ಅದು ಸಾದಾ ಸೀದಾ ರೀತಿಯಲ್ಲಿ ಅಲ್ಲ; ಚೇಷ್ಟೆಯ ರೂಪದಲ್ಲಿ. ತುಸು ಕೊಂಕಿನಿಂದ, ಸುತ್ತು ಬಳಸಿ ಆ ವಾರ್ತೆಯು ಧೃತರಾಷ್ಟ್ರನ ಮೇಲೆ ಬಂದು ಅಪ್ಪಳಿಸಿತು. ಎಂದರೆ, ವಾಡಿಕೆಯ ಶಾಂತ, ದಾಂತ, ಭ್ರಾತೃವತ್ಸಲ, ವಿನಮ್ರವಿದುರನು ಧೃತರಾಷ್ಟ್ರನಿಗೆ, "ಪಾಂಡವರು ಸುಟ್ಟು ಸತ್ತರೆಂಬುದು ಸುಳ್ಳು. ಅವರು ಅರಗಿನ ಮನೆಯಿಂದ ಪಾರಾದರು ಮತ್ತು ಬ್ರಾಹ್ಮಣರ ವೇಷದಲ್ಲಿ ದ್ರುಪದನ ಸ್ವಯಂವರ

ಮಂಟಪವನ್ನು ಹೊಕ್ಕರು. ಅರ್ಜುನನು ಪಣವನ್ನು ಗೆದ್ದನು; ಕುಂತಿಯ ಆದೇಶದಂತೆ ಆ ದ್ರೌಪದಿಯು ಪಾಂಡವರ ಪತ್ನಿಯಾದಳು" – ಎಂದು ನೇರವಾಗಿ ನಿವೇದಿಸಲಿಲ್ಲ. ವಿದುರನ ಮನಸ್ಸಿನಲ್ಲಿ ಅರಗಿನಮನೆಯ ಅಮಾನುಷತೆ ಉರಿಯುತ್ತಿತ್ತು. ದುರ್ಯೋಧನನ ಫಜೀತಿ ಆಯಿತೆಂದು ಅವನಿಗೆ ಬಹಳ ಆನಂದವಾಗಿತ್ತು. ತೀವ್ರ ಕಟುತೆ ಮತ್ತು ಒಂದು ಬಗೆಯ ಆಸುರೀ ಆನಂದ ಇವುಗಳ ಆವೇಗವನ್ನು ದಮನಶೀಲ ವಿದುರನಿಗೂ ಒಮ್ಮೆಲೇ ತಡೆಯಲಾಗಲಿಲ್ಲ. ಇಷ್ಟೇ ಅಲ್ಲ; ಜೀವಮಾನದಲ್ಲೇ ಮೊದಲಬಾರಿಗೆ, ಧೃತರಾಷ್ಟ್ರನ ಅಂಗಹೀನತೆಯ ಲಾಭಪಡೆದು ಅವನ ಹುಡುಗರ ಕೃತ್ಯದ ಬಗ್ಗೆ ಅವನನ್ನು ಚುಚ್ಚಿ ಮೋಜು ನೋಡುವ ಕ್ಷಣಿಕ ಮತ್ತು ಕೆಳಮಟ್ಟದ ಸುಖವನ್ನು ವಿದುರನು, ತೀರ ಸಾಮಾನ್ಯ ಪಾತಳಿಯ ಮೇಲೆ ಬಂದು, ಪಡೆಯುತ್ತಾನೆ. ಅಂಥ ಈ ಪ್ರಸಂಗವನ್ನು ವ್ಯಾಸರು ಕಟ್ಟಿನಿಲ್ಲಿಸಿದ್ದು ಹೀಗೆ :

ದ್ರೌಪದಿಯು ಪಾಂಡವರನ್ನು ವರಿಸಿದಳು. ಧೃತರಾಷ್ಟ್ರನ ಮಕ್ಕಳು ಮುಖಭಂಗ ಹೊಂದಿ ಗರ್ವವಿಳಿದು ಹಿಂತಿರುಗಿ ಬಂದರು – ಎಂದು ತಿಳಿದ ಕೂಡಲೆ ವಿದುರನು ಮನದಲ್ಲಿಯೇ ಖುಷಿಪಟ್ಟನಲ್ಲದೆ, ಧೃತರಾಷ್ಟ್ರನಿಗೆ ಹೇಳುತ್ತಾನೆ "ಕುರುಗಳ ಅಭಿವೃದ್ಧಿಯಾಗಲಿ" ಎಂದು. ಇದನ್ನು ಕೇಳಿ ವಿಸ್ಮಿತನಾದ ಧೃತರಾಷ್ಟ್ರನು ಹಿಗ್ಗಿನ ಭರದಲ್ಲಿ "ಉತ್ತಮವಾಯಿತು, ಉತ್ತಮ ವಾಯಿತು" ಎನ್ನುತ್ತಾನೆ. ಅವನಿಗೆ ದ್ರುಪದಕನ್ಯೆಯು ದುರ್ಯೋಧನನನ್ನೇ ವರಿಸಿದಳೆಂದೆನಿಸಿತು. ಆ ಅಂಧನಿಗೆ ಸತ್ಯಸಂಗತಿ ಗೊತ್ತೇ ಆಗಿರಲಿಲ್ಲ. ಅನಂತರ ದ್ರೌಪದಿಗಾಗಿ ವಿಪುಲ ಅಲಂಕಾರಗಳನ್ನು ತರಿಸಿ ಹೇಳುತ್ತಾನೆ. "ಕೃಷ್ಣೆಯನ್ನೂ, ಮಗ ದುರ್ಯೋಧನನನ್ನೂ ಕರೆತನ್ನಿ" ಎಂದು. ಆಗ ವಿದುರ ಹೇಳುತ್ತಾನೆ : "ದ್ರೌಪದಿಯು ವರಿಸಿದ್ದು ಪಾಂಡವರನ್ನು; ಅವರು ಕ್ಷೇಮದಿಂದ ಇದ್ದಾರೆ; ದ್ರುಪದನು ಆ ವೀರಪುರುಷರಿಗೆ ಯಥೋಚಿತ ಸಂಭಾವನೆ ಮಾಡಿದ್ದಾನೆ" ಎಂದು. ಅದಕ್ಕೆ ಧೃತರಾಷ್ಟ್ರನು ಉದ್ಗರಿಸುತ್ತಾನೆ : "ಅವರು ಪಾಂಡುವಿನ ಮಕ್ಕಳು. ಆದರೆ ಅದಕ್ಕಿಂತ ಹೆಚ್ಚಾಗಿ ಅವರು ನನ್ನ ಮಕ್ಕಳೇ ಆಗಿದ್ದಾರೆ" – ಎಂಬುದಾಗಿ.

ಪ್ರಸಂಗವಿಷ್ಟೇ ಇದ್ದರೂ ಅದರಲ್ಲಿ ಎಷ್ಟು ಮೊನಚಿದೆ! ಕೌರವರಿಗೆ ಭೀಮನಂಥವರ ಅಸಂಖ್ಯ ವಾಕ್ತಾಡನದಿಂದ ಉಂಟಾಗದಂಥ ತಿವಿತ, ಅತ್ಯಂತ ಕಟುವಾಗಿ ವಿದುರನ ಬಾಯಿಂದ ಹೊರಬೀಳುತ್ತದೆ. ವಿದುರನ ಮೇಲೆ

ಕ್ಷಣಮಾತ್ರ ಬಿದ್ದ ಈ ಛಾಯೆಯ ಅನುರೋಧವಾಗಿ ವ್ಯಾಸರು ನಾಟ್ಯದ ಕಲಾನಿಷ್ಪತ್ತಿಯನ್ನು ಸಾಧಿಸಿದ್ದಾರೆ. ಪಾಂಡವರ ಸಿದ್ಧಿ, ಲಾಕ್ಷಾಗೃಹದಲ್ಲಿ ಅವರ ಮೇಲಾದ ಅನ್ಯಾಯದ ಪರಿಮಾರ್ಜನೆ ಇಷ್ಟನ್ನೇ ಹೇಳಲು ಅವರು ಈ ಪ್ರಸಂಗವನ್ನು ಉಪಯೋಗಿಸಿದ್ದಲ್ಲ. ಇದರಲ್ಲಿ ಕೇವಲ ಕೌರವರನ್ನು ಚಿವುಟುವುದನ್ನೊಂದೇ ಸಾಧಿಸಿಲ್ಲ. ಪಾಂಡವರ ಮೇಲಿನ ಮುಂಬರುವ ದುರ್ಧರ ಪ್ರಸಂಗದ ನಾಂದಿಯೂ ಈ ಪ್ರಸಂಗವಾಗಿದೆ. ಆದ್ದರಿಂದ ಕೌರವರನ್ನು ಚುಚ್ಚಿ ಮಾತಾಡುವ ಕೃತ್ಯವನ್ನು ಪಾಂಡವರಿಂದ ಮಾಡಿಸದೆ ಇಂಥ ಸೌಮ್ಯ ಆದರೆ ಅರ್ಥಗರ್ಭಿತ ರೀತಿಯಿಂದ ರಚಿಸುವುದರಲ್ಲಿ ಮಿಗಿಲಾದ ಔಚಿತ್ಯವಿದೆ.

ಹೀಗೆ ಒಂದು ಕ್ಷಣದಲ್ಲಿ ತಿರುವುಮುರುವಿನ ಭಾವನೆಗಳಿಗೆ ತುತ್ತಾಗಿ ಧೃತರಾಷ್ಟ್ರನಿಗೆ ಸಂಭ್ರಮವುಂಟಾಯಿತು. "ಪಾಂಡವರು ಪಾಂಡುವಿಗಿಂತ ನನಗೆ ಹೆಚ್ಚು ಪ್ರಿಯರಾಗಿದ್ದಾರೆ" ಎಂದು ಹೇಳಿ ಈ ಪ್ರಸಂಗವನ್ನು ಗಡಿಬಿಡಿಯಿಂದ ಸುರುಳಿಸುತ್ತಿಡುವ ತಂತ್ರವೂ ಪರಿಣಾಮಕಾರಿಯಾಗಿದೆ. ಭೀರು ಮನಸ್ಸಿನ ವೃತ್ತಿ ಚಾಂಚಲ್ಯದ ನಾಟ್ಯವು ಈ ಪ್ರಸಂಗದಲ್ಲಿದೆ. ಈ ನಾಟ್ಯವು ವಿದಾರಕವಿದ್ದರೂ ಅದರ ಪರಿಣಾಮವು ಧೃತರಾಷ್ಟ್ರನ ಬಗೆಗೆ ತಿರಸ್ಕಾರ ಹುಟ್ಟಿಸುವುದರಲ್ಲಿ ಆಗುವುದಿಲ್ಲ. ತಿರುಗಿ ಧೃತರಾಷ್ಟ್ರ ಅವನ ಮಕ್ಕಳು ಮತ್ತು ಪಾಂಡವರು, ಈ ಎಲ್ಲರ ಬಗೆಗೆ ಒಂದು ಪ್ರಕಾರದ ಕರುಣೆಯೇ ಹುಟ್ಟುತ್ತದೆ. ಧೃತರಾಷ್ಟ್ರನು ಸ್ವತಃ ಖಲಪುರುಷನೆಂದು ಪ್ರತೀತನಾಗದೆ ವತ್ಸಲನಾದ ತಂದೆಯ ದುರ್ಧರ ದೈವವನ್ನು ಭೋಗಿಸುವ ಮನುಷ್ಯನೆಂದು ಪ್ರತೀತನಾಗುತ್ತಾನೆ. ಒಂದು ರೀತಿ ವಿದುರನ ಉಡಿಯಲ್ಲಿ ಇಷ್ಟು ಚಿಕ್ಕದಾದರೂ ದೋಷದ ಭಾಗವನ್ನು ಕಾಣಿಸುವುದರಲ್ಲಿ ವ್ಯಾಸರು ಸತ್ವ–ರಜ–ತಮಗಳ ಒರೆಗಲ್ಲಿಗೆ ಅವನನ್ನು ತಿಕ್ಕುವುದನ್ನು ಬಿಡಲಿಲ್ಲ. ಈ ತ್ರಿಗುಣಾತ್ಮಕ ಸ್ವಭಾವ ರಚನೆಯ ಅಸಾಮಾನ್ಯ ಅರಿವಿನ ಮೂಲಕವೇ ವ್ಯಾಸರಿಗೆ ಮಹಾಭಾರತದ ಅಗಣಿತ ವ್ಯಕ್ತಿರೇಖೆಗಳನ್ನು ಕ್ಷಣಕ್ಷಣದ ಕೃತಿಗಳ ಚಿತ್ರಣದ ಅನುಸಾರವಾಗಿ ಕೊರೆಯಲು ಸಾಧ್ಯವಾಯಿತು; ಜೀವಂತಗೊಳಿಸಲು ಸಾಧ್ಯವಾಯಿತು. ಅಸ್ಥಿಮಾಂಸಗಳಿಂದ ತುಂಬಿದ ಮನಸ್ವೀ ವ್ಯಕ್ತಿಗಳಾಗಿ ಕಾಣಿಸಲು ಸಾಧ್ಯವಾಯಿತು. ಆದ್ದರಿಂದಲೆ ಖಲತ್ವವನ್ನು ಒಂದು ವ್ಯಕ್ತಿಯಲ್ಲಿ ಜಡಿದು ತುಂಬಿಟ್ಟು ಸುಳ್ಳು ಅಥವಾ ಕಾಲ್ಪನಿಕ ಆದರ್ಶಗಳನ್ನು ನಿರ್ಮಿಸುವ ಹೆಣಗಾಟ ಮಾಡುವ ಅಗತ್ಯ ಅವರಿಗೆ ಬೀಳಲಿಲ್ಲ. ಈ ತ್ರಿಗುಣದ ಅರಿವು ಬೌದ್ಧತತ್ತ್ವಜ್ಞಾನದಲ್ಲಿ ಇಲ್ಲ. ಆದ್ದರಿಂದ ಬೌದ್ಧವಾಙ್ಮಯದಲ್ಲಿ ಬುದ್ಧನು

ಕೇವಲ ಮಾಂಗಲ್ಯದ, ಕಲ್ಯಾಣದ ಪ್ರತೀಕ; ಮಾರನು, ಅಕಲ್ಯಾಣದ, ಪಾಪದ ಪ್ರತೀಕವೆಂದು ಸ್ವಾಭಾವಿಕವಾಗಿಯೇ ಸಿದ್ಧಗೊಂಡಿತು. ಬೈಬಲಿನಲ್ಲಿ ಸೈತಾನನು ಬಂದನು. ಆದರೆ ವ್ಯಾಸರು ಮಾತ್ರ, ಮಾನವನು ಎಷ್ಟೇ ವಿಕಸನಶೀಲನಿದ್ದರೂ, ಅಂತರ್ಗತ ಸಂಘರ್ಷವು ಅವನಿಗೆ ತಪ್ಪಿದ್ದಲ್ಲವೆಂಬುದನ್ನೇ ಮುಖ್ಯವಾಗಿ ಈ ಚಿಕ್ಕದೊಡ್ಡ ಲೋಪದೋಷಗಳ ಮೂಲಕ ಹೆಜ್ಜೆಹೆಜ್ಜೆಗೆ ತೋರಿಸುತ್ತ ಹೋದರು. ಈ ಅನಂತ ಲೋಪದೋಷಗಳ ಪರಿಪಾಕಕ್ಕೆ ಅವರು 'ದೈವ' ವೆಂದರು; ಆ ದೈವದ ವಿರಾಟ್‌ಲೀಲೆಯಲ್ಲಿ ಮಾನವೀ ಜೀವನದ ಎಳೆಗಳು ಹೇಗೆ ಹೆಣೆದುಕೊಂಡಿವೆಯೆಂಬುದನ್ನು ಹೆಜ್ಜೆಹೆಜ್ಜೆಗೆ ಕರ್ಮಗತಿಯ ತತ್ತ್ವಜ್ಞಾನದ ಆಧಾರದಿಂದ ತೋರಿಸಿದರು. ಕರ್ಣ, ದುರ್ಯೋಧನ, ವಿದುರ, ಯುಧಿಷ್ಠಿರ, ಅರ್ಜುನ ಇವರೆಲ್ಲರ ಬಾಯಿಂದ, ಹೆಚ್ಚೇನು, "ಪ್ರಕೃತಿಯೇ ನಿನ್ನನ್ನು ಮಾಡಲಿಕ್ಕೆ ಹಚ್ಚುವದು" ಎಂಬಂಥ ಉದ್ಗಾರಗಳಲ್ಲಿ ಕೃಷ್ಣನ ಬಾಯಿಂದಲೂ, ದೈವವು ಅಚಲವೆಂಬುದನ್ನು ಮಹಾಭಾರತದಲ್ಲಿ ಅಲ್ಲಲ್ಲಿ ಹೇಳಿಸಿದ್ದಾಗಿದೆ. ದೈವವನ್ನು ಕುರಿತ ಈ ಉಲ್ಲೇಖಗಳಲ್ಲಿ ಮತ್ತು ಕರ್ಮ ಪರಿಪಾಕದ ಅನುಷಂಗದಿಂದ ಮಹಾಭಾರತದಲ್ಲಿ ಬಂದ ಅತಿ ದುರ್ಧರ ಘಟನೆಗಳಲ್ಲಿ, ಜೀವನದಲ್ಲಿಯ ದುಃಖತತ್ತ್ವವು ಉತ್ಕಟವಾಗಿ ಪ್ರತೀತಿಗೆ ಬರುತ್ತದೆಂಬುದರಲ್ಲಿ ಸಂಶಯವಿಲ್ಲ. ಕೆಲವು ಸ್ಥಾನಗಳಲ್ಲಿ, ಸಂಸಾರದ ದುರ್ಧರತೆಯು, ಅಸಾರತೆಯ ಸೀಮೆಯನ್ನು ತಲುಪಿದೆ. ಪಾಪಗಳಿಗಿಂತ, ಸಂಸಾರದಲ್ಲಿಯ ದುಃಖ ಹೆಚ್ಚು ದುರ್ಭರವಿದೆ ಯೆಂಬುದನ್ನು ಮಹಾಭಾರತದಲ್ಲಿಯ ಶೋಕಪೂರ್ಣವಾದ ವಿವಿಧ ಕಥೆಗಳಲ್ಲಿ ನಾಟ್ಯಪೂರ್ಣ ಭಾವನೆ ಯಿಂದ ಅಲ್ಲಲ್ಲಿ ಸ್ಪಷ್ಟಗೊಳಿಸಲಾಗಿದೆ. ಮಹಾಭಾರತದ ಶೋಕಾತ್ಮಕಭಾವದ ಈ ಲಯವು ಅಸಾಧಾರಣವಾಗಿದೆ. ಭಾರತೀಯ ಮಹಾಕಾವ್ಯದ ಪರಿಕಲ್ಪನೆ ಯಂತೆ ಸ್ಥೂಲವಾಗಿ ನೋಡಿದರೆ ಲಲಿತಕೃತಿಯು ಆನಂದ ಪರ್ಯವಸಾಯಿ ಯಾಗಿರಬೇಕು. ಆದರೆ ಮಹಾ ಭಾರತವು ಪಾಂಡವರ ಸ್ವರ್ಗಾರೋಹಣದಲ್ಲಿ ವಿರಾಮವನ್ನು ಮುಟ್ಟಿದೆ. ಅರ್ಥಾತ್ ಆನಂದಪರ್ಯವಸಾನದ ಸಂಕೇತವನ್ನು ಹಚ್ಚಲಾಗಿದ್ದರಿಂದ ಮಹಾಭಾರತವು (ಮತ್ತು ರಾಮಾಯಣವು) ಈ ಸ್ಥೂಲ ನಿಯಮದಿಂದ ತುಸು ಬದಿಗೆ ಸರಿಸಲ್ಪಟ್ಟಿದ್ದರೆ ಅದಕ್ಕೆ ಸೋಜಿಗಪಡಬೇಕಾಗಿಲ್ಲ. ಹಾಗೆ ನೋಡಿದರೆ ಮಹಾಭಾರತದ ಕರ್ತೃವೂ ಪರಂಪರಾಗತ ವಾಚಕನೂ ಅದನ್ನು 'ಲಲಿತ ಕೃತಿ'ಯೆಂದು ಕರೆಯುವುದೂ ಇಲ್ಲ. ಅಂದಾಗ, ನನ್ನಂತೆ ಯಾರಿಗೆ, ಇದು ಲಲಿತಕೃತಿಯಾಗಿ ಅನಿಸುವುದೋ ಅಂಥವರಿಗೇ ಈ ಪ್ರಶ್ನೆಯು ಕಾಡುತ್ತದೆ.

ಮಹಾಭಾರತದಲ್ಲಿ ಶೋಕಾತ್ಮಕತೆಯ ಪ್ರಜ್ಞೆಯು ಅನನ್ಯ ಸಾಧಾರಣ ವಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಈ ಪ್ರಜ್ಞೆಯು ತುಸು ಕಡಿಮೆಯೆ. ಭವಭೂತಿಯಂಥವರು "ಏಕೋ ರಸಃ ಕರುಣ ಏವ" ಎಂದು ಜೀವ ಹಿಂಡಿಕೊಂಡು ಹೇಳಿದರೂ ಸಂಸ್ಕೃತ ಸಾಹಿತ್ಯದಲ್ಲಿ 'ವೇಣೀಸಂಹಾರ'ದಂಥ ಒಂದು ನಾಟಕವನ್ನು ಬಿಟ್ಟರೆ ಶೃಂಗಾರದ ಅಭಿರುಚಿಗಿಂತ ಮೇಲೆ ಕರುಣಕ್ಕೆ ಗೆಲುವು ಗಳಿಸಲು ಬಂದದ್ದು ತೀರ ವಿರಳವೇ. ಕರುಣೆಯು ಎಲ್ಲ ಛಾಯೆ ಗಳೊಂದಿಗೆ, ಎಲ್ಲ ಆಕೃತಿ ಬಂಧಗಳೊಂದಿಗೆ, ಎಲ್ಲ ಕಲ್ಪನಾಬಂಧ ಗಳೊಂದಿಗೆ, ಜೀವನದ ಪ್ರತಿ ಕಲೆಕಲೆಯನ್ನೂ ಸ್ಪರ್ಶಿಸುವ ದಿಗ್ದರ್ಶನ ಎಲ್ಲಾದರೂ ಆಗಿದ್ದರೆ ಅದು ಕೇವಲ ಮಹಾಭಾರತದಲ್ಲಿಯೇ. ಮಹಾಭಾರತವು ದೈವಿಕ ಕಥೆಯೊಳ ಗಿಂದ ಸ್ಫುರಿಸಿದೆ. ಕೃಷ್ಣನ ರೂಪದಲ್ಲಿ ಮಾನವರೂಪೀ ಪರಮಾತ್ಮನ ದರ್ಶನವು ಅದರಲ್ಲಿ ಘಟಿಸಿದೆ; ಮತ್ತು ದೈವಿಕ ಕಥೆಯ ಪ್ರತೀಕವನ್ನು ಈ ರೀತಿಯಿಂದ ಸ್ಥಿರವಾಗಿಸಿದೆ. ದೈವಿಕ ಕಥೆಗೆ ಅನುರೂಪವಾಗುವಂಥ ವಿಶಾಲ ಪರಿಮಾಣ ಗಳನ್ನೂ ಅದರೊಳಗಿನ ಪಾತ್ರಗಳಿಗೆ ಕೊಡಲಾಗಿದೆ. ಆದ್ದರಿಂದಲೇ ಆ ಪಾತ್ರಗಳು ನಮ್ಮೊಳಗಿನವಾಗಿದ್ದರೂ ನಮ್ಮ ಜೀವನದಲ್ಲಿ ಅವು ಹಿಡಿಸುವುದಿಲ್ಲ. ಮಾನವತೆಯ ಭಾರಗಳು, ಸುಖ-ದುಃಖಗಳು, ವಿಚಾರ-ವಿಕಾರಗಳನ್ನು ಹೊತ್ತು ತೂಗಿಸಿಕೊಂಡು ಆಚೆಯ ತೀರಕ್ಕೆ, ತೀರ ಅನಂತದ ತೆಕ್ಕೆಯ ತನಕ ಮುಟ್ಟಿಸುವ ದೈವಿಕ ಕಥೆಯೊಳಗಿನ ಪಾತ್ರಗಳ ಕಾರ್ಯವನ್ನು ಈ ಪಾತ್ರಗಳೂ ಸಹಜವಾಗಿ ಮಾಡುತ್ತವೆ; ಆ ಕಾರ್ಯಕ್ಕೆ ಮತ್ತು ಅದರ ಹಿಂದಿನ ಪ್ರೇರಣೆಗೆ, 'ದೈವಗತಿ'ಯೆಂದು ಹೆಸರುಕೊಡುತ್ತವೆ. ಜೀವಜಂತು, ಮಾನವಪ್ರಾಣ ಇವರನ್ನು ಕೂಡಿಸಿ ಕೊಂಡಿರುವ ವಿಶಾಲವಾದ ನಿಯತಿಯ ಪ್ರಜ್ಞೆ ಮಹಾ ಭಾರತದಲ್ಲಿ ಸತತವಾಗಿ ಜಾಗ್ರತವಿರುತ್ತದೆ. ಅದರಂತೆ ಕರ್ಮದ, ತತ್ತ್ವಜ್ಞಾನದ ಜೊತೆ ಅದಕ್ಕೆ ಇರುವುದರಿಂದ ಅತಿ ವಿಶಾಲವಾದ ಕ್ಷೇತ್ರವನ್ನು ಕಾರ್ಯಕ್ಕಾಗಿ ಯೋಜಿಸುವುದು ಅಗತ್ಯವಾಯಿತು. ಜೀವನ ಮರಣಗಳ ಸೂಕ್ಷ್ಮ ಹಾಗೂ ವಿರಾಟ್ ಸ್ವರೂಪ, ಅವೆರಡರ ನಡುವಿನ ಅಂಟು ಮತ್ತು ಪರಸ್ಪರ ಪೂರಕತೆ ಇವನ್ನು ಅಂತರ್ಗತ ವಿರೋಧಗಳೊಂದಿಗೆ ತೋರಿಸಲಿಕ್ಕೆ ರಣಭೂಮಿಯಂಥ ಅನುರೂಪವಾದ ಕ್ಷೇತ್ರವು ಇನ್ನೆಲ್ಲಿ ಇರಬಲ್ಲದು? 'ಜಯ'ವೆಂಬ ಕಲ್ಪನೆ ಯಲ್ಲಿಯೇ ಎಲ್ಲ ಸಂಘರ್ಷ, ಎಲ್ಲ ಸಾಫಲ್ಯ ವೈಫಲ್ಯಗಳೂ ಬರುತ್ತವೆ. ಪೌರುಷ ಬರುತ್ತದೆ; ಕರ್ಮಮಯತೆ ಬರುತ್ತದೆ; ವೇಗವು ಬರುತ್ತದೆ; ಆವೇಗವು ಬರುತ್ತದೆ; ಕುರೂಪತೆ ಬರುತ್ತದೆ; ಉದಾರತೆ ಬರುತ್ತದೆ; ಕಾರ್ಪಣ್ಯ ಬರುತ್ತದೆ.

ಸರ್ವಭೂತಮಾತ್ರರನ್ನು ಅಪ್ಪಿ ಹಿಡಿದುಕೊಳ್ಳುವ ಕಾರುಣ್ಯ ಬರುತ್ತದೆ; ಭಯಂಕರ ದ್ವೇಷವೂ ಬರುತ್ತದೆ; ಉಪರೋಧವು ಬರುತ್ತದೆ; "ಹಾ ಹಾ ಹಾ ಹಾ" ಎಂಬ ರೋದನದ ನಿನಾದ ಬರುತ್ತದೆ. ಕೆಲವೊಮ್ಮೆ ಕಾಮುಕತೆಯ ಸೀತ್ಕಾರಧ್ವನಿಗಳು ಬರುತ್ತವೆ. "ಮುಂದೆ?" – ಎಂಬ ಮೂಢತೆಯೂ ಬರುತ್ತದೆ. "ಹಿಂದೇನಿತ್ತು"? – ಎಂಬ ಖತಿಯೂ ಬರುತ್ತದೆ. ಒದಗಿದ ಗಳಿಗೆಗೆ ಅವಚಿ ಕೊಂಡು ಉಳಿಯುವ ಜಿದ್ದೂ ಬರುತ್ತದೆ. ಇದೆಲ್ಲ, ಭಾರತದ ಬೀಜಾಕೃತಿ ಯಲ್ಲಿಯೇ ತುಂಬಿಕೊಂಡಿರುವ ಸಾರತತ್ವವು ಒಂದು ವಿರಾಟ್‌ಕೃತಿಯಲ್ಲಿ, ಲಲಿತಕೃತಿಯಲ್ಲಿ ಪ್ರಕಟವಾಗುವುದು ಒಂದು ಅಸಾಧಾರಣವಾದ ಸಿದ್ಧಿ.

ಆದರೆ ಶೋಕದ ಕ್ರಂದನ; ಕ್ರೌರ್ಯ, ವೀರ್ಯ, ಧೈರ್ಯ ಇವುಗಳ ಅರ್ಕದಲ್ಲಿ ಬಣ್ಣ ಬಳಿದ ಈ ಪ್ರತಿಪಾತ್ರದ ಆಕೃತಿಯು ಅಕ್ಷಯತೆಯ ವರದಾನದಿಂದವೆಂಬಂತೆ ಸ್ಥಿರವಾಗಿದೆ. ವ್ಯಾಸರ ಪ್ರತಿಭೆಯ ಈ ದುಃಖೋನ್ಮೇಷನ ಶಕ್ತಿಯು ಗ್ರೀಕ್ ಶೋಕಾಂತಿಕೆಯ ಕರ್ತೃಗಳ ಧಾರಣೆಗಿಂತ ಎಷ್ಟೋ ರೀತಿಯಲ್ಲಿ ಉನ್ನತ, ವಿಶಾಲ ಮತ್ತು ದೂರಗಾಮಿಯಾಗಿದೆ. ಗ್ರೀಕ್ ದುಃಖಾಂತಿಕೆಗಳಲ್ಲಿ ಪಾತ್ರಗಳ ಪರಿಮಾಣಗಳು ವಿಶಾಲವಾಗಿರುತ್ತವೆ. ಭೂಮಿಯು ವಿಸ್ತೃತವಾಗಿರುತ್ತದೆ. ಉದಾತ್ತತೆಯ ಪರಿಪಾಕವು ಉತ್ತಮವಾಗಿರುತ್ತದೆ. ಸೌಂದರ್ಯದ ಜಾಗ್ರತ ಪ್ರಜ್ಞೆಯಿರುತ್ತದೆ. ನಳನಳಿಸುವ ಶೃಂಗಾರದ ವೈಭವವಿರುತ್ತದೆ. ಐಹಿಕ ಜೀವನದ ಪರಮ ಆಸಕ್ತಿಯಿರುತ್ತದೆ. ಆದರೆ ಹಿರಿಕಿರಿಯರ ದೊಡ್ಡದೊಡ್ಡ ದುಃಖಗಳಲ್ಲಿ ತುಂಬಿದ ನಾಟಕೀಯತೆಯನ್ನು, ವ್ಯಾಸರ ಪ್ರತಿಭೆಯು ಮಾನವ ಸ್ವಭಾವದ ಸೂಕ್ಷ್ಮ ಆಕಲನದ ಬಲದ ಮೇಲೆ ತೂಗಿ ಹಿಡಿದಂತೆ, ಹಿಡಿಯುವುದು ಹೋಮರನಿಗೂ ಸಾಧ್ಯವಾಗಲಿಲ್ಲ. ಗ್ರೀಕ್ ಮಹಾಕಾವ್ಯಗಳಲ್ಲಿ ದೇವತೆಗಳ ಪ್ರಕೋಪ, ಪ್ರೇಮ, ಮತ್ಸರ ಇವು ಪುರುಷ ಪ್ರಯತ್ನದ ಕ್ಷೇತ್ರವನ್ನೇ ಸಂಕೋಚಗೊಳಿಸಿವೆ. ದೈವದ ಕಲ್ಪನೆಗೆ ಸಂಬಂಧಿಸಿದಂತೆ ಗ್ರೀಕರಿಗೂ ಮಹಾಭಾರತಕಾರರಿಗೂ ವ್ಯತ್ಯಾಸ ಕಾಣುವುದು ಇಲ್ಲಿಯೇ. ಕರ್ಮದ ತತ್ವಜ್ಞಾನ ಬಂದಲ್ಲಿ, ಕರ್ಮಮಯತೆಗೆ ಕೊನೆಗೂ ಒಂದು ಮರ್ಯಾದೆ ಒದಗಿದರೂ ಅದರ ಕ್ಷೇತ್ರವು ಎಷ್ಟೋ ವಿಶಾಲವೂ ಗಹನವೂ ಆಗುತ್ತದೆ. ಅಷ್ಟೇ ಅಲ್ಲ, ಕರ್ಮದ ಆಚೆಯ ಅಜ್ಞಾತದ ಪ್ರಜ್ಞೆಯೂ ಮಾನವನ ಆತ್ಮಕ್ಕೆ ಬರಬಲ್ಲದು – ಎಂಬ ಶ್ರದ್ಧೆಯು ಎಲ್ಲ ನಿರಾಶೆ, ಭೀರುತೆ, ಸಾಶಂಕತೆಗಳನ್ನೂ ದೂರ ತಳ್ಳುತ್ತದೆ. ಆಗ ಆ ಅಜ್ಞಾತ ಸತ್ಯದ ಪ್ರತೀಕ್ಷೆಯ ತೀವ್ರವೂ ಉನ್ಮನಸ್ಕವೂ

ಆದ ಉತ್ಕಂಠತೆಯು ಎಲ್ಲ ವ್ಯವಹಾರಗಳನ್ನೂ ಭೌತಿಕ ವ್ಯಾಪಾರಗಳನ್ನೂ ಭಾವನೆಗಳನ್ನೂ, ಅವುಗಳ ಮೂಸೆ ಸ್ವಲ್ಪವೂ ಬದಲಾಗಲು ಬಿಡದೆ, ಹೊಸ ಹುರುಳಿನಿಂದ ತುಂಬಿಕೊಡುತ್ತದೆ. ಆದ್ದರಿಂದಲೆ, "ತಮಸೋಮಾ ಜ್ಯೋತಿರ್ಗಮಯ" ಎಂಬ ಉಪನಿಷದ್ವಾಕ್ಯದ ಕಾವ್ಯಮಯ ಹಾಗೂ ಪ್ರತ್ಯಕ್ಷ ಪ್ರತೀತಿಯೂ ನಮಗೆ ಮಹಾಭಾರತದಲ್ಲಿ ಉಂಟಾಗಲು ಶಕ್ಯವಾಗುತ್ತದೆ. ಇಷ್ಟೇ ಅಲ್ಲ; ಪಾಂಡವರ ಮರಣದ ನಂತರ, ಯುಧಿಷ್ಠಿರನು ಸ್ವರ್ಗವನ್ನು ಎದುರಿಸಿದಾಗ ಯುದ್ಧದ ಎಲ್ಲ ಪರಿಪಾಕವನ್ನೂ ನಾವು ಮರೆಯುತ್ತೇವೆ. ಆ ಸ್ವರ್ಗದ್ವಾರದ ಬಿರುಕಿನೊಳಗಿಂದ ನಿಯತಿಯು ಚೆಲ್ಲುವ ಒಂದು ಕಿರಣವನ್ನು ಅನುಸರಿಸಿ ಮಾತ್ರ ನಾವು ಅವಧಾನವಿರದೆ ಸಹಜವಾಗಿ "ತೇಜೋಸಿ ಮಯಿ ತೇಜೋ ದೇಹಿ" ಎಂದುಬಿಡುತ್ತೇವೆ. ಆದ್ದರಿಂದಲೆ ಗ್ರೀಕ್ ಶೋಕಾಂತಿಕೆಗಳನ್ನು ಓದಿದ ಅನಂತರ ಜೀವನದ ಸುಂದರ ಶಿಲ್ಪವನ್ನು ಹಟಮಾರಿ, ಛಲವಾದಿ ದೈವವು ಕ್ಷುದ್ರನೆಂದು ವಿಧ್ವಂಸಗೊಳಿಸಿಬಿಟ್ಟ ಬಗೆಗೆ ನಮಗೆ ಅನಿಸುತ್ತಿರುವ ವಿಫಲತೆಯ ಅಂಶವೂ ಮಹಾಭಾರತದಲ್ಲಿ ಸಿಗುವುದಿಲ್ಲ.

ವ್ಯಾಸರ ಧರ್ಮಾವಗುಂಠಿತಕಲೆಯ ವಿಶೇಷವೇ ಇದು. ಇದು, ಗವಿಗಳಲ್ಲಿ ಕೆತ್ತಿದ ಶಿಲ್ಪದಂತೆ, ಯಾರಿಗೆ ಹೇಗೆ ನೋಡಬೇಕೆಂಬ ಇಚ್ಛೆಯಿದೆಯೋ, ಯಾರಿಗೆ ಎಂಥ ಪಾತ್ರತೆಯಿದೆಯೋ, ಅದಕ್ಕನುಕೂಲವಾಗುವಂತೆ ಆಂತರಿಕವಾದ ಒಂದು ಲೋಕವನ್ನು ನೋಡುವವರಲ್ಲಿ ಅಥವಾ ಕೇಳುವವರಲ್ಲಿ ತೆರೆಯುತ್ತದೆ. ವ್ಯಾಸಪ್ರತಿಭೆಯು ಕ್ರಾಂತದರ್ಶಿಯೆಂಬುದು ಈ ಅರ್ಥದಲ್ಲಿಯೇ. ಏನೆಂದರೆ ಕ್ಷುದ್ರ, ಸಂಕುಚಿತ, ಪಾಪಪೂರಿತ, ಕುರೂಪ ಎನ್ನಿಸುವ ವ್ಯಕ್ತಿ ಮತ್ತು ಘಟನೆಗಳನ್ನು ಕೂಡ ಅದು ನೇರವಾಗಿ ತನ್ನಲ್ಲಿ ಅಡಕ ಮಾಡಿಕೊಳ್ಳುತ್ತದೆ. ಕೇವಲ ನೀತಿ, ಸೌಂದರ್ಯ, ಭವ್ಯತೆಗಳೇ ಅದಕ್ಕೆ ಪ್ರಿಯವೆಂದಲ್ಲ. ಈ ಸಮಭಾವ, ಕೇವಲ ಸ್ವಂತದ ನಿರ್ಮಿತಿಯ ಕಡೆಗೆ ಅತಿ ಅಲಿಪ್ತ ಮತ್ತು ಅತಿ ಜಾಗರೂಕ ದೃಷ್ಟಿಯಿಂದ ನೋಡಬಲ್ಲ ಪ್ರತಿಭಾವಂತನಿಗೆ ಮಾತ್ರ ಸಾಧ್ಯವಾಗುತ್ತದೆ. ವಿಶ್ವರೂಪದರ್ಶನವನ್ನು ಈ ವ್ಯಾಪಾರದ ಪ್ರತೀಕವೆಂದು ತಿಳಿಯಲು ಅಡ್ಡಿಯಿಲ್ಲ. ನಿಯತಿಯ ಲೀಲೆಯು ಮಹಾಭಾರತದ ಕಥೆಯ ಮಹತ್ವದ ಸೂತ್ರವಾಗಿದ್ದರೂ, ಅದರ ವಿರಾಟ್ ಹಾಗೂ ಕ್ರೂರ ಸ್ವರೂಪವು ಪ್ರತೀತ ವಾಗುತ್ತಿದ್ದರೂ, ಒಂದು ಸತ್ಯವು ಸತತವಾಗಿ ಭಾಸವಾಗುತ್ತಿರುತ್ತದೆ. ಮಾನವನ ಭೌತಿಕ ನಿಯತಿಯು ಇತರ ಜೀವಸೃಷ್ಟಿಯಂತೆಯೇ ಇದೆ. ಆದರೆ ಆತ್ಮಿಕ

ಜೀವನವು ಎಲ್ಲ ಭೌತಿಕ ಆವಿಷ್ಕಾರಗಳ ಆಚೆಯ ಚಿನ್ಮಯ ಶಕ್ತಿಯೊಂದಿಗೆ ಹೊಂದಿಕೊಂಡಿದೆ. ಈ ಸತ್ಯವು ಮಹಾಭಾರತದಲ್ಲಿಯ ದೈವವಾದದ ತಳದಲ್ಲಿದೆ.

ಆದರೆ ಈ ಸತ್ಯವನ್ನು ಸೂಚಿಸುವಾಗ, ಸ್ಥಲಕಾಲಾತೀತತೆಯ ಸೀಮೆಯ ತನಕ ಅದನ್ನು ತಲಪಿಸುವಾಗ ವ್ಯಾಸರು ಸದ್ಯದ ಕ್ಷಣದ ಮೇಲೆಯೇ ಲಕ್ಷ್ಯವನ್ನು ಕೇಂದ್ರೀಕರಿಸಬೇಕಾಯಿತು. ಇದು ವಿಶೇಷವಿದ್ದಷ್ಟೇ ಸ್ವಾಭಾವಿಕವೂ ಆಗಿದೆ. ಆದ್ದರಿಂದಲೆ ಯುದ್ಧದ ಘಟನೆಯು ಒಂದು ಅತ್ಯಂತ ಅನುಕೂಲವಾದ ಕಥಾವಸ್ತುವಾಗಿತ್ತು. ಬೌದ್ಧವಾಙ್ಮಯದಲ್ಲಿಯೂ ಬುದ್ಧನಿಗೆ ಶಾಂತಿಯನ್ನು ಪಡೆಯಲಿಕ್ಕೆ ಮಾರನ ಸೇನೆಯೊಂದಿಗೆ ಮುಖಾಮುಖಿಯಾಗುವ ಪ್ರಸಂಗ ಬಂತು. ಹಾಗೆಯೇ ಈ ಯುದ್ಧದ ಪ್ರತೀಕವನ್ನು ಪ್ರತ್ಯಕ್ಷ ಕಥೆಯ ರೂಪದಲ್ಲಿ ವ್ಯಾಸರು ಉಪಯೋಗಿಸಿದ್ದಾರೆ. ಇಷ್ಟೇ; ಮಾರನ ಸೇನೆಯ ಹಾಗೂ ಮಹಾಭಾರತದಲ್ಲಿಯ, ಸಂಗ್ರಾಮದ ಉದ್ದೇಶ ಭಿನ್ನವಾಗಿತ್ತು. ಇದನ್ನು ಮರೆಯುವಂತಿಲ್ಲ. ಮಾರನ ಸೇನೆಯ ಪ್ರಯೋಜನವು ಸರ್ವಥಾ ಆಧ್ಯಾತ್ಮಿಕವಾಗಿದೆ. ಬುದ್ಧನ ಕಲ್ಯಾಣಮಯ, ಮಂಗಲಪ್ರದ, ಶುಭಸ್ವರೂಪವು ಪಾಪದ, ಮೋಹದ, ಕ್ರೌರ್ಯದ ರೂಪದಿಂದ ಸರ್ವಥಾ ಬೇರೆಯೆಂಬುದನ್ನು ಕಾಣಿಸುವುದಕ್ಕಾಗಿ ಮಾರನ ನಿರ್ಮಾಣವಾಗಿದೆ. ಆದರೆ ಭಾರತ ಯುದ್ಧವು ಕಥೆಯ ಮೂಲ ತಿರುಳೆಂದು ಕಲ್ಪಿಸುವಾಗ ಆಧ್ಯಾತ್ಮಿಕ ಮೌಲ್ಯಕ್ಕಿಂತ ಕಲಾತ್ಮಕ ಮೌಲ್ಯವೇ ಹೆಚ್ಚಿನ ಮಹತ್ವದ್ದಾಗಿದೆಯೆಂಬುದು ವ್ಯಾಸರಿಗೆ ಪ್ರತೀತವಾಗಿದೆಯೆಂಬುದಕ್ಕೆ ಆಧಾರಗಳು ಯುದ್ಧದ ಸಮ್ಯಕ್‌ದರ್ಶನದಲ್ಲಿ ಸಿಕ್ಕುತ್ತವೆ. ಕಥೆಯಲ್ಲಿಯೂ ಪಾತ್ರಗಳ ಸ್ವಭಾವದಲ್ಲಿಯೂ ಯುದ್ಧದ ತಿರುಳನ್ನು ಅವರು ಅತಿಶಯ ಅಭಿಜ್ಞತೆಯಿಂದ ತುಂಬಿದ್ದು ಅಲ್ಲಲ್ಲಿ ಕಂಡುಬರುತ್ತದೆ. ವ್ಯಾಸರಿಗೆ ಅಭಿಪ್ರೇತವಿರುವ ಕರುಣೆ, ಶೋಕ ಇವು ವಾಲ್ಮೀಕಿಯ ಕರುಣೆ ಶೋಕಗಳ ಅನುಭೂತಿಯಿಂದ ಸಾಕಷ್ಟು ಭಿನ್ನವಾಗಿವೆ. ಮೂಲ ಮಾನವಸ್ವಭಾವದಿಂದ ಭಿನ್ನವಾದ ಆದರ್ಶಗಳ ಅಸ್ತಿತ್ವವು ವ್ಯಾಸರ ಪ್ರತಿಭೆಗೆ ಮಾನ್ಯವಿಲ್ಲ. ಆದ್ದರಿಂದಲೆ ತನ್ನ ಕಥೆಗಾಗಿ ಅದು ಚಿಕ್ಕಪುಟ್ಟ ಸೂಕ್ಷ್ಮಕ್ರಿಯೆ, ಹೇತು ಮತ್ತು ಅವುಗಳ ಮೇಲೆ ಒಳಿತು ಕೆಡುಕು ಅಭಿಪ್ರಾಯಗಳನ್ನು ಸಂಜಯನ ಕಡೆಯಿಂದ ಕಾಲಕಾಲಕ್ಕೆ ಹೇಳಿಸಿ ಯುದ್ಧದ ಉಪಯೋಗವನ್ನು ಮಾಡಿಕೊಂಡಿದೆ. ಯುದ್ಧದಲ್ಲಿ ಮಾನವನ, ಕಪ್ಪಿಗಿಂತ ಕಪ್ಪು ಮತ್ತು ಚೆಲುವಿಗಿಂತ ಚೆಲುವು – ಆಗಿರುವ

ಸ್ವರೂಪವು ಪ್ರಕಟವಾಗುತ್ತದೆ. ಯುದ್ಧದಲ್ಲಿ ಮನುಷ್ಯನು ಕ್ರೂರಿಯಾಗುತ್ತಾನೆ; ಅಧೀರನಾಗುತ್ತಾನೆ; ಗಾಬರಿಯಾಗುತ್ತಾನೆ; ಹಿಂದಿನದನ್ನು ಒಮ್ಮೆಲೆ ಹಂಬಲಿಸುತ್ತಾನೆ; ಮರೆಯುತ್ತಾನೆ; ವಿಚಿತ್ರ ಕನಸು ಕಾಣುತ್ತಾನೆ; ಹುಟ್ಟು ಸಾವುಗಳ ಮುಖಾಮುಖಿಯನ್ನು ನೋಡುತ್ತಾನೆ; ಭೋಗಲೋಲುಪ ನಾಗುತ್ತಾನೆ; ಉನ್ಮತ್ತನಾಗುತ್ತಾನೆ; ಗರ್ವಿಷ್ಠನಾಗುತ್ತಾನೆ; ನಮ್ರನಾಗುತ್ತಾನೆ; ವಿರಕ್ತನಾಗುತ್ತಾನೆ; ಕೃಪಣನಾಗುತ್ತಾನೆ; ಉದಾರನಾಗುತ್ತಾನೆ. ಹೆಚ್ಚೇನು? ಜೀವನದ ಕ್ಷಣಭಂಗುರತೆಯನ್ನೂ ಸಫಲತೆಯನ್ನೂ ಕೆಲವು ಬೆರಳೆಣಿಕೆಯ ಕ್ಷಣಗಳಲ್ಲಿ, ಆತ, ಮರ್ಮಜ್ಞತೆಯಿಂದ ಅರಿಯುತ್ತಾನೆ. ಭೂತ ಭವಿಷ್ಯತ್ತು ಗಳನ್ನು ಬುದ್ಧಿಪೂರ್ವಕವಾಗಿ ಬದಿಗೆ ತಳ್ಳುತ್ತಾನೆ. ಸೂಕ್ತ ಕಾಲದಲ್ಲಿ ಹೊಚ್ಚ ಹೊಸ ದರ್ಶನವನ್ನು ಪಡೆಯುತ್ತಾನೆ. ಸೂಕ್ತಕಾಲದ ಸದ್ಯದ ಮಹತ್ವವನ್ನು ಯೋಧನಂತೆ ಮತ್ತಾರು ಅರಿಯಬಲ್ಲರು? ಇಂಥ ಒಬ್ಬನೇ ಅಲ್ಲ, ಅಸಂಖ್ಯಾತ ಯೋಧರ ನಿಷ್ಪಕ್ಷಪಾತ ದರ್ಶನವನ್ನು – ರಸರಾಜ ಶೃಂಗಾರವನ್ನು ಹೊರತು ಪಡಿಸಿ – ಕಥೆಯಲ್ಲಿ ತರುವ ಕಲಾಚಾತುರ್ಯವನ್ನು ವ್ಯಾಸರ ಹೊರತು ಬೇರೆ ಯಾರು ತೋರಿಸಬಲ್ಲರು? ಕ್ಷೋಭೆಯ ಪಟದ ಮೇಲೆ ಶಾಂತಿಯ ಮಂದ ನೀಲವರ್ಣಗಳನ್ನು ತುಂಬುವ ಕೈಚಳಕ ಇನ್ನಾರಿಗೆ ಸಾಧ್ಯವಾಗಿದೆ? ಯುದ್ಧದ ಪ್ರಸಂಗವು ಕೆಲವೇ ದಿವಸದ್ದು ಆದರೂ ಅದರ ಪರಿಣಾಮಗಳು ಬಹುದೂರ ಚಾಚುವಂತಹವು ಮತ್ತು ಮನಸ್ಸಿನ ಮೇಲೆ ಅದರಿಂದುಂಟಾಗುವ ಗಾಯಗಳು ಇನ್ನಷ್ಟು ದೀರ್ಘ ಹಾಗೂ ಆಳವಾಗಿರುವವು. ಈ ದೀರ್ಘತೆಯನ್ನು, ಗೂಢತೆಯನ್ನು, ತೂಗಿಸಿಕೊಳ್ಳಲೋ ಎಂಬಂತೆ ವ್ಯಾಸರು ತಮ್ಮ ಕೃತಿಯನ್ನು ಇಷ್ಟೊಂದು ವ್ಯಾಖ್ಯಾನಗಳು, ಆಖ್ಯಾನಗಳು ಕಥೆ ಉಪಕಥೆಗಳು ಮುಂತಾದ ವಿವಿಧ ಕಲ್ಪನಾಬಂಧಗಳಿಂದ ತುಂಬಿಸಿರಬೇಕು. ತಮ್ಮ ಕೃತಿಯನ್ನು, ಕಥೆಯೆನ್ನದೆ ಇತಿಹಾಸವೆಂದು ಕರೆದು, ಇತಿಹಾಸದ ಎಲ್ಲ ಘಟನೆಗಳ ಪಟ್ಟಿಯಂಥ ಬೇಸರ ತರಿಸುವ ವರ್ಣನೆಗಳನ್ನು ಹಾಸುಹೊಕ್ಕಾಗಿ ಬಳಸಿಯೂ, ವ್ಯಾಸರು ತಮ್ಮ ಕಥೆಯ ಬಂಧವನ್ನು, ಸದಾ ತಾಜಾ ನಳನಳಿಸುವಂತೆ ಇಟ್ಟದ್ದು ಹೇಗೆಂಬುದೇ ಆಶ್ಚರ್ಯಕರವಾಗಿದೆ.

ಕಥೆಯ, ಇಂದು ಯಾವುದನ್ನು ಕಾದಂಬರಿಯೆನ್ನಬಹುದೋ ಅಂಥ ಮಹಾಕಥೆಯ, ಅಂದಾಜು, ವ್ಯಾಸರಿಗೆ ಹೇಗೆ ಆಗಿದ್ದಿರಬೇಕು – ಎಂಬುದನ್ನು ಈಗ ಮತ್ತೆ ಹೇಳಬೇಕಾದ ಅಗತ್ಯವಿಲ್ಲ. ಇಷ್ಟೇ; ಈ ಅಂದಾಜಿನ ಮೂಲಕವೇ

ಅದರ ಕಲಾ ಪ್ರವಣತೆ ಇನ್ನೂ ಹೆಚ್ಚು ಬೆಲೆಯುಳ್ಳದ್ದಾಗಿದೆಯೆಂದು ಸಿದ್ಧವಾಗುತ್ತದೆ. ಡಿ.ಹೆಚ್. ಲಾರೆನ್ಸ್ ಹೇಳುತ್ತಾನೆ : ಕಾದಂಬರಿಕಾರನು ಸಂತ, ಶಾಸ್ತ್ರಜ್ಞ, ತತ್ತ್ವಜ್ಞಾನಿ ಮತ್ತು ಕವಿ – ಇವರಿಗಿಂತ ಶ್ರೇಷ್ಠ; ಏಕೆಂದರೆ ಉಳಿದ ಈ ಎಲ್ಲರಿಗೆ ಜೀವನದ ಒಂದೊಂದೇ ಅಂಗದ ದರ್ಶನವಾಗಿರುತ್ತದೆ. ಆದರೆ ಕಾದಂಬರಿಕಾರನು ಮಾತ್ರ ಸಮಗ್ರ ಜೀವನದ ದರ್ಶನ ಪಡೆಯಬಲ್ಲ. ಕಾದಂಬರಿಯ ಮೂಲಕ ಮನುಷ್ಯನು ಆಳವಾಗಿ ಸ್ಪಂದಿಸಿ ಕಂಪಿಸುತ್ತಾನೆ. ಆದ್ದರಿಂದಲೇ ಕಾದಂಬರಿಯು ಸಮಗ್ರ ಜೀವನದ ಗ್ರಂಥವಾಗಿರುತ್ತದೆ. ಬೈಬಲ್ ಕೂಡ ಒಂದು ಅಪೂರ್ವ ಕಾದಂಬರಿ. ಈ ಕಾದಂಬರಿಯು ಹಿಳಿಲು ಹಿಳಿಲಾಗಿ ಸಂಕೀರ್ಣವಾಗಿದೆ ಮತ್ತು ಶ್ರೇಷ್ಠವಾಗಿದೆ. ಈವ್, ಜೇಕಬ್, ಡೇವಿಡ್, ಜಾಬ್, ರೂಥ್, ಎಸ್ತರ್, ಯೇಸು – ಇವರೆಲ್ಲ ಜೀವಂತ ಮನುಷ್ಯರೇ ಆಗಿದ್ದಾರೆ. ಅಲ್ಲದೆ ಇನ್ನೇನು? ಬೈಬಲ್ಲಿನ ದೇವರೂ ಜೀವಂತ ಮನುಷ್ಯನೇ ಅಲ್ಲವೇ?

ಲಾರೆನ್ಸನ ಈ ವಿಧಾನವು ವ್ಯಾಸರ ಕೃತಿಗೆ ಯಥಾರ್ಥವಾಗಿ ಅನ್ವಯಿಸುತ್ತದೆಯೆನಿಸುತ್ತದೆ ನನಗೆ. ಆದ್ದರಿಂದಲೇ ಗುಣಾಢ್ಯನು ತನ್ನ ಅಮರ ಕೃತಿಯನ್ನು ನಿರ್ಮಿಸುವಾಗ ಮಹಾಭಾರತದ ಅನುಕರಣ ಮಾಡಿದನು. ಬೃಹತ್ಕಥೆಯೆಂದರೆ ಕಾದಂಬರಿಯೇ! ಸಂಕೀರ್ಣ ವಿರಾಟ್ ಕಾದಂಬರಿ. ಮಹಾಕಥೆಯ ತಂತ್ರವನ್ನು ಅವನು ತನ್ನದಾಗಿ ಮಾಡಿಕೊಂಡನು. ಆದರೆ ಅಧ್ಯಾತ್ಮದೊಳಗಿಂದ ವ್ಯಾಸರಿಗೆ ಸ್ಫುರಿಸಿದ ಕಲಾಪ್ರಜ್ಞೆ ಮಾತ್ರ ಅವನಿಗೆ ಅವಗತವಾಗಲಿಲ್ಲವೆಂಬುದು ಖಚಿತ. ವ್ಯಾಸರ ಕೃತಿಯಲ್ಲಿ ಅಕೃತ್ರಿಮವಾದ ಜೀವನವೇ ಕಲೆಯಾಗಿದೆ ಮತ್ತು ಜೀವನದ ಅಂತಿಮ ಉದ್ದೇಶದ ಪ್ರಜ್ಞೆಯು ಎಲ್ಲೂ ಲೋಪವಾಗಿಲ್ಲ. ಜೀವನದ ಎಲ್ಲ ಅವಸ್ಥೆಗಳನ್ನೂ ವ್ಯಾಸರ ಅನುಭವವು ಸಮರೂಪಗೊಳಿಸಿತು. ಈ ಸಮರೂಪತೆಯ ಅರಿವಿನಲ್ಲಿಯೇ ವ್ಯಾಸರು ಮಾಡಿದ ದೈವದ ಕಲ್ಪನೆಯ ಬಳಕೆಯ ಬೀಜ ಹುದುಗಿದೆ. ಜೀವನದ ಅಂತಿಮ ಗುರಿಯನ್ನು ಸಮರೂಪದ ಸಾಧನೆಯ ಮುಖಾಂತರ ಚಿತ್ರಿಸುವಾಗ ವ್ಯಾಸರಿಗೆ ದೊಡ್ಡವರ ದೊಡ್ಡಸ್ತಿಕೆಯನ್ನು ತೋರಿಸುವುದಿತ್ತು. ಆದರೆ ಅದನ್ನು ತೋರಿಸುವಾಗ, ಅವರು ತೋರಿಸಬೇಕಾಗಿದ್ದುದೆಂದರೆ, ಆ ದೊಡ್ಡಸ್ತಿಕೆಯು ಸತ್ತೆಯಲ್ಲಿರುವುದಿಲ್ಲ, ಆದರೆ ಬದುಕಿನ ಅಗಾಧ ಪ್ರವಾಹದಲ್ಲಿ ಬಿರುಗಾಳಿ ಸುಳಿಗಾಳಿಗಳು ಬಂದರೂ ಅದರ ಅನಂತತೆಯ ದರ್ಶನವನ್ನು ಪಡೆಯುವುದರಲ್ಲಿ ಇರುತ್ತದೆಯೆಂಬುದು.

ವ್ಯಾಸರ ಜೀವನದರ್ಶನದ ಅರ್ಥ ಹೀಗಿದೆ : ಜೀವನವು ಸತತವಾಗಿ ಸಾಗುತ್ತಿರುವ ಆತ್ಮದ ಒಂದು ಗತಿಮಾನತೆ. ಈ ಗತಿಮಾನತೆ ಅಪರಿಹಾರ್ಯವಿದ್ದು ವ್ಯಕ್ತಿರೂಪದ ಕೇಂದ್ರದೊಳಗಿಂದ ಕ್ರಿಯೆಯ ರೂಪದಲ್ಲಿ ಸರ್ವತ್ರ ಪ್ರಸಾರಗೊಳ್ಳುತ್ತದೆ. ಆದರೆ ವಸ್ತುತಃ ಅದರ ನಿಟ್ಟು ಒಂದೇ ಧ್ಯೇಯದ ಕಡೆಗಿದೆ. ಆ ಧ್ಯೇಯವೆಂದರೆ, ಸಂಪೂರ್ಣ ಏಕಾತ್ಮತೆಯನ್ನು ಸಾಧಿಸುವುದು. ಆಂತರಿಕ ಪ್ರೇರಣೆ ಮತ್ತು ಬಾಹ್ಯವಿಶ್ವ ಇವುಗಳಲ್ಲಿ ಏಕತಾನತೆ ಸಾಧಿಸುವುದು. ಜೀವನದಲ್ಲಿ ಈ ಸಮತೋಲದ ತತ್ತ್ವವು ಅಭಿಪ್ರೇತವಿದ್ದುದರಿಂದಲೇ ಜೀವನವು ನಿಜವಾದ ಅರ್ಥದಲ್ಲಿ ಎಂದಿಗೂ ಉಧ್ವಸ್ತವಾಗುವುದೇ ಇಲ್ಲ. ಒಂದೇ ಸಮನೆ ಅದು ಪರಿವರ್ತನಗೊಳ್ಳುತ್ತದೆ. ಜನ್ಮದಿಂದ ಜನ್ಮಕ್ಕೆ ಪರಿಪೂರ್ಣ ಜೀವನವು ಸಾಕಾರಗೊಳ್ಳುತ್ತದೆ. ಭಾರತೀಯ ದರ್ಶನದ ಮೇರೆಗೆ ಮನುಷ್ಯನು ಪೂರ್ತಿ ಹೊಸದಾಗಿ ಹುಟ್ಟುವುದು ಶಕ್ಯವೇ ಇಲ್ಲ. ಎಲ್ಲವನ್ನೂ ತೊರೆದು, ಸಾಯುವುದೂ ಶಕ್ಯವಿಲ್ಲ.

ವ್ಯಾಸರು ಜೀವನದೊಳಗಿನ ಗದ್ಯವನ್ನೂ ಕಾವ್ಯವನ್ನೂ ಅಕ್ಷರಶಃ ಗುರುತಿಸಿದ್ದಾರೆ. ಅವರ ಶೈಲಿಯೊಳಗಿಂದ ಮತ್ತು ನಿವೇದನೆಯ ವಿವಿಧ ಪದ್ಧತಿಗಳೊಳಗಿಂದ ಗದ್ಯ ಮತ್ತು ಕಾವ್ಯಗಳ ಸ್ಪಷ್ಟ ಸೀಮಾರೇಖೆಗಳು ಕಾಣಸಿಗುತ್ತವೆ. ವಸ್ತುತಃ ಇಡಿಯ ಗ್ರಂಥವು ಛಂದೋಬದ್ಧವಾಗಿದ್ದರೂ ಎಲ್ಲೆಲ್ಲಿ ನಿವೇದನೆಯು ನೇರ ಕಥನವಾಗಿದೆಯೋ ಸಂಭಾಷಣೆಯ ರೂಪದಲ್ಲಿದೆಯೋ ಅಲ್ಲಲ್ಲಿ ಗದ್ಯದ ಪ್ರಭಾವದ ಅರಿವಾಗುತ್ತದೆ. ಎಲ್ಲಿ ವಿರಾಮಸ್ಥಳಗಳಿವೆಯೋ ಅಲ್ಲಿ ತಾಲಕ್ಕಾಗಿ 'ಪದ್ಯ'ವನ್ನು ವಿಶೇಷ ಪರಿಣಾಮದ ಸಲುವಾಗಿ ಪಲ್ಲವಿಯಂತೆ ಬಳಸಲಾಗಿದೆ. ಉದಾಹರಣೆಗೆ, ವನಪರ್ವದಲ್ಲಿ ದ್ರೌಪದಿಯು ಯುಧಿಷ್ಠಿರ ನನ್ನು ಉದ್ದೇಶಿಸಿ, "ನೀನು ವನಕ್ಕೆ ಹೋದದ್ದನ್ನು ಕಂಡು ಕೋಪವೇಕೆ ಬರಬಾರದು?" ಎಂದು ಕೇಳುತ್ತಾಳೆ. ಆ ವೇಳೆಗೆ ತನ್ನ ಮತ್ತು ತನ್ನ ಪ್ರತಿಯೊಬ್ಬ ಪತಿಯ ದೀನಸ್ಥಿತಿಯನ್ನು ವರ್ಣಿಸುತ್ತ ಆಕೆ "ಕಸ್ಮಾತ್ ಮನ್ಯುರ್ನವರ್ಧತೇ?" ಎಂಬುದನ್ನು ಪಲ್ಲವಿಯಂತೆ ಪಲವು ಸಲ ಬಳಸುತ್ತಾಳೆ. ಧೃತರಾಷ್ಟ್ರ ಸಂಜಯರ ಸಂಭಾಷಣೆಗಳಲ್ಲಿಯೂ ಅಲ್ಲಲ್ಲಿ ಇಂಥ ಪದ್ಯಭಾಗಗಳ ಆವರ್ತನೆ ಕಂಡು ಬರುತ್ತದೆ. ವಿಶೇಷವಾಗಿ ಧೃತರಾಷ್ಟ್ರನು ಉದ್ದುದ್ದ ಸ್ವಗತ ಭಾಷಣಗಳನ್ನು ಮಾಡುವಾಗಂತೂ ಅವು ಹೆಚ್ಚಾಗಿ ಕಾಣಿಸುತ್ತವೆ. ಗದ್ಯಪದ್ಯಗಳ ವಿಭಜನೆಯು ನಿರ್ದಿಷ್ಟ ಪರಿಣಾಮವನ್ನು ಸಾಧಿಸಲಿಕ್ಕೆ ಈ ರೀತಿ ಬಳಸಿ ವ್ಯಾಸರು, ನಾದಗಳ ಒಂದು ಬೇರೆಯೇ ಸಾಮರ್ಥ್ಯವನ್ನು ಪ್ರಕಟಿಸಿದ್ದಾರೆ. ಯುದ್ಧದಲ್ಲಿ ಭೇರಿ,

ದುಂದುಭಿ, ಶಂಖ ಇವುಗಳ ಕರ್ಕಶನಾದ, ಜಯಧ್ವನಿ, ತೋಳ ನರಿಗಳ ಕೂಗಾಟ, ಆಕ್ರಂದನ, ಹೋರಾಟಗಳ ಸದ್ದು – ಹೀಗೆ ತುಮುಲನಾದಗಳ, ಗರಗರ ಸುತ್ತುವ ವಿಶ್ವವನ್ನೇ ಅವರು ರೂಪಿಸಿದ್ದಾರೆ. ಕೆಲವು ಸಲ ತೀರ ನವುರಾಗಿ, ಆ ನಾದವನ್ನು ತೀರ ಮಂದವಾಗಿಸಿ ಕಾವ್ಯದ ಬಿತ್ತನೆ ಮಾಡುತ್ತಾರೆ. ಇನ್ನು ಕೆಲವು ಸಲ ಗೀತಗಳನ್ನು ಹಾಡುತ್ತಾರೆ. ಮಹಾಭಾರತದಲ್ಲಿಯ ಎಲ್ಲಕ್ಕೂ ಸುಂದರವಾದ ಗೀತವು ಕುಂತಿಯು ಅದೇ ಜನಿಸಿದ ಕರ್ಣನನ್ನು ಕರಂಡದಲ್ಲಿಟ್ಟು ಅಶ್ವನದಿಯಲ್ಲಿ ಬಿಡುವಾಗಿನ ಅವಳ ಉದ್ಗಾರಗಳಲ್ಲಿದೆ. ಶೋಕ, ಕಂಪನ, ಕೋಮಲತೆ, ಅಗಲಿಕೆ – ಎಲ್ಲವನ್ನೂ ಇದರಲ್ಲಿ ನಾದಮಯ ಶಬ್ದಗಳ ಆಧಾರದಿಂದ, ಸಾಕಾರಗೊಳಿಸಿದ್ದಾಳೆ. ಅದರಲ್ಲಿಯ ಕೆಲವು ಸಾಲುಗಳು ಹೀಗಿವೆ:

*ಶಿವಾಸ್ತೇ ಸಂತು ಪಂಥಾನೋ ಮಾ ಚ ತೇ ಪರಿಪಂಥಿನಃ ।*
*ಆಗತಾಶ್ಚ ತಥಾ ಪುತ್ರ ಭವನ್ತ್ವದ್ರೋಹ ಚೇತಸಃ ॥*
*ಪಾತು ತ್ವಾಂ ವರುಣೋ ರಾಜಾ ಸಲಿಲೇ ಸಲಿಲೇಶ್ವರಃ ।*
*ಅಂತರಿಕ್ಷೇಂತರಿಕ್ಷಸ್ಥಃ ಪವನಃ ಸರ್ವಗಸ್ತಥಾ ॥*
*ಧನ್ಯಸ್ತೇ ಪುತ್ರ ಜನಕೋ ದೇವೋ ಭಾನುರ್ವಿಭಾವಸುಃ ।*
*ಯಸ್ತ್ವಾಂ ದ್ರಕ್ಷ್ಯತಿ ದಿವ್ಯೇನ ಚಕ್ಷುಷಾ ವಾಹಿನೀಗತಮ್ ॥*
*ಧನ್ಯಾ ಸಾ ಪ್ರಮದಾ ಯಾ ತ್ವಾಂ ಪುತ್ರತ್ವೇ ಕಲ್ಪಯಿಷ್ಯತಿ ।*
*ಯಸ್ಯಾಸ್ತ್ವಂ ತೃಷಿತಃ ಪುತ್ರ ಸ್ತನಂ ಪಾಸ್ಯಸಿ ದೇವಜ ॥*
*ಕೋ ನು ಸ್ವಪ್ನಸ್ತದಾ ದೃಷ್ಟೋ ಯಾ ತ್ವಾಮಾದಿತ್ಯವರ್ಚಸಮ್ ।*
*ದಿವ್ಯವರ್ಮಸಮಾಯುಕ್ತಂ ದಿವ್ಯ ಕುಂಡಲಭೂಷಿತಮ್ ॥*
*ಪದ್ಮಾಯತ ವಿಶಾಲಾಕ್ಷಂ ಪದ್ಮತಾಮ್ರದಲೋಜ್ಜ್ವಲಮ್ ।*
*ಸುಲಲಾಟಂ ಸುಕೇಶಾಂತಂ ಪುತ್ರತ್ವೇ ಕಲ್ಪಯಿಷ್ಯತಿ ॥*
*ಧನ್ಯಾ ದ್ರಕ್ಷ್ಯತಿ ಪುತ್ರ ತ್ವಾಂ ಭೂಮೌ ಸಂಸರ್ಪಮಾಣಕಮ್ ।*
*ಅವ್ಯಕ್ತಕಲವಾಕ್ಯಾನಿ ವದಂತಂ ರೇಣುಗುಂಠಿತಮ್ ॥*

ಈ ಗೀತದಲ್ಲಿ ತೂಗುವ ಕೆಲಸವನ್ನು ತಾಯಿಯ ಬದಲು ನದಿಯು ಮಾಡುತ್ತದೆ. ನದಿಯ ನೀರಿನ ಲಲಿತ ಕಲರವ, ಗಾಳಿಯ ಮಂದಮಂದ ಸುಳಿ, ಇವುಗಳ ಪ್ರತೀತಿಯನ್ನು 'ಲ', 'ವ', ಮತ್ತು 'ರ' – ಈ ಅಕ್ಷರಗಳ ಆವರ್ತನ ಗಳಲ್ಲಿ ಎಷ್ಟು ಸೊಗಲಾಗಿ ಹಿಡಿದಿಡಲಾಗಿದೆ! ತನ್ನ ಮಗು, ದೇವಜನಿತ ವಾಗಿದ್ದರೂ ಅದು ಬಾಯಾರಿಕೆಯಿಂದ ಒದ್ದಾಡುವುದೆಂದು ಅನಿಸಿ ಅಳು

ಹೊಮ್ಮುತ್ತದೆ. ನದಿಯ ಹರಿಯುವಿಕೆಯೇ ಆ ಶೋಕಾವೇಗದ ಪ್ರತೀಕ. ಧೂಳಿನಲ್ಲಿ ಮಾಸಿದ, ಅಂಬೆಗಾಲಿಕ್ಕುವ, ತನ್ನ ಮಗು ಅವಳ ಮನಸ್ಸಿನ ಕಣ್ಣೆದುರು ನಿಂತಿದೆ. ಆದರೆ ಆ ಮಗು ಇಷ್ಟು ಸುಂದರ ಮತ್ತು ತೇಜಸ್ವಿಯಾಗಿದೆ. ಅದರ ಮೋಹವನ್ನು ಹಚ್ಚಿಕೊಳ್ಳುವವರಿಗೆ ಕೊರತೆ ಬೀಳಲಾರದು. ಇದನ್ನು ಆ ನದಿಯ ನೀರಿನ ಜುಳು ಜುಳು, ಅವಳಿಗೆ ಅರುಹುತ್ತದೆ.

ಈ ವಿಷಯದಲ್ಲಿ ಮಹಾಭಾರತವು ರಾಮಾಯಣಕ್ಕಿಂತ ಭಿನ್ನವಾದ ಶೈಲಿಯನ್ನು ಇಟ್ಟುಕೊಂಡದ್ದು ಕಾಣುತ್ತದೆ. ರಾಮಾಯಣವು ಸ್ಪಷ್ಟವಾಗಿಯೇ ಒಮ್ಮೈಕಟ್ಟಿನ ಕಾವ್ಯವಾಗಿದೆ. ಅದು ಗದ್ಯದ ಪಾತಳಿಗೆ ಎಂದೂ ಇಳಿಯುವು ದಿಲ್ಲ. ಅದರ ಕರ್ತೃವಿಗೆ, ತಾನು ಕಾವ್ಯವನ್ನು ರಚಿಸುತ್ತಿದ್ದೇನೆಂಬ ಅರಿವಿದೆ. ಆ ಕಾಲದ ಕಾವ್ಯದ ಎಲ್ಲ ಅಂಗಗಳೂ ರಾಮಾಯಣದಲ್ಲಿ ಬಂದಿವೆ. ರಾಮಾಯಣ ಮಹಾಭಾರತಗಳೆರಡೂ ಜಗತ್ತಿನಲ್ಲಿ ಅದ್ವಿತೀಯ, ಅಪ್ರತಿಮವೆನಿಸುವಂತಹ ಕಾವ್ಯಗಳಾಗಿವೆ. ಗ್ರೀಕ್ ಮಹಾಕಾವ್ಯಗಳು ಸತ್ತವರ ಮೇಲೆ ಬರೆದವು. ಅವುಗಳಲ್ಲಿಯ ಸಂಸ್ಕೃತಿಯು ಜೀವಂತವಿಲ್ಲ. ಆದರೆ ರಾಮಾಯಣ ಮಹಾಭಾರತಗಳು ಸತ್ತ ಸಂಸ್ಕೃತಿಯ ಪ್ರತೀಕಗಳಲ್ಲ. ಅವುಗಳಲ್ಲಿಯ ಬದುಕು ಎಷ್ಟು ಪುರಾತನವೋ ಅಷ್ಟೇ ನವನೂತನವಾಗಿದೆ. ರಾಮಾಯಣದಲ್ಲಿ ಕಾವ್ಯದ ಎಲ್ಲ ಸಂಕೇತಗಳು ಪ್ರಾಮಾಣಿಕವಾಗಿ ನೆಲೆನಿಂತಿದೆ. ಅದು ಸರ್ಗಬದ್ಧವಾಗಿದೆ; ಅದರ ನಾಯಕನು ಉದಾತ್ತನಾಗಿದ್ದಾನೆ. ಅವನ ಚರಿತ್ರೆಯ ಉದ್ಗಾನವೇ ಅದರಲ್ಲಿವೆ. ಮಹಾಭಾರತವೂ ಸರ್ಗಬದ್ಧ. ಆದರೆ ಅದಕ್ಕೆ ನಾಯಕನೆಂದು ಯಾರೂ ಇಲ್ಲ. ಆದರೂ ಕೆಲವೊಂದು ವ್ಯಕ್ತಿಗಳ ಸುತ್ತು ಎಲ್ಲ ಕಥಾಚಕ್ರ ಸುತ್ತುತ್ತದೆ. ಕಾವ್ಯದ ಸಂಕೇತಗಳನ್ನು ಒಂದು ರೀತಿಯಲ್ಲಿ ಬದಿಗೆ ಒಗೆದೇ ಈ ಕಾವ್ಯ ರಚಿತವಾಗಿದೆ. ಇದೊಂದು ಮುಕ್ತಕೃತಿ. ಆದ್ದರಿಂದಲೇ ಇದರಲ್ಲಿ ಗದ್ಯವಿದೆ, ಪದ್ಯವಿದೆ, ಕಾವ್ಯವಿದೆ, ನಾಟ್ಯವಿದೆ ಮತ್ತು ನಿಸ್ಸಾರ ಪ್ರಬಂಧಗಳೂ ಇವೆ. ರಾಮನು ದೇವರ ಅವತಾರ ಮತ್ತು ದೇವಕಾರ್ಯಕ್ಕಾಗಿ ಬಂದವನು. ಆದ್ದರಿಂದ ರಾಮಾಯಣದ ಪ್ರಯೋಜನವು ಧರ್ಮಪ್ರವರ್ತಕವಾಯಿತು. ಆದರೆ ಮಹಾಭಾರತದಲ್ಲಿಯ ಪಾಂಡವರು ದೈವಾಂಶಸಂಭೂತರಿದ್ದರೂ ಮಾನವರೇ. ಕೃಷ್ಣನೂ ಮನುಷ್ಯನೇ. ಆದರೂ ಮಹಾಭಾರತಕ್ಕೆ ಧರ್ಮದ ಸ್ಫುರಣವು ಕೆಲವು ದಿವ್ಯ ಕ್ಷಣಗಳಲ್ಲಿ ಬರುತ್ತದೆ. ಇಲ್ಲಿಯೇ ವ್ಯಾಸನಿಗೆ ಭೌತಿಕ ಮತ್ತು ಆಧ್ಯಾತ್ಮಿಕ ಪ್ರೇರಣೆಗಳನ್ನು ಒಂದೇ ಲಯದಲ್ಲಿ ಹಿಡಿಯುವುದರಲ್ಲಿ

ಯಶಸ್ಸು ಲಭಿಸಿದೆ. ಧರ್ಮ ಮತ್ತು ಕಲೆಗಳು ಒಂದಕ್ಕೊಂದು ಪೂರಕವಲ್ಲವೆಂಬ ತನ್ನ ಮತವನ್ನು ಹರ್ಬರ್ಟ್‌ರೀಡನು ಝೆನ್‌ದ ಕಲಾಪೂರ್ಣ ಚಿತ್ರಗಳನ್ನು ನೋಡಿ ಬಿಟ್ಟುಕೊಡಬೇಕಾಯಿತು. ಪ್ರಜ್ಞೆಯು ಧರ್ಮಾನುಸಂಧಾನಕ್ಕೆ ಹೇಗೋ ಹಾಗೆಯೇ ಕಲಾನುಸಂಧಾನಕ್ಕೂ ಅವಶ್ಯವಿದೆ. ಜೀವನದ ವಿಚಾರವನ್ನು ಸಮಗ್ರತೆಯಿಂದ ಮಾಡುವಲ್ಲಿ ಈಶ್ವರನನ್ನು ಪ್ರಕೃತಿಯಿಂದ ಬೇರೆಯಾಗಿ ತಿಳಿಯಲು ಬರುವುದಿಲ್ಲ. ಪೌರ್ವಾತ್ಯರ ಧರ್ಮಪ್ರವಣ ಕಲೆಯ ವಿಶೇಷವೇ ಇದು. ಅದು ಏಕದಲ್ಲಿ ಅನೇಕವನ್ನೂ ಅನೇಕದಲ್ಲಿ ಏಕವನ್ನೂ ನೋಡಬಲ್ಲುದು – ಎಂದು ರೀಡ್ ಹೇಳಿದ್ದಾನೆ. ಇದೇ ಕಲಾದೃಷ್ಟಿಯನ್ನು ವ್ಯಾಸರು ಮಹಾಭಾರತದಲ್ಲಿ ಇಟ್ಟುಕೊಂಡಿದ್ದಾರೆ; ಇದರಲ್ಲಿ ಸಂಶಯವಿಲ್ಲ.

ವ್ಯಾಸರ ಕೃತಿಯೆಂಬುದು ಪ್ರಕಟವಾಗಿಯೇ ಒಬ್ಬರ ಕೃತಿಯಲ್ಲ. ವ್ಯಾಸರು 'ಜಯ'ವನ್ನು ಬರೆದರು. ವೈಶಂಪಾಯನನು 'ಭಾರತ'ವನ್ನು ಮತ್ತು ಸೌತಿಯು 'ಮಹಾಭಾರತ'ವನ್ನು ಬರೆದರು. ಇದು ಸರ್ವಶ್ರುತವಿದೆ. ಆದರೆ ವ್ಯಾಸರು 'ಜಯ'ದ ರೂಪದಲ್ಲಿ ಒಂದು ಆದರ್ಶವನ್ನು ನಿರ್ಮಿಸಿ ಯಾವ ವಿಶಾಲ ಪಟವನ್ನು ತಯಾರಿಸಿದರೋ, ಕಲಾವಸ್ತುವಿನ ಒಂದು ಪುನರವತಾರ ವನ್ನು ತಯಾರಿಸಿದರೋ ಅದರ ಸಾಂಗತ್ಯವನ್ನೇ ವೈಶಂಪಾಯನ ಮತ್ತು ಸೌತಿ ಇವರು ಉತ್ತರೋತ್ತರ ಮಾಡಿದರು. ಕೊರೆದ ಗುಹಾಲಯಗಳು ಎಂದೂ ಒಂದೇ ಕೈಯಿಂದ ಮತ್ತೂ ಒಂದೇ ಕಾಲದಲ್ಲಿ ಆಗಿರುವುದಿಲ್ಲ. ಆದರೂ ಅವು ಏಕಾತ್ಮ ವಾಗಿರುತ್ತವೆ. ಅವುಗಳ ಮನೋಮಯ ನಿರ್ಮಿತಿ – ಮತ್ತು ಪ್ರಾರಂಭ ಯಾವ ಕ್ಷಣದಲ್ಲಿ ಆಗುವುದೋ, ಯಾರಿಂದ ಆಗುವುದೋ ಆತನೇ ಅದರ ಕರ್ತೃ. ವೇರೂಳದ ಕೈಲಾಸದೇವಾಲಯದ ಕರ್ತೃ ಹೇಗೆ ಒಬ್ಬಾತನೋ ಅದೇ ಅರ್ಥದಲ್ಲಿ ಮಹಾಭಾರತದ ಕರ್ತೃವೂ ಒಬ್ಬನೇ. ಇಲ್ಲಿ ವ್ಯಕ್ತಿಗೆ ಮಹತ್ವವಿಲ್ಲ. ಆ ಒಂದೇ ನಿರ್ಮಾಣಕ್ಷಮತೆಯ ಪ್ರಜ್ಞೆಯುಳ್ಳ ಮನಸ್ಸು ಎಷ್ಟು ವ್ಯಕ್ತಿಗಳಲ್ಲಿ ಯಾವ ಯಾವ ಕಾಲದಲ್ಲಿ ಉತ್ಪನ್ನವಾಗಿ ಮೂಲಕೃತಿಯಲ್ಲಿ ಹೆಚ್ಚಿನ ಭರಣವನ್ನು ತುಂಬುತ್ತ ಹೋಯಿತೋ ಆಯಾ ಮನಸ್ಸು, ಪ್ರಾರಂಭದ ಮನಸ್ಸಿನಿಂದ ಬೇರೆಯೆಂದು ಭಾವಿಸುವಂತಿಲ್ಲ. ಸ್ಥಲ ಮತ್ತು ಕಾಲ ಹಾಗೂ ಕಾರ್ಯಕಾರಣಭಾವ, ಇವನ್ನು ಬದಿಗೊತ್ತಿ ದಿವ್ಯ ಪುಷ್ಪದಂಥ ಸೌಂದರ್ಯಾನುಭವವನ್ನು ಪಡೆಯುವ ಈ ಘಟನೆ ಭಾರತೀಯ ಸೌಂದರ್ಯ ಶಾಸ್ತ್ರದ ಪರಮ ಭಾಗ್ಯಶಾಲಿಯಾದ ರಹಸ್ಯವಾಗಿದೆ. ಅಭಿನವಗುಪ್ತನು ಮಾಡಿದ ಸೌಂದರ್ಯಾನುಭೂತಿಯ ವ್ಯಾಖ್ಯೆ ಮತ್ತು ವ್ಯಾಪ್ತಿ ಈ ವಿಷಯದಲ್ಲಿ ಎಲ್ಲಕ್ಕೂ ಮಿಗಿಲಾದ ಪ್ರಮಾಣವೆಂದು

ಎಣಿಸಬೇಕಾಗಿದೆ. ರಸಸಿದ್ಧಾಂತದಲ್ಲಿ 'ರಸ'ವೇ ಸೌಂದರ್ಯಾನುಭವ; ರಸವೆಂದರೇ ಆನಂದ. ಈ ಆನಂದವು ಯಾವುದೇ ಅಹಂಭಾವಕ್ಕೆ ಅಂಟಿಕೊಂಡಿರುವುದಿಲ್ಲ. ಶೃಂಗಾರ, ಭಯ, ಕ್ರೋಧ, ದುಃಖಗಳ ಪ್ರತೀತಿ ರಸಾತ್ಮಕ ಅನುಭೂತಿಯೊಳಗಿಂದ ಬಂತೆಂದರೆ ಆ ವಿಭಾವಗಳ ವ್ಯಕ್ತಿಗತ ಸಂಬಂಧ ಮುಗಿಯುತ್ತದೆ, ಅವು ಸರ್ವಸಾಧಾರಣವಾಗುತ್ತವೆ. ಇದು ಭಟ್ಟನಾಯಕನ ಸಿದ್ಧಾಂತ. ಅದನ್ನೇ ಅಭಿನವಗುಪ್ತನು ಎತ್ತಿಕೊಂಡನು. ಆದರೆ ಅವನು ಅಷ್ಟಕ್ಕೇ ನಿಲ್ಲಲಿಲ್ಲ. ಅದನ್ನು ಬೆಳೆಯಿಸಿ ಕಾಲಸ್ಥಾನಗಳ ಸಂಬಂಧದಿಂದ ವಿಮುಕ್ತಗೊಳಿಸಿದನು. "ರಸೋ ವೈ ಸಃ", "ಆಪೋ ವೈ ರಸಃ" – ಈ ಶ್ರುತಿಯೊಳಗಿನ ರಸದ ತಿಳುವಳಿಕೆಗೆ ಕಾವ್ಯದಲ್ಲಿಯ ನಿಸ್ಯಂದವನ್ನು ಒಯ್ದು ಜೋಡಿಸಿದನು. ಕಾವ್ಯಾನಂದವು ಬ್ರಹ್ಮಾನಂದದ ಸಹೋದರ ಎಂಬುದನ್ನು ದಂಡಿ, ವಿಶ್ವನಾಥ ಪ್ರಭೃತಿಗಳೆಲ್ಲರೂ ಒಪ್ಪಿದ್ದಾರೆ. ಆದರೆ ಅಭಿನವಗುಪ್ತನು ರಸದ ಅನುಭವವನ್ನು ಯೋಗಿಯ ಅನುಭವದೊಡನೆ ಹೋಲಿಸಿ ಸಾಮ್ಯವನ್ನು ಹೊಂದಿಸಿದ್ದಾನೆ. ಯೋಗಿಗೆ ಬ್ರಹ್ಮಾನಂದವಾದೊಡನೆ ಆ ಕ್ಷಣಕ್ಕೆ ಅವನ ಮಟ್ಟಿಗೆ 'ಸಂಸಾರ'ವು ಇಲ್ಲವಾಗುತ್ತದೆ; ಕೇವಲ ಆ ಆನಂದವು ಉಳಿಯುತ್ತದೆ. ಇನ್ನೇನೂ ಇಲ್ಲ. ಅದೇ ರೀತಿಯಲ್ಲಿ ರಸದಿಂದ ಉಂಟಾದ ಸೌಂದರ್ಯಾನುಭವವನ್ನು ಹೀರುವಾಗ ಆ ಕ್ಷಣದ ಮಟ್ಟಿಗೆ 'ಸಂಸಾರ'ವು ಮಾಯವಾದಂತೆ.

ಇಂದ್ರಿಯ ಗಮ್ಯ ಜೀವನದೊಂದಿಗೆ ಕಟ್ಟುಬಿದ್ದು ಅವುಗಳಿಂದ ಭಿನ್ನವಾದ, ಆತ್ಮವೃತ್ತಿಗಳನ್ನು ಪ್ರಸ್ಫುರಣಗೊಳಿಸುವಂಥ, ಸಚ್ಚಿದಾನಂದದ ಸೀಮೆಯ ಮೇಲೆ ತಂಗಲು ನೋಡುವ ಮತ್ತು ಸಮಾಧಿಯಲ್ಲಿ ಸಮಾವೇಶಗೊಳ್ಳುವ ರಸತತ್ತ್ವವಿದು. ಭಾರತೀಯ ಸೌಂದರ್ಯಾನುಭವದ ಈ ತತ್ತ್ವ ತಿಳಿದರೆ ಮಹಾಭಾರತದಂಥ ಕೃತಿಯು ಮಹಾನ್ ಧರ್ಮಗ್ರಂಥದಂತೆ ಮಹಾನ್ ಕಲಾಕೃತಿಯೂ ಆಗಬಲ್ಲುದು. ಹೆಚ್ಚೇನು, ಒಂದೇ ಪ್ರಜ್ಞೆಯ ಸ್ಫುರಣದಿಂದ ಧರ್ಮಜ್ಞಾನ ಮತ್ತು ಕಲಾನುಸಂಧಾನ ಇವೆರಡೂ ಈ ಅದ್ವಿತೀಯ ಗ್ರಂಥದಲ್ಲಿ ಅಳವಟ್ಟಿವೆಯೆನ್ನಲು ಅಡ್ಡಿಯಿಲ್ಲ.



# ಪೂರ್ಣಪುರುಷ ಕೃಷ್ಣ

ಕೃಷ್ಣನ ಜೀವನವು ನನ್ನನ್ನು ಬಹಳವಾಗಿ ಮೋಹಗೊಳಿಸುತ್ತದೆ. ವ್ಯಾಸರ ಪ್ರತಿಭೆಯು ಮಹಾಭಾರತ, ಹರಿವಂಶ ( ಮತ್ತು ಅನಂತರ ಭಾಗವತ) – ಈ ಗ್ರಂಥಗಳಲ್ಲಿ ಯಾವ ಭವ್ಯ ಹಾಗೂ ಜೀವಂತ ವ್ಯಕ್ತಿರೇಖೆಗಳನ್ನು ಭಾರತದ ಮನಮನಗಳಲ್ಲಿ ಕೊರೆದು ಇಟ್ಟಿತೋ ಅವುಗಳಲ್ಲಿ ಕೃಷ್ಣನದೇ ಎಲ್ಲದರಲ್ಲಿ ಮಧ್ಯವರ್ತಿ ಆಕೃತಿಯಾಗಿದೆ. ಉಳಿದೆಲ್ಲ ಆಕೃತಿಗಳೂ ಇದರ ಸುತ್ತಲೂ ಸುತ್ತಿಕೊಂಡು ಇದರ ಆಧಾರದಿಂದಲೇ ನಿಂತಿರುವುವೋ ಎಂಬಂತೆ ತೋರುತ್ತದೆ. ಆದರೂ ಮಹಾಭಾರತದಲ್ಲಿಯ ಕೃಷ್ಣನನ್ನು ತುಂಬ ದಿಟ್ಟಿಸಿನೋಡಬೇಕೆಂದರೆ, ಅವನ ಸಾವಯವ ಸ್ವರೂಪವು ದೃಷ್ಟಿಯ ಹಿಡಿತಕ್ಕೆ ಸಿಕ್ಕುವುದಿಲ್ಲ. ಅದಕ್ಕೆ

ರೇಖಾಮಯ ಆಕಾರವನ್ನು ಕೊಡಲು ಸಾಧ್ಯವಾಗುವುದಿಲ್ಲ. ವಿರಾಟ್‌ರೂಪದ ಆ ಒಂದು ಉಲ್ಲೇಖವು ರೇಖಾಮಯಶರೀರದ ಇಡೀ ಆಕೃತಿಯನ್ನು ಒರೆಸಿಹಾಕಿದೆ; ಮುಚ್ಚಿಹಾಕಿದೆ – ಮೋಡಗಳಿಂದ ಸೂರ್ಯನು ಮುಚ್ಚಿ ಹೋಗುವಂತೆ. ಒಂದು ಶ್ಯಾಮಲ, ಧೂಸರ ವಾತಾವರಣವು 'ಕೃಷ್ಣ' ಎಂಬ ಈ ಹೆಸರಿನಲ್ಲಿಯೇ ತುಂಬಿಕೊಂಡಿದೆ. ಆದರೆ ಎಲ್ಲೆಲ್ಲಿ ಕೃಷ್ಣನ ಆಕೃತಿಯ ರೇಖೆಗಳು ಕ್ಷಣಮಾತ್ರವಾದರೂ ಗೋಚರವಾಗುತ್ತವೆಯೋ ಅಂಚು ಅಂಚಾಗಿ ಕಣ್ಣಿಗೆ ಬೀಳುತ್ತವೆಯೋ ಅಲ್ಲಲ್ಲಿ ನನಗೆ ಬಣ್ಣಗಳ ಒಂದು ದೊಡ್ಡ ಪುಂಜವೇ ಕಾಣಿಸುತ್ತದೆ. ವಿಲಕ್ಷಣ ರೀತಿಯಲ್ಲಿ ಆ ವರ್ಣಛಾಯೆಗಳು ಒಂದನ್ನೊಂದು ಸೇರುವಂತೆ ಮತ್ತೆ ಬೇರೆಯಾಗುವಂತೆ ತೋರುತ್ತವೆ. ಸಂಧ್ಯಾ ಮೇಘಗಳ ಛಾಯೆಗಳಂತೆ ಇವು ಕುಣಿಯುವ, ಓಡುವ ಬಣ್ಣಗಳಾಗಿರುತ್ತವೆ. ಕೃಷ್ಣನ ವ್ಯಕ್ತಿಭಾಸವು ರೂಪವು ನನಗೆ ಅಕ್ಷರಶಃ ಸಂಧ್ಯಾರಾಗಗಳಂತೆ ಅನಿಸುತ್ತದೆ. ಮನಸ್ಸಿನ ಪ್ರತಿಯೊಂದು ಕಣದೊಳಗಿನಿಂದ ಈ ಬಣ್ಣಗಳು ಚಿಮ್ಮಿ ಹೊರಬರುತ್ತವೆಯೆಂಬಂತೆ ನನಗೆ ಅನೇಕ ಸಲ ಭಾಸವಾಗುತ್ತದೆ.

ಇತಿಹಾಸದಲ್ಲಿಯ, ವಾಙ್ಮಯದಲ್ಲಿಯ ಅನೇಕ ವ್ಯಕ್ತಿರೇಖೆಗಳು ನನ್ನ ಮನಸ್ಸಿನಿಂದ, ಜೀವಂತವಾಗಿ ಹೊರಬೀಳುತ್ತವೆ, ಆಗ ನನಗೆ ನಾನಾವಿಧ ಭಾಸಗಳಾಗುತ್ತವೆ. ಆದರೆ ಆ ವ್ಯಕ್ತಿರೇಖೆಗಳು ಆ ಗ್ರಂಥದ ಅಥವಾ ಇತಿಹಾಸದ ಭಾಗವಾಗಿ ಉಳಿಯುವುದಿಲ್ಲ. ಒಬ್ಬ ವ್ಯಕ್ತಿಯ ಆಕೃತಿಯು ಸುಂದರ ರೇಖೆ ಗಳಿಂದ ರಚಿತವಾಗಿರುತ್ತದೆ. ಒಬ್ಬರಿಗೆ ಬರಿಯ ಕಣ್ಣುಗಳು, ಒಬ್ಬರಿಗೆ ಕೇವಲ, ಕೆಲಸ ಮಾಡುವ ಸುಂದರ ಕೈಗಳು ಇರುತ್ತವೆ. ಒಬ್ಬರ ಆ ಕಣ್ಣುಗಳು ನನ್ನನ್ನು ಬೆನ್ನಟ್ಟುತ್ತವೆ. ಒಬ್ಬರ ಕೈಯು ಏನೇನೋ ಸನ್ನೆ ಮಾಡುತ್ತವೆ. ಒಬ್ಬರ ತುಟಿಗಳು ಮಾತಾಡತೊಡಗುತ್ತವೆ. ಒಬ್ಬರು ಒಂದೇ ಸಮನೆ ಅಣಕಿಸುತ್ತಿರುತ್ತಾರೆ. ಆದರೆ ಬುದ್ಧನಂತಹ ಮನುಷ್ಯರು ಬಂಡೆಯಂತೆ ಜಡವಾಗಿ ಮುಂದೆ ಕುಳಿತು ಕೊಳ್ಳುತ್ತಾರೆ. ಒಬ್ಬೊಬ್ಬರು ಪೂರ್ತಿ ಬೆನ್ನು ತಿರುಗಿಸುತ್ತಾರೆ. ಆದರೆ ಇಂಥ ಒಟ್ಟಂದದ ಭಾಸವು ಕೃಷ್ಣನ ಆ ವರ್ಣಾಕೃತಿಯಲ್ಲಿ ನನಗೆ ಆಗುವುದಿಲ್ಲ. ಆ ವರ್ಣಾಕೃತಿಗೆ ಒಂದು ಗಂಧವು ಬರುತ್ತದೆ. ಆದರೆ ಅದು ಗೊತ್ತಿರುವ ಯಾವುದೇ ಗಂಧದಂತಹದ್ದಲ್ಲ. ಆದರೆ ಬಹಳ ಉತ್ತೇಜಕವಾಗಿರುತ್ತದೆ. ತೀವ್ರವಾಗಿರುತ್ತದೆ ಮತ್ತು ಬಹಳ ಹೊತ್ತು ಹರಡಿ ಉಳಿಯುವಂತಹದು. ಸೃಷ್ಟಿಯೊಳಗಿನ ಎಲ್ಲ ಮನುಷ್ಯರ ಪ್ರಾಣಶಕ್ತಿಯೊಳಗಿನ ಗಂಧವನ್ನೂ ಒಂದೆಡೆಗೆ ತಂದು ಅದನ್ನು ಎಲ್ಲ

ಹೂಗಳ ಗಂಧದೊಂದಿಗೆ ಬೆರೆಸಿದರೆ ಬರಬಹುದಾದಂತಹ ಪರಿಮಳದಂತೆ ಅದು; ಮತ್ತು ಅದರ ಗರ್ಭದಲ್ಲಿ ಸ್ವರದ ಒಂದು ನಳನಳಿಸುವ ಮೊಳಕೆಯೂ ಒಡೆದದ್ದು ನನಗೆ ಕಾಣುತ್ತದೆ. ಉಚ್ಚ ಕೋಮಲ ನಿಷಾದವು ಧೈವತದ ಮೇಲೆ ತುಸು ಆನಿಕೊಂಡ ಸ್ವರವದು.

ಆದರೆ ವಿರಾಟ್‌ಸ್ವರೂಪದ ಭಾಸಮಯ ಆವರಣವು ಕೆಲಸಲ ತೆರೆಯು ಹರಿದಂತೆ ಬದಿಗೆ ಸರಿಯುತ್ತದೆ. ಅನೇಕ ಪುರಾಣ ಕಥೆಗಳೊಳಗಿನಿಂದ, ಅಮಾಯಕ ಭಾವುಕ ಶ್ರದ್ಧೆಯೊಳಗಿನಿಂದ ಮತ್ತು ಸ್ತ್ರೀಯರ ನರನಾಡಿಗಳೊಳಗಿನಿಂದ ಸ್ಫುರಿಸುವ, ಆ ಹೆಸರಿಲ್ಲದ ಅನುಭವವು ಎಲ್ಲವೂ ಒಂದೆಡೆ ಒಟ್ಟಾಗಿ ಅದರೊಳಗಿಂದ ಒಬ್ಬ ಉದ್ದಗಲ ಚಾಚಿದ ಪುರುಷ ಹೊರಡುತ್ತಾನೆ. ಅವನು ಆಡಮ್(Adam)ನಿಗೆ ಸಮೀಪದವನು – ಶರೀರದಲ್ಲಿಯೂ ವಾಸನೆಗಳಲ್ಲಿಯೂ. ಆದರೆ ಆಡಮ್‌ನಿಗಿಂತ ಅದೆಷ್ಟೋ ಮಿಗಿಲಾದ ದೈವೀ ಕೊಡುಗೆಗಳು ಅವನ ಬಳಿಯಲ್ಲಿರುತ್ತವೆ. ಆಡಮನಿಗೆ ಸಂಸ್ಕೃತಿ ಇರಲಿಲ್ಲ; ಅವನಲ್ಲಾದರೋ ಅದು ಪರಿಪೂರ್ಣವಾಗಿದೆ. ಸುಖದ ತೋಟಗಳು ಅವನ ಸುತ್ತಲೂ ಅರಳಿರುತ್ತವೆ. ಆಡಮನು ಬಡವ. ತೋಟದೊಳಗಿನಿಂದ – ಅದೊಂದು ತೋಟವಾಗಿತ್ತೆಂಬ ಅರಿವಾಗುವುದಕ್ಕೆ ಮುಂಚೆಯೇ – ಹೊರಬಿದ್ದನು; ಬಿರಿ ಬಿರನೆ ಅಲೆದಾಡಿದನು; ಇಂದ್ರಿಯಗಳ ಹೆಡೆಗಳ ಪೆಟ್ಟು ತಿನ್ನುತ್ತ ಅಲೆದಾಡಿದನು. ಆದರೆ ಆ ಪುರುಷನು ಮಾತ್ರ, ಪೌರುಷದ ಹಾಗೂ ಮಾನವ್ಯದ ಎಲ್ಲ ಕೆಚ್ಚನ್ನೂ ಜೀರ್ಣಿಸಿಕೊಂಡು, ಮರಣದ, ವಿರಹದ ಎಲ್ಲ ಕಲೆಗಳನ್ನೂ ನವಿರಾಗಿ ಸ್ಪರ್ಶಿಸುತ್ತ ಬದುಕಿದನು. ಸ್ಪರ್ಶದ ಎಲ್ಲ ಲಾಲಿತ್ಯ, ಎಲ್ಲ ವೈಯ್ಯಾರ ಅವನಲ್ಲಿ ತುಂಬಿತ್ತು. ವ್ಯಾಸರು ನಿರ್ಮಿಸಿದ ವರ್ಣಗಳ ಸೆಳಕುಗಳೊಳಗಿಂದ ಆ ಎರಡನೆಯ ಪಾತಳಿಯ ಮೇಲಿನ ಪುರುಷ ರೂಪವು ಹೆಚ್ಚು ಮನೋಹರವೂ ರೇಖಾಬದ್ಧವೂ ಆಗಿದೆ; ಸಾಕ್ಷಾತ್ಕಾರದ ಇಂದ್ರಜಾಲದಿಂದ ಮುಕ್ತವಾಗುತ್ತದೆ. ಪಾರ್ಥಿವ ಜೀವನದ ಆಧಾರದಿಂದ ನಡೆದಾಡಲು ಹತ್ತುತ್ತದೆ.

ಕೃಷ್ಣನ ಚರಿತ್ರೆಯು ಒಂದೇ ಒಂದು ಗ್ರಂಥದಲ್ಲಿ ಕಟ್ಟಿ ಬಿದ್ದಿಲ್ಲ. ಅನೇಕ ಗ್ರಂಥಗಳೂ, ಕಾವ್ಯಗಳೂ, ನರನಾರಿಯರ ಜೀವನಗಳೂ, ತಮ್ಮ ಕಣಕಣಗಳನ್ನು ಕೊಟ್ಟು ಅದು ರೂಪಗೊಂಡಿದೆ. ಬದುಕಿನ ಎಲ್ಲ ಮಗ್ಗುಲುಗಳನ್ನೂ ಸ್ಪರ್ಶಿಸುವ ವ್ಯಕ್ತಿ ವ್ಯಕ್ತಿಯ ಸುಃಖದುಃಖಗಳ ಸ್ಪಂದನವನ್ನು ತಾನೇ ಭೋಗಿಸಿ

ಅವರನ್ನು ಸಜೀವ ಹಾಗೂ ಕೃತಾರ್ಥರನ್ನಾಗಿ ಮಾಡುತ್ತ ಕೃಷ್ಣನು ಜೀವಿಸುತ್ತಾನೆ. ಏಕೆಂದರೆ ಅವನು ಮಾನವ. ಬರೀ ಮಾನವನಲ್ಲ, ಪುರುಷನಾಗಿದ್ದಾನೆ; ಪೂರ್ಣ ಪುರುಷನಾಗಿದ್ದಾನೆ.

ಕೃಷ್ಣನ ಜನನವು, ಸಾವಿನ ತುರ್ತಿನ ನಿಕರದಲ್ಲಿ, ಭೀತಿಯ ಸುಳಿಯಲ್ಲಿ, ಆಶೆಯ ಅಮರ ಆಶ್ವಾಸನೆಯಲ್ಲಿ ಆಯಿತು. ರಾಮನ ಬಾಲ್ಯವು ಯಾರಿಗೂ ನೆನಪಾಗುವುದಿಲ್ಲ. ಅದು ಬಾಲಕಾಂಡದಲ್ಲಿ ಬಂಧಿತವಾಗಿದೆ. ಕ್ರಿಸ್ತ – ಬುದ್ಧರ ಬಾಲ್ಯವನ್ನು ಪ್ರೌಢತ್ವವು ಎಂದೋ ನುಂಗಿಬಿಟ್ಟಿದೆ. ಆದರೆ ಕೃಷ್ಣನ ಬಾಲ್ಯವು ಮನೆ ಮನೆಯಲ್ಲೂ ಆಡುತ್ತದೆ. ತನ್ನ ತಾಯಿಯಿಂದ ದೂರವಾಗಿ, ಹುಟ್ಟಿನಿಂದಲೇ ಅವಳಿಗೆ ಶಿಶುವಿರಹದ ಝಳವನ್ನು ಹಚ್ಚುವ ಆ ಮಗುವು ಅನೇಕ ತಾಯಂದಿರ ಅನುಭವದಲ್ಲಿ ಸ್ಥಿರವಾಗಿದೆ. ಆದರೆ ಅಂತಹ ಮಗುವಿನಂತೆ ಇದು ವಿರಾಮ ಪಡೆಯಲಿಲ್ಲ. ಯಶೋದೆಯ ಜ್ವಲಿತ ಮನಸ್ಸನ್ನು ನಳನಳಿಸುವಂತೆ ಮಾಡಿತು. ಅಂಬೆಗಾಲಿಟ್ಟಿತು; ತೊಟ್ಟಿಲಿನಲ್ಲಿ ಹರಳು ಒತ್ತಿತೆಂದು ಅತ್ತಿತು; ಉಚ್ಚೆ ಹುಯ್ಯಿತು; ಹಟಮಾಡಿತು; ಪೆಟ್ಟು ತಿಂದಿತು; ಕಚ್ಚಿಸಿ ಕೊಂಡಿತು; ತುಂಟತನ ಮಾಡಿ ಜೀವಕ್ಕೇ ಕುತ್ತು ತಂದುಕೊಂಡಿತು. ತಾಯಿಗೆ ಪ್ರತಿಕ್ಷಣವೂ ತನಗೊಂದು ತುಂಟ ಹಟಮಾರಿ ಮುದ್ದು ಮಗುವಿದೆಯೆಂಬ ಅರಿವು ನೀಡುತ್ತಲೇ ಬೆಳೆಯಿತು.

ಅನಂತರ ಎರಡನೆಯ ಪರ್ವ. ಗೋಪಾಲರು ಗೆಳೆಯರು; ಅವರ ಆಟಗಳು; ಕಳ್ಳತನಗಳು; ಹೆಂಗಸರೊಂದಿಗೆ ಕಿಡಿಗೇಡಿತನ; ಸಲ್ಲದ ವಯಸ್ಸಿನಲ್ಲಿ ರಾಧೆಯೊಂದಿಗೆ ಪ್ರೇಮಚೇಷ್ಟೆ; ಕುಸ್ತಿಯಲ್ಲಿ ಪ್ರಾವೀಣ್ಯ. ಆ ಯೌವನೋನ್ಮುಖ ಕೃಷ್ಣನಲ್ಲಿ ಏನು ತಾನೆ ಇರಲಿಲ್ಲ? ಒಂದುಕಡೆ ಕಂಸ, ಶಿಶುಪಾಲರು ಅವನೊಂದಿಗೆ ವೈರತಾಳಿದ್ದರು; ಇನ್ನೊಂದು ಕಡೆ ಭಾವುಕರಾದ ಹುಡುಗರು ಮತ್ತು ಗೋಪಿ ಯರು ಅವನಿಗಾಗಿ ಪ್ರಾಣಕೊಡಲು ಸಿದ್ಧರಾಗಿದ್ದರು. ಅಣ್ಣನು ದಾಸನಾಗಿದ್ದನು. ದನಕರುಗಳು ಅವನ ವಾತ್ಸಲ್ಯಮಯಸ್ಪರ್ಶದಿಂದ ಸುಖಿಸುತ್ತಿದ್ದವು; ಪುಷ್ಟ ವಾಗುತ್ತಿದ್ದವು; ಅವುಗಳ ಕುಲವು ವರ್ಧಿಸುತ್ತಿತ್ತು; ಹಾಲು ಹೈನಿನ ಕೋಡಿ ಹರಿಯುತ್ತಿತ್ತು.

ಅವನ ಕೊಳಲು ತಾರುಣ್ಯದ ಉದ್ರೇಕಗಳಿಗೆ ಆಹ್ವಾನ ಕೊಡುತ್ತಿತ್ತು. ಆ ಸಂಗೀತದ ಜಬ್ಬು ಎಷ್ಟಿತ್ತೆಂದರೆ, ಗೋಪಿಯರಿಗೆ ಅದರ ವಾದಕನದೇ ಹುಚ್ಚು ಹಿಡಿಯಿತು! ಅವರ ಯೌವನೋನ್ಮಾದವು ಅವನಿಗಷ್ಟೇ ಮೀಸಲಾಯಿತು.

ಆದರೆ ಅದು ಸಾರ್ವತ್ರಿಕ ಸ್ವೈರಾಚಾರವಾಗಿ ಪರಿವರ್ತನೆ ಹೊಂದಲಿಲ್ಲ. ಸಮುದ್ರದ ಉಬ್ಬರವು ಶಿಖರಕ್ಕೇರುತ್ತದೆ, ಮತ್ತೆ ಮೊದಲ ಸ್ಥಿತಿಗೇ ಬರುತ್ತದೆ; ಅದೇ ರೀತಿಯಿತ್ತು ಕೃಷ್ಣನ ಈ ಆಕರ್ಷಣೆ. ಅವನಿಂದ ಹೊರಟು ಮರಳಿ ಅವನ ಕಡೆಗೇ ಬರುವಂತಹದು. ಅತಿಮೃದು ಮತ್ತು ಅಷ್ಟೇ ದೃಢವಾಗಿತ್ತು ಆ ನಂಟು. ಆ ನಂಟಿನ ಸರ್ವೋತ್ಕೃಷ್ಟ ಪ್ರತೀಕವೇ ರಾಧೆ. ಪರಂಪರೆಯು ಕೃಷ್ಣನೊಂದಿಗೆ ದ್ರೌಪದಿಯನ್ನು ತಂಗಿಯೆಂದು ಹೇಳಿ ಕಟ್ಟಿಹಾಕಿ, ವ್ಯಾವಹಾರಿಕ ನೀತಿಯ ಪ್ರತಿಷ್ಠೆಯನ್ನು ಕಾಪಾಡುವ – ಒಂದು ರೀತಿಯಲ್ಲಿ ಯಶಸ್ವಿಯಾದ, ಇನ್ನೊಂದು ರೀತಿಯಲ್ಲಿ ಅಯಶಸ್ವಿಯಾದ – ಪ್ರಯತ್ನವನ್ನು ಮಾಡಿತು. ಆದರೆ ಮುಂದೆ ರಾಧೆ ಬಂದಳು. ಅವಳು ಈ ಎಲ್ಲ ಕಟ್ಟುಗಳನ್ನೂ ಮುರಿದಳು. ವಯಸ್ಸು, ವಿವಾಹ ಬಂಧನ ಯಾವುದೂ ಈ ಪ್ರೀತಿಯನ್ನು ತಡೆಗಟ್ಟಲಾರದಾಯಿತು. ಅನಿರ್ಬಂಧವೂ ನಾಜೂಕೂ ಆದ ರೇಷ್ಮೆಯಂತಹ ಈ ಶೃಂಗಾರದ ದರ್ಶನವು ಸರ್ವದಾ ಅಭಿನವವಾಗಿ ಕಾಣುವಂತಹದಾಗಿದೆ.

ಭಾರತೀಯ ಸಂಸ್ಕೃತಿಯು ಲಾಲಿತ್ಯದಿಂದ ಅರಳುವುದು ವಿರಳ. ಆದರೆ ಒಮ್ಮೆ ಮಾತ್ರ ಅದು ನಿರ್ಭರ ಭರದಿಂದ ಅರಳಿದೆ. ರಾಧಾಕೃಷ್ಣರ ಪ್ರೀತಿಯ ವಸಂತವು ಒಮ್ಮೆ ಮಾತ್ರ ಬಂತು, ಹೋಯಿತು; ಆದರೆ ಸದಾ ಅರಳುತ್ತಿರುವ ಘಮಘಮಿಸುತ್ತಿರುವ ವಸ್ತುವನ್ನು ಬಿಟ್ಟುಹೋಯಿತು. ಭಾರತೀಯ ಪಾತಿವ್ರತ್ಯದ ನಿಷ್ಠುರತನಕ್ಕೆ ಕಾಯಂ ಆಹ್ವಾನವನ್ನು ಕೊಡುತ್ತ ರಾಧೆಯು ಏಕನಿಷ್ಠ ಪ್ರೀತಿಯ ಬೆಳುದಿಂಗಳಿನಿಂದ ಬಣ್ಣ ತುಂಬಿಕೊಂಡ ಪೂರ್ಣ ಸೌಂದರ್ಯ ವನ್ನು ತೆರೆದಿಟ್ಟಳು. ಪ್ರೀತಿಯ, ಕಣ್ಣುಕುಕ್ಕುವ ಕೆಂಬಣ್ಣವು ರಾಧೆಯಿಂದಾಗಿ ಸೌಮ್ಯವಾಯಿತು, ನೀಲಬಿಳಿ ಬಣ್ಣದ್ದಾಯಿತು. ಈ ನೀಲಿಮ ಪ್ರೀತಿಯನ್ನು ಸಮಾವೇಶಗೊಳಿಸಿಕೊಳ್ಳುವಾಗ ಕೃಷ್ಣನ ವ್ಯಕ್ತಿತ್ವವು ಆಕಾಶದಷ್ಟು ವಿಶಾಲವೂ ಉನ್ನತವೂ ಆಯಿತು. ರಾತ್ರಿಯ ಹಾಗೆ ಅತೀವ ಮೃದುವೂ ಗೂಢವೂ ಆಯಿತು. ರಾಧಾ –ಕೃಷ್ಣರ ಪ್ರೀತಿಯ ಮೂಲಕ ಭಾರತೀಯ ಪ್ರೇಮಕಥೆಗೆ ಹೊಸತೊಂದು ಕೋಮಲತೆ ಬಂತು. ಸಂಸಾರಭಾರದಿಂದ ಎಂದಿಗೂ ಹಳಸದ ಭಾವವು ಅದಕ್ಕೆ ಬಂತು. ಪ್ರೀತಿಯ ಪರಿಪೂರ್ತಿಗೆ ಚಿರತಾರುಣ್ಯವು ಅಪೇಕ್ಷಿತವಿರುತ್ತದೆ. ಅದನ್ನು ಸಾಧಿಸುವುದಕ್ಕಾಗಿಯೇ ಈ ಆದರ್ಶ ಪ್ರೇಮಿಯು ರಾಧೆಯ ವಿರಹದಿಂದ ತನ್ನನ್ನು ಬಂಧಿಸಿಕೊಂಡನೋ ಎಂಬಂತೆ ಕಾಣುತ್ತದೆ.

ಮೃತ್ಯುವಿನೊಳಗಿನ ಅಮರತ್ವದಂತೆ ಪ್ರಿಯಜನರ ಸಹವಾಸದ ಶಾಶ್ವತ ಅಗಲಿಕೆಯಲ್ಲಿಯೆ ಪ್ರೇಮದ ಸಾಫಲ್ಯದ ಅಶರೀರವಾದ ರೂಪವು ಉತ್ಕಟವಾಗಿ ಪ್ರತೀತಿಗೆ ಬರುತ್ತದೆಯೆಂಬುದನ್ನು ಸ್ವಾನುಭವದಿಂದ ಅವನಿಗೆ ಸೂಚಿಸುವುದಿತ್ತೇ? ರಾಧಾಕೃಷ್ಣರು ಒಂದೆಡೆಗೆ ಎಂದೂ ವಾಸಮಾಡುವುದೇ ಇಲ್ಲ. ಕ್ಷಣಕ್ಷಣಗಳಲ್ಲಿಯೇ ಅವರ ಸಹವಾಸ ತುಂಬಿದೆ. ಆ ಕ್ಷಣಗಳು ಬಹಳ ವಾಚಾಳಿಯಾದವು. ಅವುಗಳ ಎಲ್ಲ ವಾಚಾಳಿ ಭಾವಗಳನ್ನೂ ಪುರಾಣಗಳೂ ಕಾವ್ಯಕಥೆಗಳೂ ಜೋಪಾನ ಮಾಡಿಕೊಂಡಿವೆ. ಈ ಸಂಜೀವಕ ಪ್ರೀತಿಗೆ ಕೊಳಲಿನ ಪ್ರತೀಕವು ಸಿಕ್ಕುತ್ತದೆ. ಆದರೆ ಅನಂತರದ ಎಂದೂ ಮುಗಿಯಲಾರದ ಆ ವಿರಹ! ಅದು ಮೂಕವಾಗಿದೆ; ಗೂಢವಾಗಿದೆ. ಅದಕ್ಕೆ ನಾದ-ವರ್ಣ-ರೂಪಗಳ ಆಭರಣವನ್ನು ಎಂದೂ ತೊಡಿಸಿಲ್ಲ. ಆ ವಿರಹದ ಹಿಂದೆ ಕಲಹ, ಉಪೇಕ್ಷೆ, ಮರಣ – ಈ ಸಂಕೇತಗಳೂ ಇಲ್ಲ. ಆದಾಗ್ಯೂ ಆ ವಿರಹವು ತನ್ನ ಅನಾಮಿಕತ್ವದ ಮೂಲಕವೇ ಅತಿ ಜೀವಂತವಾಗಿದೆ. ರಾಮನಂತೆ ಕೃಷ್ಣನು ಮುಂದೆ ಎಂದೂ ರಾಧೆಯ ನೆನಪು ಮಾಡಿಕೊಂಡು ಶೋಕಿಸಿಲ್ಲ. ಅತಿನವುರಾದ ಈ ಪ್ರೇಮಾವಿಷ್ಕಾರವನ್ನು ಅವನು ಗುರುತಿಸಲೂಬಾರದ ರೀತಿಯಲ್ಲಿ ಅಂತರಂಗದ ತೀರ ತಳದಲ್ಲಿ, ಅದಕ್ಕೆ ವ್ಯವಹಾರೀ ಸಂಕೇತಗಳ ಆಘಾತ ಎಲ್ಲಿಯೂ ತಟ್ಟದಂತೆ ಬಚ್ಚಿಟ್ಟನೇ?

ರಾಮನು ಮರ್ಯಾದಾ ಪುರುಷೋತ್ತಮ. ಆದರೆ ಕೃಷ್ಣನು ಪ್ರತಿಯೊಂದು ಸಂಗತಿಯಲ್ಲೂ ಅದನ್ನು ತುದಿಮುಟ್ಟ ಮೀರುವವನೇ ಆದನು. ಪ್ರತಿಯೊಂದು ಸಂಗತಿಯಲ್ಲಿ ಪಾರಂಗತತೆಯನ್ನು ಆತ ಗಳಿಸಿದನು. ಅಮರ್ಯಾದ ಸೌಂದರ್ಯವನ್ನೂ ಚೈತನ್ಯವನ್ನೂ ಅದರಲ್ಲಿ ಹೊಯ್ದನು. ಗಾಳಿಯ ರಭಸದಂತೆ ಅವನು ಜೀವನ ನಡೆಸಿದನು. ಬಾಲ್ಯದಲ್ಲಿ ಆಟಪಾಟಗಳಲ್ಲಿ ಅವನ ಪಟುತ್ವವಿತ್ತು. ಜೀವವೆರೆದು ಅವನು ಆಟವಾಡಿದನು. ತುಡುಗಿಗೂ ರಮಣೀಯತೆಯನ್ನು ತಂದುಕೊಟ್ಟನು. ವಿನೋದದ ಅಂಗವನ್ನು ಮನಸೋಕ್ತ ಜೋಪಾಸನೆ ಮಾಡಿದನು. ಭಾರತೀಯ ತತ್ತ್ವಜ್ಞಾನಿಗಳಿಗೆ ವಿನೋದದ್ದೇ ಕೊರತೆ; ಹೆಚ್ಚೇನು, ಪ್ರಪಂಚದ ಎಲ್ಲ ತತ್ತ್ವಜ್ಞಾನಿಗಳಿಗೂ ಹಾಗೆಯೇ. ಇದಕ್ಕೆ ಅಪವಾದವೆಂದರೆ ಕನ್‌ಫ್ಯುಶಿಯಸನದು ಮಾತ್ರ. ವಿನೋದದ ಅಂಗವಿಲ್ಲದವನು ಸಂತನಾಗಲಾರನೆಂದು ಆತ ಪ್ರತಿಪಾದಿಸಿದ. ಕೃಷ್ಣನ

ಗೀತೆಯಲ್ಲಿಯೂ ವಿನೋದವಿಲ್ಲ. ಆ ಕೃತಿಯು ಗಂಭೀರವಾಗಿದೆ. ಆದರೆ ಕೃಷ್ಣನ ಪೂರ್ವಜೀವನದಲ್ಲಿ ಹುಡುಗಾಟಿಕೆಯ ವಿನೋದವು ಬಹಳವಿದೆ. ಅದು ಇಲ್ಲದಿದ್ದರೆ ಗೀತೆಯ ಗಾಂಭೀರ್ಯಕ್ಕೆ ಕುಂದುಬರುತ್ತಿತ್ತು.

ಕೃಷ್ಣನು ಕಲಾಸಕ್ತ. ಅವನು ಸಂಗೀತದ ಉಪಾಸಕ. ಆದರೆ ಈ ಕಲಾಸಕ್ತಿಯೂ ಅವನ ಪ್ರೀತಿಯಂತೆ ಭೂಮಿಯಲ್ಲಿಯೇ ಕಾಲೂರಿ ಮೊದಲು ನಿಂತಿತು. ಅವನು ವೀಣೆಯನ್ನೆತ್ತಿಕೊಳ್ಳಲಿಲ್ಲ. ಕೊಳಲನ್ನು ಹಿಡಿದ. ಆ ತುಂಡಿಗೆ ಪ್ರಾಣತುಂಬಿ ಅರಳಿಸಿದ. ಅದರ ಸವಿಯು ಅಮರವಾಗಿದೆ. ದನಗಾಹಿಯ ಸಾಮಾನ್ಯವಾದ್ಯವದು; ಅದನ್ನು ಆತ ಜೀವಂತಗೊಳಿಸಿದ. ತೀರ ಪ್ರಾಕೃತವಾಗಿ ಸ್ಥೂಲವಾಗಿ ಕಾಣುವ ಸಂಗತಿಗಳಿಗೂ ಚಿರಂತನ ಕಲಾಮೌಲ್ಯವನ್ನು ತಂದು ಕೊಡಬಲ್ಲವನೆಂದರೆ ಕೃಷ್ಣನೇ. ಕಲಾವಂತನ ಉಕ್ಕಿ ಹರಿಯುವ, ತನ್ನನ್ನು ಹೋಮಿಸಲು ನೋಡುವ, ವ್ಯಕ್ತಿತ್ವವು ಕೃಷ್ಣನ ಜೀವನದ ಪ್ರಮುಖ ಅಂಗ ವಾಗಿದೆ.

ಈ ಉಕ್ಕಿ ಹರಿಯುವ ಮತ್ತು ವಿಸರ್ಜನೆಯ ಗುಣವು ಎಷ್ಟು ಅನಿವಾರ್ಯವಾಗಿದೆಯೆಂದರೆ, ಕೃಷ್ಣನು ಒಂದು ಭೂಮಿಕೆಯಿಂದ ಒಮ್ಮೆಲೆ ಇನ್ನೊಂದು ಭೂಮಿಕೆಗೆ ಹೋಗುವವನು ಮತ್ತು ಅದರೊಂದಿಗೆ ಒಮ್ಮೆಲೇ ತನ್ಮಯನಾಗುವವನು. ಮಾತ್ರವಲ್ಲದೆ ಹಾಗೆ ಮಾಡುವಾಗ ಮುಂಚಿನ ಭೂಮಿಕೆ ಯೊಂದಿಗೆ ಸಂಬಂಧವಿದ್ದ ವ್ಯಕ್ತಿಗಳನ್ನು ಹೋಮಿಸಿ ಮುಕ್ತನಾಗುವವನು. ದೇವಕಿಗೆ ತಾಯ್ತನವನ್ನು ಕೊಟ್ಟ; ಅವಳನ್ನು ಹಿಂದೆ ಹಾಕಿದ. ಅದೇ ನಂದ ಯಶೋದೆಯರಿಗೂ ಉಂಟಾಯಿತು. ಗೋಪಗೋಪಿಯರ ಪಾಲಿಗೂ ಅದೇ ಬಂತು. ಇನ್ನು ಮಥುರೆಯ ಪ್ರಜೆಗಳಿಗಾದರೋ, ಕಂಸವಧಾನಂತರ, ಅಂಟಿ ಕೊಂಡು ಉಳಿದನೆ? ಎಂದೂ ಇಲ್ಲ. ಮಥುರೆಯನ್ನು ಬಿಟ್ಟು ದ್ವಾರಕೆಗೆ ಹೋದ. ಭಾರತ ಸಂಗ್ರಾಮದಲ್ಲಿ ಶಸ್ತ್ರವನ್ನೇ ಹಿಡಿಯದ ಪ್ರತಿಜ್ಞೆ ಮಾಡಿ ಯೋಧನೆಂಬ ಕೀರ್ತಿಯನ್ನು ವಿಸರ್ಜಿಸಿದ. ತತ್ತ್ವಜ್ಞಾನಿಯ ಭೂಮಿಕೆಯನ್ನು ತಾಳಿದ. ಈ ಭೂಮಿಕೆಯನ್ನು ವಹಿಸುವಾಗ ಅವನು ಯಾದವರನ್ನು ತ್ಯಜಿಸುವ ಸಿದ್ಧತೆಯನ್ನು ಮಾಡಿದ. ಅವರು ಉನ್ಮತ್ತರಾದದ್ದನ್ನು ಕಂಡು ಮುಂದೆ ಅವರಿಗೆ ನಾಶವೊದಗುವಂತೆ ಮಾಡಿದ.

ಈ ಅನಾಸಕ್ತ ಯೋಗೇಶ್ವರನಿಗೆ ಉಚಿತವಾದ ಮರಣವು ಸಮಾಧಿಯದು. ಆದರೆ ಈ ಪಾರಂಪರಿಕ ಭೂಮಿಕೆಯನ್ನು ಅವನು ತ್ಯಜಿಸಿದ. ಅವನಿಗೆ ಮರಣ ಒದಗಿದ್ದು ನಿರ್ಜನ ಪ್ರದೇಶದಲ್ಲಿ; ವ್ಯಾಧನ ಬಾಣ ತಾಗಿ. ಹುಡುಗ, ಸಂಗಡಿಗ, ಬಂಧು, ವಾದಕ, ಪ್ರಿಯಕರ, ಯೋಧ, ಪತಿ, ರಾಜ, ರಾಜಕಾರಣ ಪಟು, ವಕ್ತ, ತತ್ತ್ವಜ್ಞ – ಈ ಎಲ್ಲ ಭೂಮಿಕೆಗಳಲ್ಲಿ ಅಪರಂಪಾರ ರಸವನ್ನು ಹೊಯ್ದು ಅವನು ಕೊನೆಗೆ ಸಾಮಾನ್ಯ ಮನುಜನಂತೆ ಮರಣವನ್ನು ಆರಿಸಿಕೊಳ್ಳುವುದರಲ್ಲಿ ಇವೆಲ್ಲದರ ಪರಮಾವಧಿಯನ್ನು ತಲಪಿದನು. ಕ್ರಿಸ್ತನು, ಸಾಯುವಾಗ, "ಪರಮೇಶ್ವರಾ ನಾನು ಯಾವ ಪಾತಕ ಮಾಡಿದೆನೆಂದು ನೀನು ನನಗೆ ಈ ಶಿಕ್ಷೆ ವಿಧಿಸಿದೆ?" – ಎಂದು ಉದ್ಗಾರ ತೆಗೆದನು. ನನಗೆ ಆ ಉದ್ಗಾರವು, ವಿನಮ್ರ ಮಾನವೀಯತೆಗೆ ಆತ ಹೊರತಾಗಿರಲಿಲ್ಲವೆಂಬುದರ ದ್ಯೋತಕವಾಗಿ ತೋರಿಬರುತ್ತದೆ. ಹಂದಿಯ ಮಾಂಸ ತಿಂದುದರಿಂದ ಅತಿಸಾರದ ಬೇನೆಯಾಗಿ ಗೌತಮ ಬುದ್ಧನಿಗೆ ಮರಣ ಬಂದಿತು. ಮಾನವ ಶರೀರದ ನಿಯತಿಯು ಯೋಗಸಿದ್ಧಿಯನ್ನು ಗಳಿಸಿದವರಿಗೂ ಬರುತ್ತದೆಯೆಂಬುದೇ ಇದರಲ್ಲಿಯೂ ಕಂಡುಬರುತ್ತದೆ. ಅದೇ ಕಥೆ ಕೃಷ್ಣನ ಲೀನ ಮರಣದ್ದು.

ಕೃಷ್ಣನು ಗೋಪಿಯರೊಂದಿಗೆ ಮಾಡಿದ 'ವ್ಯಭಿಚಾರ'ದ ಬಗ್ಗೆ ದೊಡ್ಡ ಗುಲ್ಲನ್ನೆಬ್ಬಿಸಲಾಗುತ್ತದೆ. ಸಾಮಾನ್ಯ ಪ್ರಾಕೃತ ಮನುಷ್ಯನು ಸ್ವೀಕರಿಸುವ ರೀತಿಯಲ್ಲಿಯೇ ಕೃಷ್ಣನೂ ತನ್ನ ಜೀವನವನ್ನು ಸ್ವೀಕರಿಸಿದನಾದರೂ, ಅದರ ಹಿಂದೆಯೂ, ಸಾಮಾನ್ಯ ಮಾನವನ ನಿಯತಿಯಲ್ಲಿ ಉಪ್ಪಿನ ಹರಳಿನಂತೆ ಕರಗಿ ಹೋಗಿ ಅದಕ್ಕೆ ತನ್ನ ಗುಣವನ್ನು ನೀಡುವಂತಹ ಅವನ ಕಸುಬುಗಾರಿಕೆಯೂ ಇತ್ತು – ಎಂಬುದೂ ನಿಜ. ಪಶುಪಕ್ಷಿಗಳು, ಅಶಿಕ್ಷಿತರು, ಕಿರಿಯ ಹಿರಿಯ, ಸುರೂಪ–ಕುರೂಪ ಹೆಣ್ಣುಗಳು ಎಲ್ಲವನ್ನೂ ಅವನು ಸಮಭಾವದಿಂದ ಸ್ವೀಕರಿಸಿದನು. ಅವರೊಳಗಿನವನೇ ಒಬ್ಬನಾಗಿ ಮಾಡಿದನು; ಕೆಲವು ಕಾಲವಾದರೂ ಅವರಲ್ಲಿ ಪೂರ್ತಿಯಾಗಿ ಸಿಲುಕಿಕೊಂಡಂತೆ ಅನಿಸಿದರೂ, ಅವರನ್ನು ಬಿಡಬೇಕಾದ ಪ್ರಸಂಗ ಬಂದಾಗ ಅವರ ಕಡೆ ಮತ್ತೆ ಹೊರಳಿ ನೋಡಲಿಲ್ಲ. ಯುವಾವಸ್ಥೆಯು ಮುಗಿಯುವಷ್ಟರಲ್ಲಿಯೇ ರಾಧೆಯನ್ನು ಬಿಟ್ಟನೆಂದಾಗ ಉಳಿದ ಗೋಪಿಯರತ್ತ ಹೊರಳಿ ನೋಡುವದಂತೂ ದೂರವೇ. ಮುಂದೆ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ. ಕೊನೆಯತನಕ ಕುಟುಂಬ

ಪಾಲನಾವೃತ್ತಿಯನ್ನು ಹಿಡಿದನಾದರೂ ತನ್ನ ವಂಶವನ್ನು ಬೆಳೆಯಗೊಡಲಿಲ್ಲ. ಅಲ್ಲಿಯೂ ಅಪತ್ಯಮರಣದ ವೇದನೆಯನ್ನು ಮೂಕನಾಗಿ ಸಹಿಸಿದನು; ಅಷ್ಟ ನಾಯಕಿಯರ ಪರಿಸರದಲ್ಲಿಯೂ ಏಕಾಕಿಯಾಗಿಯೇ ಉಳಿದನು.

ಆಸಕ್ತಿ ವಿರಕ್ತಿಗಳ ಪರಮಾವಧಿಯನ್ನು ಅವನು ಕುಶಲತೆಯಿಂದ ಮುಟ್ಟಿದ. ಮೋಡದಂತೆ ಬರಿದಾಗಿ ಹೋದ. ದ್ವಾರಕೆ ಸುಟ್ಟಿತು. ಪಾಂಡವರಿಗೂ ರಾಜ್ಯ ಸುಖವೆಂಬುದು ಸಿಕ್ಕಲೇ ಇಲ್ಲ. ಭಾರತ ಯುದ್ಧದಲ್ಲಿಯ ದುಃಖವು ಅವರನ್ನು ಜನ್ಮವಿಡೀ ಸುಡುತ್ತಲೇ ಉಳಿಯಿತು. ಕೃಷ್ಣನದು ಏನುಳಿಯಿತು? ಏನೂ ಇಲ್ಲ. ಉರಿಯುವ ಕರ್ಪೂರದ ಕಂಪು ಮಾತ್ರ. ತನ್ನ ವ್ಯಕ್ತಿತ್ವವನ್ನು ತಾನೇ ಅಳಿಸಿ ಹಾಕುವ ಅವನ ಕೌಶಲವು ನಿಜವಾಗಿಯೂ ಅಪೂರ್ವವಾದುದು.

ಹೀಗಿದ್ದರೂ, ಕೃಷ್ಣನು ಇಂದಿನ ಜಗತ್ತಿನ ವಿಶಾಲ ಅನುಭೂತಿಯಲ್ಲಿ ಸಮಾವಿಷ್ಟನಾಗಬಹುದೆಂದು ಹೇಳಲು ಬರುವಂತಿಲ್ಲ. ಆತ ಮತ್ತೆ ಇಂದಿನ ಜಗತ್ತಿನಲ್ಲಿ ತಿರುಗುತ್ತಿರಬೇಕು; ಆದರೆ, ಆತ ಬಂದಲ್ಲಿ ಜಗತ್ತಿನಲ್ಲಿ ಸುಖಸಿಕ್ಕಬಹುದೆಂದು ನನಗನಿಸುವುದಿಲ್ಲ. ಹೆಚ್ಚು ಹೇಳುವುದರಿಂದೇನು, ಅವನು ಈ ಹಳೆಯ ವಾಙ್ಮಯದ ಅವಗುಂಠನದಲ್ಲಿರುವುದರಲ್ಲಿಯೇ ಅವನ ಚಿರಂತನತ್ವವು ಶಾಶ್ವತವಾಗಿ ಉಳಿಯಬಹುದು. ಕಾರಣ ಯಂತ್ರಯುಗ ಬಂದಿತು; ಕಾಲವೂ ಸೂಕ್ಷ್ಮವಾಯಿತು; ಹೆಚ್ಚು ಜಾಣವಾಯಿತು. ಯಾರದೋ ಒಂಟಿ ಹೆಜ್ಜೆ ಬಿದ್ದರೂ ಅವುಗಳ ಪಡಿದನಿ ಹಿಡಿದು ತನ್ನ ಚಕ್ರ ತಿರುಗಿಸುವ ಭೋಳೆತ[illegible] ಈಗ ಅದರಲ್ಲಿ ಉಳಿದಿಲ್ಲ. ವ್ಯಾಸರ ಕಾಲದಲ್ಲಿ, ಜಾನಪದ ಕಥೆಗ[illegible], ಎಂದೂ ಇಲ್ಲದಿದ್ದ ಯಾವುದೋ ಒಂದು ಕಲ್ಪಿತಕಾಲದಲ್ಲಿ, ಕೃಷ್ಣನ ಜೀವನವು ವಿಶ್ವವ್ಯಾಪಕವಾಯಿತು. ಆದರೆ ವ್ಯಕ್ತಿಜೀವನದ ಸಮಗ್ರ ಕಕ್ಷೆಯೇ ಬೆಳೆದದ್ದರಿಂದ ಯಾವನೋ ಒಬ್ಬ ಸರ್ವಾಂಗೀಣ ಆದರ್ಶಪುರುಷನು ಇಂದಿನ ಸುಸಂಸ್ಕೃತ ಜೀವನವನ್ನು ವ್ಯಾಪಿಸಿ ದಶಾಂಗುಲ ಹೆಚ್ಚು ಉಳಿಯುವಷ್ಟು ದೊಡ್ಡದೆನಿಸಲಿಕ್ಕಿಲ್ಲ. ಹಿಂದಿನ ಧರ್ಮಪ್ರವರ್ತಕರಷ್ಟು ದೊಡ್ಡ ವ್ಯಕ್ತಿಗಳು ಕೇವಲ ತಾತ್ಕಾಲಿಕ ಚಳುವಳಿಯ ಜೀವನದ ಮುಂಚೂಣಿಯಲ್ಲಿ ಮಿಂಚಬಹುದು ಅಷ್ಟೆ. ಸಮಗ್ರ ಮಾನವ ಜೀವನದ ತತ್ತ್ವಜ್ಞಾನವನ್ನು ಹೇಳುವ ಸಾಹಸವನ್ನು ಇಂದು ಯಾರೂ ಮಾಡಲಾರರು. ಕೃಷ್ಣನ ಪ್ರೇಮವು ಅವನ ಕಾಲದಲ್ಲಿ ಸುಂದರವಾಗಿತ್ತು. ಅವನ ರಾಜಕಾರಣಪಟುತ್ವವು ಇಂದಿನ ಗಣರಾಜ್ಯಕ್ಕೆ ಸಾಲುವಂತಿಲ್ಲ. ಆ ಮಹಾಮಾನವನದು ಏನೇನು ಇತ್ತೋ ಅದೆಲ್ಲ

ಇಂದಿನ ಸಂಸ್ಕೃತಿಯ ಪ್ರಗಲ್ಭತೆಗೆ ಸಾಕಾಗುವಷ್ಟಿದ್ದಿಲ್ಲ. ಅವನು ಪೂರ್ಣ ಪುರುಷನಾಗಿದ್ದ; ಆದ್ದರಿಂದಲೇ ಪ್ರಾಕೃತನೂ ಆಗಿದ್ದ. ಅವನು ಕೃಷಿಸಂಸ್ಕೃತಿಯ ಪ್ರತೀಕನಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ. ಸದ್ಯದ ಯಾಂತ್ರಿಕ, ನಾಗರ ಸಂಸ್ಕೃತಿಯಲ್ಲಿ ಆತ ಉಳಿದಿದ್ದರೆ ಅದೊಂದು ಸಂಗ್ರಹದ ಅಲಂಕಾರವೆಂದೇ; ಪೌರುಷ, ಪ್ರೀತಿ, ಸಂಗೀತ ಮತ್ತು ತತ್ತ್ವಜ್ಞಾನದ ಪ್ರತೀಕವೆಂಗೇ. ಅವನ ಕಥೆಯನ್ನು ಶತಾನುಶತಕ ಕೋಟ್ಯವಧಿ ಮುಖಗಳಿಂದ ಮೊಳಗಿಸಿ ಕೊನೆಗೂ, ಜಾಣತನದ ಕಾಲವು ಅವನ ಸ್ವರೂಪವನ್ನು ಪ್ರತೀಕವೆಂದೇ ಸ್ಥಿರಮಾಡಿತು. ಮಹಾಮಾನವನ ಸ್ವಪ್ನಗಳನ್ನೂ ಇಂದಿಗೂ ಒಳ್ಳೊಳ್ಳೆಯ ಜನರು ಕಾಣುತ್ತಾರೆ; ಆದರೆ ಯಂತ್ರಯುಗದಲ್ಲಿ ಮಹಾಮಾನವನನ್ನು ತಿರಸ್ಕರಿಸಲಾಗುತ್ತದೆ, ಉಜ್ಜೀವನಗೊಳಿಸಲಾಗುವುದಿಲ್ಲ. ಏಕೆಂದರೆ ಮಾನವ ಮನಸ್ಸಿನ ಮೂಲಭೂತ ದೌರ್ಬಲ್ಯದ ಅರಿವು ಕೂಡ ಇಂದು ನಮಗಾಗಿದೆ. ಮಹಾಮಾನವನ ಅಂತರ್ಮನವೇನು ಬೇರೆ ಒಲವಿನದೂ ಬೇರೆ ಗುಣದ್ದೂ ಆಗುವುದೇ? ಈಗ ಇಂತಹ ಮಹಾಮಾನವನು ಪ್ರತ್ಯಕ್ಷವಾಗಿ ನಮ್ಮಲ್ಲಿಗೆ ಬರುವುದು ಶಕ್ಯವಿಲ್ಲ; ಇದನ್ನು ತಿಳಿದಿರುವುದರಿಂದಲೇ ನಾವು ಈ ಪೂರ್ವಕಾಲೀನ ಹಿರಿಮೆಯ ಆದರ್ಶಗಳನ್ನು ಗೌರವಿಸುತ್ತೇವೆ; ಪ್ರತೀಕಗಳೆಂದು ಜೋಪಾನ ಮಾಡುತ್ತೇವೆ. ಅವರ ಮತ್ತು ನಮ್ಮ ನಡುವಿನ ಅಂತರವು ಕಡಮೆಯಾಗದಂತೆ ದಕ್ಷತೆ ವಹಿಸುತ್ತೇವೆ.



# ಸಿಡಿದ ಒಗ್ಗರಣೆಯ ಸಾಸಿವೆ

ಮಹಾಭಾರತದಲ್ಲಿ ಶೋಕದ ಸೆಲೆ ಎಲ್ಲಿದೆ? ದ್ರೌಪದಿಯ ಪುತ್ರರ ಸಾವಿನಲ್ಲೇ? ಕರ್ಣನ ಬಲಿದಾನದಲ್ಲೆ? ಕುಂತಿಯ ಕಣ್ಣಿನಲ್ಲಿ ಎಡೆಬಿಡದೆ ಹರಿಯುವ ಅಶ್ರುಧಾರೆಯಲ್ಲೆ? ಕೌರವರ ಭೀಷಣ ಸಂಹಾರದಲ್ಲೆ? ನನಗನಿಸುವುದೇನೆಂದರೆ, ಜ್ಞಾನಲಾಲಸೆಯಿಂದ ಹುಟ್ಟಿದ ಯಾವ ಅಭಿಮಾನವೂ, ಲೀನತೆಯು ಕಂಠಮಟ್ಟದವರೆಗೆ ತುಂಬಿದ ಯಾವ ಅಭಿನವ ಅನಾಮಿಕ ದುಃಖವೂ, ಏಕಲವ್ಯನನ್ನು ಸಂಪೂರ್ಣವಾಗಿ ಏಕಾಕಿಯಾಗಿಸಿದುವೋ, ಅವುಗಳ ಒಂದು ಕಣಕ್ಕೆ ಕೂಡ, ಜಗನ್ಮಾನ್ಯರಾದ ಆ ದೊಡ್ಡವರ ಎಲ್ಲ ದುಃಖಗಳೂ ಒಗ್ಗೂಡಿದರೂ ಸರಿಸಾಟಿಯಾಗಲಾರವು. ಆ ಒಬ್ಬೊಬ್ಬರ ದುಃಖಕ್ಕೂ ಅವರವರದೇ ಆದ ಯಾವುದೋ ಒಂದು ತಪ್ಪು, ಕಾರಣವಾಗಿದೆ.

ಅದಕ್ಕೆ ಅನುಗುಣವಾಗಿ ಅವರು ಆಯಾ ದುಃಖವನ್ನು ಅನುಭವಿಸಬೇಕಾಯಿತು. ಆದರೆ ಏಕಲವ್ಯನಿಗೆ ಅದು ಏಕೆ ಒದಗಬೇಕಾಗಿತ್ತು? ಅವನು ಯಾವ ತಪ್ಪು ಮಾಡಿದ್ದ? ವ್ಯಾಸರು ಕೂಡ, ಅದನ್ನು ಪೂರ್ಣವಾಗಿ ವರ್ಣಿಸಲು ಹೋಗದೆ ಸ್ವಲ್ಪದರಲ್ಲೇ ಹೇಳಿ ಮುಗಿಸಿದ್ದಾರೆ. ಏಕಲವ್ಯನ ಕಥೆಯು ಮುಗಿದಲ್ಲಿಗೆ, ಅದು ನಿಜವಾಗಿ ಮುಗಿಯದೇ ಇದ್ದರೂ, ಕಥೆಯ ಎಳೆಗೆ ಗಂಟು ಹಾಕಿ, ಅದು ಅಲ್ಲಿಗೇ ಕೊನೆಗೊಳ್ಳುವಂತೆ ಮಾಡಿರುವ ಅವರ ಕಾರ್ಯಕ್ಕೆ ಸರಿಸಾಟಿಯಿಲ್ಲ. ಕವಿಯ ಮೌನವು ಎಲ್ಲಕ್ಕಿಂತ ನಿರ್ಮಾಣಶೀಲವಾಗಿರುತ್ತದೆಂದು ಹೇಳಲಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ತಮ್ಮ ಕೃತಿಯಲ್ಲಿ, ಇಂಥ ನಿರ್ಮಿತಿಯ ಬೀಜಗಳನ್ನು ಹೊಟ್ಟೆಯೊಳಗೆ ಅಡಗಿಸಿಟ್ಟುಕೊಂಡ ಮೌನವನ್ನು ವ್ಯಾಸರೊಬ್ಬರೇ ಧರಿಸಿದ್ದು ನನಗೆ ಕಂಡುಬರುತ್ತದೆ. ಆದರೆ, ಒಮ್ಮೊಮ್ಮೆ ಸಂದೇಹ ಬರುತ್ತದೆ, ಪ್ರತಿಷ್ಠಿತತನದ ಗರ್ಭಕ್ಕೆ ಆಹ್ವಾನ ನೀಡುವ, ತೆಕ್ಕೆ ಬೀಳುವ ಮತ್ತು ಕಚ್ಚುವ ಸತ್ಯವನ್ನು ಮುಚ್ಚಿ ಹಾಕುವ, "ನರೋ ವಾ ಕುಂಜರೋ ವಾ"ದಂತಹ ಚಾಲಾಕುತನ ಅದರ ಹಿನ್ನೆಲೆಯಲ್ಲಿ ಇರಲಿಕ್ಕಿಲ್ಲವಷ್ಟೆ – ಎಂಬ ಸಂದೇಹ ಒಮ್ಮೊಮ್ಮೆ ತಲೆದೋರುತ್ತದೆ. ಸ್ವಲ್ಪವೇ ಹೇಳಿದರು; ಮತ್ತು ಸತ್ಯದ ಒಂದು ಮಿಂಚನ್ನು ಶಾಶ್ವತವಾಗಿಸಿದರು. ಮೇಲೆ ಮೇಲೆ ನೋಡಿದರೆ ಏಕಲವ್ಯನ ಕತೆಯು, ಹೇಗೆ ನಡೆಯಿತೋ ಹಾಗೆಯೇ, ಇದ್ದುದು ಇದ್ದಂತೆ ನಿರೂಪಿತ ವಾಗಿದೆ. ಅದರಿಂದ ಮೂಡಬಹುದಾದ ಧ್ವನಿಪ್ರತಿಧ್ವನಿಗಳು ಅಲ್ಲಿ ಸ್ವಲ್ಪವೂ ಮೂಡಿಲ್ಲ. ದೇವಯಾನಿಯ ಪ್ರೇಮಹಾನಿಯ ಆಕ್ರೋಶದ ಸಂದರ್ಭದಲ್ಲಿ ಅದರ ಒಂದೊಂದು ಸೂಕ್ಷ್ಮಧ್ವನಿಯೂ ನಿಚ್ಚಳವಾಗಿ ಕಿವಿಮುಟ್ಟುತ್ತದೆ. ದಮಯಂತಿಯ ಸುಖದುಃಖಗಳು ನವುರಾಗಿ ವರ್ಣಿತವಾಗಿವೆ. ಸಾವಿತ್ರಿಯ ಪಾತಿವ್ರತ್ಯದ ಕಥೆಯಲ್ಲಿ ಪವಿತ್ರತೆಯು ತುಂಬಿ ತುಳುಕುತ್ತಿದೆ. ಆದರೆ ಏಕಲವ್ಯನ ಕಥೆ ಹೇಳುವಲ್ಲಿ ಮಾತ್ರ ನವಿರಾದ ಒಂದೇ ಸ್ವರ ಮತ್ತು ಅತಿ ಸಂಕ್ಷಿಪ್ತತೆ, ಏಕೆ ಬಳಕೆಯಾದವು? ಇಲ್ಲಿ ಕವಿಯ ಮನಸ್ಸನ್ನು ಸಂಪೂರ್ಣವಾಗಿ ತುಂಬಿಕೊಂಡು ಹೊರಚೆಲ್ಲುವಂತಹ ಅಂಶಗಳೇನೂ ಇರಲಿಲ್ಲವೆ? ಎಲ್ಲೆ ಮೀರಿ ಉಕ್ಕೇರಿ ನೆರೆಯಾಗಿ ಹರಿದುಹೋಗುವಂತಹ ಆವೇಗದ ಸತ್ಯವು ಇಲ್ಲಿ ಇದ್ದೇ ಇಲ್ಲವೆ?

ಆದರೆ ಹಾಗೆ ಹೇಳುವುದಾದರೂ ಹೇಗೆ? ಏಕಲವ್ಯನು ಮೌನದಲ್ಲಿ ಅಂತರ್ಗತನಾಗಿ ಹೋದರೂ ದ್ರೋಣನು ಮಾತ್ರ ಉಳಿದುಕೊಂಡನು. ಅವರ ಜೀವನದ ಸಫಲತೆ ವಿಫಲತೆಗಳ ಕಥೆಯಲ್ಲಿಯೇ ಏಕಲವ್ಯನ ಅನಾಮಿಕ

ಉತ್ತರಕಥೆಯು ಕಾಣಸಿಕ್ಕುತ್ತದೆ. ನಾಯಕನು ಹೋದಮೇಲೆ ರಂಗೇರುವ ಖಳನಾಯಕ ನಾಟಕವು ದ್ರೋಣನ ಕಥೆಯದೇ. ಏಕಲವ್ಯನ ಈ ಉತ್ತರ ಕಥೆಯ ಪ್ರಜ್ಞೆಯು ಜಾಗ್ರತವಿದ್ದುದರಿಂದಲೇ ವ್ಯಾಧಗೀತಾ, ಭಗವದ್ಗೀತಾ ಮುಂತಾದ ಅನೇಕ ಉಪದೇಶಪರ ತತ್ತ್ವಜ್ಞಾನಗಳ ಗಾಥೆಗಳು ಉದ್ದಗಲಕ್ಕೂ ಚಾಚಿ ಕೊಂಡು ಬಂದಿರುವುದು ಕಾಣುವುದು. ಏಕಲವ್ಯನ ಕಥೆಯಿಂದ ಹೊರಟ ಕುರೂಪ ಸತ್ಯವನ್ನು ಮುಚ್ಚುವುದಕ್ಕಾಗಿ ಎಷ್ಟೊಂದು ತತ್ತ್ವಜ್ಞಾನ ಭಾಗಗಳನ್ನು ಹೆಣಗಾಡಿ ಹೊಂದಿಸಬೇಕಾಯಿತು! ಒಬ್ಬ ವ್ಯಾಧ ಕುಮಾರನಿಗಾದ ಅನ್ಯಾಯವನ್ನು, ಹೊದಿಕೆ ಹೊದಿಸಿ ಮುಚ್ಚಿಡುವ ಸಲುವಾಗಿ ಮತ್ತೊಬ್ಬ ವ್ಯಾಧನಿಂದ ಎಷ್ಟು ಚೆನ್ನಾಗಿ ಪ್ರಾಪಂಚಿಕ ತತ್ತ್ವಜ್ಞಾನವನ್ನು ಹೇಳಿಸಲಾಯಿತು! ಭಗವದ್ಗೀತೆಯಲ್ಲಿ ಯಾವ ನೀತಿಯ ದಿಗ್ದರ್ಶನ ತಾನೇ ಇಲ್ಲ? ಆದರೆ ಈ ಎರಡೂ ತಾತ್ತ್ವಿಕ ಚಿಂತನೆಗಳಲ್ಲಿ ಏಕಲವ್ಯನ ವೃತ್ತಾಂತಕ್ಕಾಗಲೀ ವೇದನೆಗಾಗಲೀ ಎಲ್ಲೂ ಉತ್ತರವಿಲ್ಲ. ಮೊದಲನೆಯದರಲ್ಲಿ ತಂದೆತಾಯಿಗಳ ಸೇವೆಯ ದೊಡ್ಡ ವ್ಯಾಧನನ್ನು ಎತ್ತರಕ್ಕೆ ಏರಿಸಲಾಗಿದೆ; ಭಗವದ್ಗೀತೆಯಲ್ಲಿ ವಿರಾಟ್‌ದರ್ಶನದ ಸಂದರ್ಭದಲ್ಲಿ ದೂರದ್ದನ್ನಷ್ಟೇ ಕಾಣಿಸಿ ಆತ್ಮದ ಅಮರತ್ವವನ್ನು ಗೌರವಿಸಲಾಗಿದೆ, ಹತ್ತಿರದ್ದರಿಂದ ತಪ್ಪಿಸಿಕೊಳ್ಳಲಾಗಿದೆ. ಒಂದು ವೇಳೆ ಏಕಲವ್ಯನು ತಕರಾರು ಮಾಡಿದ್ದೇ ಆಗಿದ್ದಲ್ಲಿ, ಉಭಯಪಕ್ಷದಿಂದಲೂ, ಅವನ ತಕರಾರಿಗೆ ಸಂಮೋಹವೆಂಬ ಸುಂದರ ಹೆಸರು ಸಿಗಬಹುದಿತ್ತು. ಆದರೆ ತನ್ನಷ್ಟಕ್ಕೇ ತಾನೆ ವಿದ್ಯೆ ಕಲಿತು ತರಬೇತಿ ಪಡೆದ ಹಾಗೂ ಆ ತರಬೇತಿಯ ಮೂಲಕವಾಗಿಯೇ ಕೊನೆಗೆ ನೊಂದು ಬೆಂದು ಹೋದ ಏಕಲವ್ಯನು ತಕರಾರನ್ನಾದರೂ ಏಕೆ ಮಾಡಿಯಾನು? ಒಂದು ವೇಳೆ ಮಾಡಿದರೂ ಅದಕ್ಕೆ ಕಿವಿಗೊಡುವವರು ಯಾರು ? ಅವನ ಆಕ್ರಂದನವು ಬಾಲಕರಂತಹ ಸರಳ ಮನಸ್ಸಿನ ಜನಕ್ಕೆ ಚೆನ್ನಾಗಿ ಕೇಳಿಸುತ್ತದೆ. ಆದರೆ ಅಂತಹ ಜನಕ್ಕೆ ಬಾಯಿ ಯಿರುವುದಿಲ್ಲವಲ್ಲ! ಮೇಲಾಗಿ, ವ್ಯಾಸರು ಭಾರತವನ್ನು ಬರೆದದ್ದಾದರೂ ಯಾರಿಗಾಗಿ? ದೊಡ್ಡವರ ಕಥೆ, ದೊಡ್ಡವರು ಕೇಳುವುದಕ್ಕಾಗಿಯೆ ಬರೆದದ್ದು. ದೊಡ್ಡವರೂ ಒಮ್ಮೊಮ್ಮೆ ತಪ್ಪು ಮಾಡುತ್ತಾರೆ. ಆದರೆ ಆ ತಪ್ಪು ದೊಡ್ಡದೆನಿಸುವುದಿಲ್ಲ, ಬಿಂದು ಮಾತ್ರವಾಗಿ ಪರಿಗಣಿತವಾಗುತ್ತದೆ. ಇಂತಹ ಬಿಂದುಗಳು, ಅವರ ಚರಿತ್ರೆಯೂ ಸಾಮಾನ್ಯ ಮನುಷ್ಯರ ಚರಿತ್ರೆಯೇ ಆಗಿತ್ತು

ಎಂಬುದನ್ನು ತೋರಿಸುವಂತಹ ವಿರಾಮಚಿಹ್ನೆಗಳಂತೆ ವರ್ತಿಸುತ್ತವೆ; ಅವರ ಮತ್ತು ಸಾಮಾನ್ಯ ಜನರ, ನಡುವಿನ ಕೊಂಡಿಯಂತೆ ಕಾಣಸುತ್ತವೆ. ಆದ್ದರಿಂದ, ಇವುಗಳಿಂದ ಅವರ ಯಶಸ್ಸಿಗೆ ಮಸಿತಟ್ಟುವುದಾದರೂ ಎಲ್ಲಿ?

ತತ್ತ್ವಜ್ಞರೂ ರಾಜಕಾರಣಿಗಳೂ ಆದ ವ್ಯಾಸರ ಹೊರನೋಟದ ನ್ಯಾಯವು ಇದೇ ಆಗಿದೆ. ಆದರೆ, ಅವರಲ್ಲಿ ಹುದುಗಿದ ಕಲಾವಿದ ವ್ಯಾಸರು ಮಾತ್ರ ಮಹಾತುಂಟರು. ಎಷ್ಟೇ ಪತ್ತಿಕ್ಕಲಿ ಗದರಿಸಲಿ ಅವರು ಲೆಕ್ಕಿಸುವುದಿಲ್ಲ. ಹೊರಗಿನ ವ್ಯಾಸರಿಗೆ ಕಂಡಷ್ಟು ಮಾತ್ರವೇ ಸತ್ಯ ಎಂದು ಅವರು ತಿಳಿಯುವುದಿಲ್ಲ. ಸತ್ಯಕ್ಕೂ ಪದರಗಳಿರುತ್ತವೆ. ಪ್ರತಿಯೊಂದು ಪದರದ ಬಣ್ಣ ಬೇರೆ, ಮೌಲ್ಯ ಬೇರೆ. ಇದನ್ನು ಅವರು ಬಲ್ಲರು. ಕರಾರುವಕ್ಕಾಗಿ ಆ ವರ್ಣಛಾಯೆಯನ್ನು, ಆ ದಟ್ಟಜಾಡನ್ನು, ಆ ಮೌಲ್ಯವನ್ನು ಹೆಕ್ಕಿತೆಗೆದು ಅವರು ಯೋಗ್ಯ ಹೆಸರು ಕೊಡುತ್ತಾರೆ. ಅದನ್ನು ಸರಿಯಾಗಿ ಅಳೆಯುತ್ತಾರೆ; ಅನಂತರ ಕುಂಚವನ್ನೆತ್ತಿಕೊಂಡು ಆ ಸ್ಪಷ್ಟ ಆಕೃತಿಯ ಆಧಾರದ ಮೇಲೆ, ಹಿಂದೆ ತಮಗೆ ತೋರಿದಂಥ ಈ ಒಂದು ವರ್ಣಚಿತ್ರವನ್ನು ರಚಿಸುತ್ತಾರೆ. ಈ ಚಿತ್ರವು, ಬಹಳ ಮತ್ತು ಪಾರದರ್ಶಕವಾಗಿರುತ್ತದೆ. ದಿಟ್ಟಿಸಿ ನೋಡಿದಲ್ಲಿ ಅದರ ಮೂಲ ರೇಖೆಗಳೂ ಕಣ್ಮರೆಯಾಗುತ್ತವೆ. ಆದರೆ ಮುಖ್ಯ ಧಾಳ ಚಿತ್ರದತ್ತ ನೋಡಿದಾಗ ಮಾತ್ರ ಕೆಲವೊಮ್ಮೆ ಅದಕ್ಕೆ ಜತೆ ನೀಡುತ್ತಾ ಕೆಲವೊಮ್ಮೆ ಅದನ್ನು ವಿಡಂಬಿಸುತ್ತಾ ಅದರ ಹಿಂದೆ ಅವು ಇದ್ದೇ ಇರುತ್ತವೆ. ಸರಿ, ಇನ್ನು ಇಂತಹ ಕಲಾಕೃತಿಯನ್ನು ರಚಿಸಿಬಿಟ್ಟು ಅವರು ಸುಮ್ಮನಾಗುವರೋ ಎಂದರೆ ಇಲ್ಲ. ಕೆಲವೊಮ್ಮೆ ಆ ಮೂಲಚಿತ್ರದ ಬದಿಗೆ ವಿಚಿತ್ರರೇಖೆಗಳನ್ನು ಬಿಡಿಸುತ್ತಾರೆ. ಕೆಲವೊಮ್ಮೆ ಅದರ ಸುತ್ತಲೂ ನಾದದ ಸುಳಿಗಳು ಸುತ್ತುತ್ತಿರುವಂತೆ ಅಳವಡಿಸುತ್ತಾರೆ. ಕೆಲವೊಮ್ಮೆ ಆ ಸ್ವರಗಳು ಸುಸಂವಾದಿಯಾಗಿ ಮೂಡಿದರೆ ಕೆಲವೊಮ್ಮೆ ವಿಸಂವಾದಿಯಾಗಿ ಮೂಡುತ್ತವೆ. ಕಣ್ಣು ಏನನ್ನು ನೋಡುತ್ತದೆಯೋ ಅದಕ್ಕೆ ವಿರುದ್ಧವಾದುದನ್ನು ಕಿವಿಯು ಕೇಳುತ್ತದೆ. ಆದರೆ ಎಲ್ಲಿ ನಾದ–ದೃಶ್ಯಗಳೆರಡೂ ಒಂದಾಗುತ್ತವೆಯೋ ಅಲ್ಲಿ ಒಂದು ವಿನೂತನ ಕಲಾಕೃತಿಯು ಒಡಮೂಡುತ್ತದೆ. ಸುಂದರ, ಅಸುಂದರ, ರುದ್ರ, ಕರುಣ, ಪ್ರಸನ್ನ, ಭೀಷಣ – ಹೀಗೆ ಯಾವ ವಿಶೇಷಣವನ್ನೂ ಅದಕ್ಕೆ ಅಂಟಿಸಲು ಬರುವುದಿಲ್ಲ. ಒಳಗಿನ ವ್ಯಾಸರ ಭೇದಕ ಕಲಾದೃಷ್ಟಿಯು ಈ ದ್ವಂದ್ವಗಳ ಭೇದರೇಷೆಗಳನ್ನು ಗುರುತಿಸಲು ಹೋಗುವುದಿಲ್ಲ. ಅದು ತಿಳಿದಿರುವುದು ಒಂದೇ ಒಂದು ತತ್ತ್ವವನ್ನು; ಕಾಲದ ಎಲ್ಲ ಸ್ತರಗಳಲ್ಲೂ ಎಲ್ಲ ಮಾನವರಲ್ಲೂ ಹರಿಯುವ ಮಾನವೀಯತೆಯ ಸತತ ಧಾರೆಯನ್ನು. ಎಲ್ಲಿ ಈ

ಧಾರೆಗೆ ಅಡ್ಡಿಬರುತ್ತದೆಯೋ ಅಲ್ಲಿ ವ್ಯಾಸರ ಕಲಾನಿಷ್ಠ ಕ್ರೋಧವು, ಅವರ ದುಃಖಾವೇಗವು, ಸಿಡಿದು ಉಕ್ಕಿ ಹೊರಚಿಮ್ಮುತ್ತದೆ; ಬದುಕಿನ ತಾಳದ ಮೇಲೆ ಸಾವಿನ ಸಂಗೀತವನ್ನು ಹಾಡುತ್ತದೆ.

ಕಲಾವಿದ ವ್ಯಾಸರು ಹಾಡುಗಳನ್ನು ಹಾಡಿಯೇ ಹಾಡಿದರು. ಆದರೆ ಒಂದು ಹಾಡು ಹೀಗೆ ಬಂತು : ಸ್ಫುರಿಸಿಯೂ ಸ್ಫುರಿಸಲಿಲ್ಲ, ಬಿಟ್ಟನೆಂದರೂ ಬಿಡಲಿಲ್ಲ. ಆ ಹಾಡಿನ ಅಮೂರ್ತಸ್ವರಗಳಿಂದ ಭಾವಗಳಿಂದ ಅವರು ಆವೇಶ ಹೊಂದಿದರು. ಆ ಅವಸ್ಥೆಯಲ್ಲಿ ಏಕಲವ್ಯನ ವ್ಯಥೆಯು ದ್ರೋಣರ ಚಿರವ್ಯಥೆಯೊಂದಿಗೆ ಒಂದಾದುದನ್ನು ಕಂಡರು. ಇಲ್ಲ! ಈ ಕಥೆಯು ಈಗ ಏಕಲವ್ಯನದಾಗಿ ಉಳಿಯಲಿಲ್ಲ, ದ್ರೋಣರದಾಗಿಯೂ ಉಳಿಯಲಿಲ್ಲ. ಬುದ್ಧಿವಂತರ, ಅವಿಕಸಿತ ಆಕಾಂಕ್ಷೆಗಳ ಭೀಷಣ ಶೋಕದ ಕಥೆಯೂ ಆಯಿತು ಅದು. ಇಂಥ ಜ್ಞಾನಿಗಳ ವಿಶಾಲ ಜಗತ್ತು, ಒಗ್ಗರಣೆಯ ಸಾಸಿವೆಯಷ್ಟು ಹಗುರ ಮತ್ತು ಚಿಕ್ಕದಿರುತ್ತದೆ. ಅದರಲ್ಲಿ ಎಷ್ಟೇ ಪ್ರಾಣತುಂಬಲಿ ಅದು ಚಿಕ್ಕದಾಗಿಯೇ ಇರುತ್ತದೆ; ಯಾರಾದರೊಬ್ಬ ಮಹಾಭಾಗನ ಸ್ಪರ್ಶದಿಂದ ಅದು ಮತ್ತೆ ವಿಶಾಲವಾಗಬೇಕು. ಸಾಸಿವೆ ಸಾಸಿವೆಯೇ. ಒಬ್ಬರು ದೊಡ್ಡವರಾಗಬೇಕಾದರೆ ಇನ್ನೊಬ್ಬರು ಸಣ್ಣವರಾಗಿ ಉಳಿಯಲೇ ಬೇಕು. ಇಂತಹ ಒಂದು ಪರಂಪರೆ ಯನ್ನೇ ಈ ಸಿಡಿದ ಒಗ್ಗರಣೆಯ ಸಾಸಿವೆಯು ಸಿದ್ಧಪಡಿಸಿತು. "ನೀನು; ಇಲ್ಲವಾದರೆ ನಾನು" ಎಂಬ ತತ್ತ್ವಜ್ಞಾನವುಂಟಾಯಿತು. ಬಲಶಾಲಿಯ ಬಲವು ನಿಸರ್ಗಸಿದ್ಧವಾಗಿ, ತಪಸ್ಸಿದ್ಧವಾಗಿ ಉಳಿಯಲಿಲ್ಲ. ವ್ಯವಹಾರ ಸಮರ್ಥರ ಕೈಗೆ ಆ ಬಲವು ಹೋಯಿತು. ಬುದ್ಧಿ ಕೌಶಲ ಎಲ್ಲದರ ನಿಯೋಜನವು ದ್ರೋಣರು ಏಕಲವ್ಯನ ಹೆಬ್ಬೆರಳನ್ನು ಸ್ವೀಕರಿಸಿದಂದಿನಿಂದ ಪ್ರಾರಂಭವಾಯಿತು. ನಿರ್ಮಾಣ ಕ್ಷಯಕಾರಿಯಾದ ಈ ನಿಯೋಜನೆಗೆ ಒಮ್ಮೆ ಯಾವ ಚಾಲನೆ ದೊರೆಯಿತೋ, ಅದು ಇಂದಿಗೂ ಎಲ್ಲಿಯೇ ನೋಡಲಿ, ಎಂದಿಗೇ ನೋಡಲಿ, ಒಂದೇ ಸಮನೆ ತಾನೇ ತಾನಾಗಿ ತಿರುಗುತ್ತಲೇ ಇದೆ.

ದ್ರೋಣರು ಬಡ ಬ್ರಾಹ್ಮಣ. ಬ್ರಾಹ್ಮಣನಿಗೆ ಬಡತನವು ಅಪರಿಚಿತವಲ್ಲ. ಅದರೆ, ಬಡತನದಿಂದ ಯಾರ ಮನಸ್ಸು ಅಕ್ಷರಶಃ ಸುಟ್ಟು ಕರಕಾಗಿ ಹೋಯಿತೋ, ಮತ್ತೆಂದೂ ಅದು ಹಿಂದಿನಂತೆ ನಳನಳಿಸಲಿಲ್ಲವೋ, ಅಂತಹ ದ್ರೋಣರಂತಹ ಬ್ರಾಹ್ಮಣ ಅಪರೂಪವೇ. ದ್ರುಪದನು, ವಿದ್ಯಾರ್ಥಿದೆಶೆಯಲ್ಲಿ ದ್ರೋಣರ ಗೆಳೆಯ. ಇಬ್ಬರೂ, ಉಸಿರಿರುವ ವರೆಗೂ ಗೆಳೆಯರಾಗಿರುವ ಆಣೆ

ಹೊತ್ತವರು. ದ್ರೋಣರು ಸಕಲ ವಿದ್ಯಾಪಾರಂಗತರು. ಯುದ್ಧಶಾಸ್ತ್ರದಲ್ಲಿ ಯಂತೂ ಅಪ್ರತಿಮ ಪ್ರವೀಣರು. ಆದರೆ ಗ್ರಹಸ್ಥಾಶ್ರಮಿಯಾದರು. ಬಡತನದ ಮುಳ್ಳುಗಳು ಚುಚ್ಚಹತ್ತಿದವು. ಮಗುವು ಹಾಲು ಬೇಡಿತು. ಹಾಲು ಇರಲಿಲ್ಲ. ನೀರಿನಲ್ಲಿ ಹಿಟ್ಟನ್ನು ಕಲೆಸಿ ಅದನ್ನು ಕುಡಿಸಿದರು. "ನಾನು ಹಾಲು ಕುಡಿದೆ" ಎಂದು ಮಗು ಕುಣಿದಾಡಹತ್ತಿತು. ಅದನ್ನು ಕಂಡು ತಂದೆಯ ಎದೆ ಒಡೆಯಿತು. ದ್ರುಪದನು ತನ್ನ ಮಿತ್ರ. ಅವನೆಡೆಗೆ ಹೋಗಬೇಕೆಂದು ಹೊರಟರು. ದ್ರುಪದನ ಮನೆಯಲ್ಲಿ ವಿಪರೀತ ಅನುಭವ ಬಂತು. ದ್ರುಪದನು ಅವರನ್ನು ಗುರುತಿಸಲಿಲ್ಲ; ಬದಲಾಗಿ ಗೇಲಿಮಾಡಿದನು. ಆಗ ದ್ರೋಣರು ಬಹಳ ಕ್ರುದ್ಧರಾದರು. ಅವರಿಗೆ, ತಮ್ಮ ಕ್ಷತ್ರ ವಿದ್ಯೆಯ ನೆನಪಾಯಿತು. ದ್ರುಪದನನ್ನು ಅವನ ಮಕ್ಕಳು ಮೊಮ್ಮಕ್ಕಳೊಂದಿಗೆ ಕೊಲೆಗೈಯುವ ಪ್ರತಿಜ್ಞೆ ಮಾಡಿ, ಅವರು, ಧೃತರಾಷ್ಟ್ರನ ಆಸ್ಥಾನದಲ್ಲಿ ರಾಜಪುತ್ರರಿಗೆ ಶಸ್ತ್ರವಿದ್ಯೆ ಕಲಿಸುವ ಉದ್ಯೋಗವನ್ನು ಹಿಡಿದರು. ಅದರಲ್ಲಿಯೂ ಅರ್ಜುನನ ಕೌಶಲವನ್ನು ಕಂಡು, ಇವನ ಕೈಯಿಂದಲೇ ತಾನು ತನ್ನ ಕಾರ್ಯವನ್ನು ಸಾಧಿಸಿಕೊಳ್ಳಬಹುದೆಂಬ ಆಸೆಯನ್ನು ಮನಸ್ಸಿನಲ್ಲಿಟ್ಟು ಕೊಂಡು ಬೆಳಸಿದರು. ಅರ್ಜುನನ ಮಹತ್ವಾಕಾಂಕ್ಷೆಗೆ ಬಹಳವಾಗಿ ಗೊಬ್ಬರ ಹಾಕಿದರು. "ನಿನಗೆ ಸಮನಾದ ಧನುರ್ಧರ ಬೇರೊಬ್ಬನಾಗಲಾರ"ನೆಂಬ ಅಭಿವಚನವನ್ನೂ ಅವನಿಗೆ ನೀಡಿದರು.

ಈಗ ಪರಿಸ್ಥಿತಿ ಸುಧಾರಿಸಿತ್ತು. ಆದರೂ ಅವರ ಮನಸ್ಸಿನಲ್ಲಿ ದ್ರುಪದನನ್ನು ಕುರಿತಾದ ವೈರವು ಬೆಳೆಯುತ್ತಲೇ ಇತ್ತು. ಎಲ್ಲಿಯವರೆಗೆಂದರೆ ಕೊನೆಗೆ ದ್ರುಪದನು ಬದಿಗೆ ಸರಿದುಳಿದನಾದರೂ ಅವನ ಬಗೆಗಿನ ವೈರ ಮಾತ್ರ ದ್ರೋಣರ ಮನಸ್ಸಿನ ಮೂಲೆಮೂಲೆಯಲ್ಲೂ ಸಿಡಿಮಿಡಿಯನ್ನುಂಟುಮಾಡಿತು. ಅವರ ರೋಮರೋಮದಲ್ಲಿ ಅಸಹಿಷ್ಣುತೆ ವ್ಯಾಪಿಸಿತು. "ಗುರುವೆಂದರೆ ನಾನು. ಶಿಷ್ಯನೆಂದರೆ ನನ್ನವನು. ವಿದ್ಯೆಯ ಇತಿಮಿತಿ, ನಾನು ಯಾವುದನ್ನು ತೋರಿಸುವೆನೋ ಅದು" –ಎಂಬಂತಹ ರೋಗಿಷ್ಠ ವೃತ್ತಿಯ ಈ ಮನುಷ್ಯನಲ್ಲಿ ಜ್ಞಾನದ ಸಂಯಮ, ವಿನಯ, ಬರುವುದಾದರೂ ಎಲ್ಲಿಂದ? ಇದೇ ಅನುದಾರ, ಆತ್ಮಕೇಂದ್ರಿತ ವೃತ್ತಿಯ ನಿದರ್ಶನವು ಏಕಲವ್ಯನಂಥ ಕಾಡಿನ ರಾಜಕುಮಾರ ನನ್ನು ತನ್ನ ಶಿಷ್ಯನಾಗಿ ಸ್ವೀಕರಿಸಲು ಒಪ್ಪದಿರುವುದರಲ್ಲಿ ಕಂಡುಬಂದಿತ್ತು. ಆದರೂ ದ್ರೋಣರನ್ನು ಗುರುವಾಗಿ ಭಾವಿಸಿ ಏಕಲವ್ಯನು ಧನುರ್ವಿದ್ಯೆಯಲ್ಲಿ ಗಳಿಸಿದ ಪ್ರಾವೀಣ್ಯವನ್ನು ಕಂಡು ಅರ್ಜುನನಿಗೆ ವಿಪರೀತ ಮತ್ಸರ ವುಂಟಾಯಿತು. ಈ ಭಿಲ್ಲಕುಮಾರನು ತನ್ನ ಗುರುವಿನ ಶಿಷ್ಯನೆಂಬುದನ್ನು

ಕಂಡಾಗಂತೂ ಅರ್ಜುನನಿಗೆ ಕೆಂಡದಂಥ ಕ್ರೋಧವುಂಟಾಯಿತು. ಗುರುಗಳಿಗೆ ಆತ ಅವರ ವಚನದ ನೆನಪು ಮಾಡಿಕೊಟ್ಟ ಮತ್ತು ಆ ಗುರುಗಳೂ ಗುರುದಕ್ಷಿಣೆಯ ನಿಮಿತ್ತದಿಂದ ಏಕಲವ್ಯನ ಬಲಗೈಯ ಹೆಬ್ಬೆರಳನ್ನು ಕಡಿದು ಕೊಡಲು ಕೇಳಿದರು. ಏಕಲವ್ಯನು ಹಿಂದೆಮುಂದೆ ನೋಡದೆ ಅದನ್ನು ಕತ್ತರಿಸಿಕೊಟ್ಟನು. ಇಲ್ಲಿಗೆ ಅವನ ಪೂರ್ವಕಥೆ ಮುಗಿಯಿತು. ಆದರೆ, ಎಲ್ಲಿ ಏಕಲವ್ಯನ ಜೀವಂತ ಮರಣ ಆರಂಭವಾಯಿತೋ ಅಲ್ಲಿಂದಲೇ ದ್ರೋಣರ ಮೃತ ಜೀವನಕ್ಕೆ ಪ್ರಾರಂಭವಾಯಿತು. ರಾಜಕುಲದಲ್ಲಿ ತನ್ನ ಪ್ರತಿಷ್ಠೆ ಭದ್ರವಾಗಿರಬೇಕೆಂಬ ಉದ್ದೇಶದಿಂದ ದ್ರೋಣರು ಅರ್ಜುನನಿಗೆ ಮಾತು ಕೊಟ್ಟರು; ಮೇಲಿಮೇಲೆ ನೋಡಿದಾಗ, ಕ್ರೌರ್ಯದ, ಅನ್ಯಾಯದ ಕಲಂಕ ಅಂಟುತ್ತಿದ್ದರೂ ಅದನ್ನು ಪೂರ್ಣಮಾಡಿದರು. ಇದರಲ್ಲಿ ಶಿಷ್ಯಪ್ರೀತಿಯಾದರೂ ಆ ರೀತಿಯದೇ ಇರಬೇಕಾಗಿತ್ತು. ಆದರೆ ಅದು ಅವರ ಸ್ವಭಾವವೇ ಆಗಿಬಿಟ್ಟಿತ್ತು. ಒಮ್ಮೆ ಕಳೆದ ದಾರಿದ್ರ್ಯವು ಮತ್ತೆ ಬರಬಹುದೋ ಏನೋ ಎಂಬ ಕೆಟ್ಟ ಗಾಬರಿಯೇ ಬಹುಶಃ ಅವರನ್ನು ನುಂಗಿರಬೇಕು. ದಾರಿದ್ರ್ಯದ ಈ ಬೆನ್ನಟ್ಟುವಿಕೆಯಿಂದ ಅವರು ಎಂದೂ ಮುಕ್ತರಾಗಲಿಲ್ಲ. ಅವರ ಕಾರ್ಯ ಶೂರನದು. ಆದರೆ ಈ ಭೀತಿಯನ್ನು ಗೆಲ್ಲಲು ಅವರಿಗೆ ಸಾಧ್ಯವಾಗಲಿಲ್ಲ.

ತನ್ನಂತೆಯೇ ತನ್ನ ಮಗನೂ ಯಶಸ್ವಿಯಾಗಬೇಕು, ತನಗಿಂತ ಒಂದೂ ಕಾಲುಪಟ್ಟು ಮಿಗಿಲಾಗಬೇಕೆಂದು ಯಾವ ತಂದೆಗೆ ಅನಿಸುವುದಿಲ್ಲ? ದ್ರೋಣರಿಗೂ ಹಾಗೆ ಅನಿಸಿದ್ದರೆ ಸೋಜಿಗವೇನು? ಆದರೆ ಸೋಜಿಗವಿದೆ. ಏನೆಂದರೆ, ಯಾರು ಒಮ್ಮೆ ಬದುಕಿನತ್ತ ಆತ್ಮಕೇಂದ್ರಿತ ದೃಷ್ಟಿಯಿಂದ ನೋಡಲು ಆರಂಭಿಸಿದನೋ ಅವನಿಗೆ ಇತರ ಎಲ್ಲ ಬಗೆಯ ನಿಷ್ಠೆಗಳೂ ಹೊರತಾಗುತ್ತವೆ. ದ್ರೋಣರದೂ ಹಾಗೆಯೇ ಆಯಿತು. ಕೌರವ ಪಾಂಡವರಿಂದಾಗಿ ಅವರ ಬಡತನವು ನೀಗಿತು. ಅವರಿಗೆ ರಾಜಾಶ್ರಯ ದೊರಕಿತು. ಆದರೆ ಅಂಥದರಲ್ಲಿ ಆ ಶಾಸ್ತ್ರವೇತ್ತನ ಮನಸ್ಸಿನಲ್ಲಿ ಎಂಥ ನಿಷ್ಠೆಗೂ ಆಧಾರವುಳಿಯಲಿಲ್ಲ. ಸ್ವಾಮಿಭಕ್ತಿಯ ಸರ್ವಶ್ರೇಷ್ಠ ಮೌಲ್ಯಕ್ಕೂ ಅವರು ಮಸಿ ಬಳಿದರು. ತನ್ನ ಮಗನು ಅರ್ಜುನನಿಗಿಂತಲೂ ಮಿಗಿಲಾಗಬೇಕೆಂಬ ಲಾಲಸೆಯಿಂದ ಅವರು ಇತರ ಹುಡುಗರನ್ನು ಕೆಲಸಕ್ಕೆ ಕಳುಹಿಸುತ್ತಿದ್ದರು; ಅಶ್ವತ್ಥಾಮನಿಗೆ ಮಾತ್ರ ಅಮೂಲ್ಯ ಶಸ್ತ್ರಗಳನ್ನು ಕಲಿಸುತ್ತಿದ್ದರು. ಅವರ ಈ ಠಕ್ಕುತನ ಕೊನೆಗೆ ಹೊರಬಂತು. ಆದರೂ ಅವರು ಒಂದು ಅಮೋಘ ಅಸ್ತ್ರವನ್ನು ತಮ್ಮ ಮಗನಿಗೆ ಕದ್ದು ಕೊಟ್ಟೇ ಕೊಟ್ಟರು. ಆದರೆ ಆ ಮೂಲಕ ಎಷ್ಟು ಭಯಂಕರ ಶಾಪವು ಅವನ ಪಾಲಿಗೆ

ಬಂತು! ಅರ್ಜುನ ಮತ್ತು ದ್ರೋಣ ಇಬ್ಬರೂ ಒಂದೇ ಈರ್ಷೆಯಿಂದ ಉರಿದೆದ್ದವರು. ತಮಗಿಂತ ಇನ್ನಾರೂ ಪ್ರವೀಣರಿರಕೂಡದು. ಇದ್ದದ್ದೇ ಆದರೆ ಆ ಕಂಟಕವನ್ನು ಹೇಗಾದರೂ ಕೀಳಬೇಕು. ಶಿಖಂಡಿಯ ಆಶ್ರಯವನ್ನು ಪಡೆಯುವ ಧೈರ್ಯವು ಅರ್ಜುನನಿಗೆ ಆದದ್ದು ಈ ಮೂಲಕವೇ. ಅರ್ಜುನನಿಗೆ ಕೃಷ್ಣನ ಆಧಾರವಿತ್ತು. ಆದ್ದರಿಂದ ಅವನ ಎಲ್ಲ ಲೋಪದೋಷಗಳೂ ಮುಚ್ಚಿಹೋದವು. ಆದರೆ ಕೌರವರು ಬಲಿಷ್ಠರಾದಂತೆ ದ್ರೋಣರು ಮಾತ್ರ ಹೆಚ್ಚು ಹೆಚ್ಚು ಅದುಮಲ್ಪಟ್ಟರು. ದುರ್ಯೋಧನನ ಒಂದೊಂದು ಕೃತ್ಯವನ್ನೂ, ತಮ್ಮ ಮನಸ್ಸಿಗೆ ಬರಲಿ ಬರದಿರಲಿ, ಸಮರ್ಥಿಸಬೇಕಾದುದು ಅವರಿಗೆ ಅಗತ್ಯ ವಾಯಿತು. ಪ್ರತಾಪಶಾಲೀ ಕೌರವರಿಗೆ ಅವರು ಹಂಗಿಗರಾದರು. ಪಾಂಡವರು ಪದಹೀನರಾಗಿದ್ದರು. ಅವರೊಂದಿಗೆ ಹೋಗಲು ಅವರಿಗೆ ಶಕ್ಯವಾಗಲಿಲ್ಲ. ಕೌರವರ ಪ್ರತಿಯೊಂದು ಕೃತ್ಯದಿಂದ ದ್ರೋಣರ ತಲೆ ತಗ್ಗುತ್ತಿತ್ತು. ಕಣ್ಣು ತೆರೆಯುತ್ತಿದ್ದವು; ಆದರೆ ವಯಸ್ಸು ಮೀರಿತ್ತು. ಕೌಶಲವು ಹಂಗಿಗೆ ಬಿದ್ದಿತ್ತು. ಏಕಲವ್ಯನಿಗೆ ತಾವು ಬಗೆದ ಅನ್ಯಾಯದ ನೆನಪು ಈ ಪ್ರಸಂಗದಲ್ಲಿ ಅವರಿಗೆ ಎಂದೂ ಆಗಿರಲಿಲ್ಲವೆ? ಆಗಿದ್ದರೆ, ಕೌರವರ ಅನ್ಯಾಯಗಳ ವಿರುದ್ಧ ಮಾತಾಡಲು ತಮಗೆ ಅಧಿಕಾರವೇ ಇಲ್ಲವೆಂದು ಅವರಿಗೆನಿಸಿರಬೇಕು; ಅದರಿಂದ ಅವರು ದೀನರಾಗಿ ತೆಪ್ಪಗೆ ಉಳಿದಿರಬೇಕು. ಆದರೆ ಆ ನೆನಪೂ ಅವರ ಮನಸ್ಸಿನಿಂದ ಜಾರಿದ್ದರೆ, ಆಗ ಮಾತ್ರ ಅವರನ್ನು ಬಧಿರತೆಯ ಬಾಧೆಯು ಪೂರ್ಣವಾಗಿ ಆವರಿಸಿರಬೇಕು.

ವಿದ್ಯಾವಂತರ ಬಧಿರತೆಯು ಸಂಸ್ಕೃತಿಗೆ ಅಂಟಿದ ದೊಡ್ಡ ಶಾಪ. ಬುದ್ಧಿವಂತರ ಸಂವೇದನಕ್ಷಮತೆಯು ಕುಗ್ಗಿ ಕಳೆಗುಂದಿದೊಡನೆ ಮುಂದೆ ಪಾಶವೀ ಬಲದ ಆಗ್ರಹವೇ ಅನಿವಾರ್ಯವಾಗುತ್ತದೆ. ಸಭ್ಯರು, ಸ್ವಂತವನ್ನು ಕುರಿತು ಕನಿಕರಪಡುತ್ತ ಕೂತಿರುತ್ತಾರೆ; ಆಗ ಚಳುವಳಿಕಾರರು–ಎರಡನೆಯ ತರಗತಿಯ ಮಂದಿ– ಸಾಮರ್ಥ್ಯದ ಎಲ್ಲ ಕ್ಷೇತ್ರಗಳನ್ನೂ ವಶಪಡಿಸಿಕೊಂಡು ಬಿಡುತ್ತಾರೆ. ಆದರೆ ಅವನ್ನು ಬಹಳ ಕಾಲ ತೂಗಿಸಿಕೊಳ್ಳಲು ಅವರಿಗೂ ಆಗುವುದಿಲ್ಲ. ಸ್ಥಾನಗಳು ದೊಡ್ಡವು, ಮಂದಿ ಸಣ್ಣವರು. ಹೀಗೆ ತಿರುವು ಮುರುವಿನ ಗಣಿತ ಆರಂಭವಾಗುತ್ತದೆ. ಈ ವ್ಯಸ್ತ ಗಣಿತದ ಚಕ್ರವನ್ನು ದ್ರೋಣರು ಯುಗದ ಪೂರ್ವದಲ್ಲಿಯೇ ತಿರುಗಿಸಿದರು. ಇನ್ನೂ ಅದು ಹಾಗೆಯೇ ತಿರುಗುತ್ತಿದೆ! ದ್ರೋಣರು ಹೋದರೂ ಸಿಡಿಮಿಡಿ, ನರಳಾಟ, ಹೋಗಿಲ್ಲ. ಅಶ್ವತ್ಥಾಮ ರೂಪದಿಂದ ಅದಕ್ಕೆ ಅಮರತ್ವ ಬಂತು. ಯಾವ

ಅಸ್ತ್ರದಿಂದಾಗಿ, ಅಶ್ವತ್ಥಾಮನಿಗೆ ಯುದ್ಧದಲ್ಲಿ ಸಾವು ಬರಲಿಲ್ಲವೋ, ಹೆಚ್ಚೇನು, ಚಿರಂಜೀವಿತ್ವವು ಅವನ ಪಾಲಿಗೆ ಬಂದಿತೋ, ಅದರಲ್ಲಿ ಅವನಿಗೆ ಯಾವ ಸುಖ ಸಿಕ್ಕಿತು? ದ್ರೌಪದಿಯ ಮಕ್ಕಳನ್ನು, ಅವರು ನಿದ್ರೆಯಲ್ಲಿದ್ದಾಗ ಅವನು ಕೊಂದ. ಆದರೆ ತಾಯಿಯ ದುಃಖವೇನಿರುತ್ತದೆಂದು ಅರಿತದ್ದರಿಂದ ದ್ರೌಪದಿಯು ಅವನಿಗೆ ಜೀವದಾನ ಮಾಡಿದಳು. ಆದರೆ ಅವನ ತಾಯಿಯು ನೋಡಿದ್ದೇನು? ಮಗನ, ಸದಾ ನೆತ್ತರು ಸುರಿಯುವ ತಲೆಯನ್ನು, ಎಂದಿಗೂ ಮುಗಿಯದ ವೇದನೆಯನ್ನು, ಎಂದಿಗೂ ನಿಲ್ಲದ ಬಿರಿಬಿರಿ ಅಲೆದಾಟವನ್ನು ಯಾಚನೆಯನ್ನು. ಏಕಲವ್ಯ ಸತ್ತ. ತನ್ನ ಸರ್ವಸ್ವವನ್ನೂ ಗುರುಚರಣಗಳಲ್ಲಿ ಅರ್ಪಿಸಿದ ಸಮಾಧಾನವನ್ನು ಜತೆಗೆ ತೆಗೆದುಕೊಂಡು ಹೋದ. ಆದರೆ ಆ ಘೋರ ವಂಚನೆಯ ಉತ್ತರ ಕಥೆಯನ್ನು ಮುಗಿಸುವುದು ವ್ಯಾಸರ ಶಕ್ತಿಗೂ ಮೀರಿದ ಸಂಗತಿಯಾಗಿದೆ. ಎಲ್ಲಿಯವರೆಗೆ ಅಲ್ಪನೈಜ ಈರ್ಷೆಯಿಂದ ಪೀಡಿತರಾದ ಬುದ್ಧಿವಂತರಿರುವರೋ ಅಲ್ಲಿಯವರೆಗೆ ಒಗ್ಗರಣೆಯ ಕಿಡಿಯು ಹೀಗೆಯೇ ಹೊತ್ತಿ ಉರಿಯುವುದು.

ದುಃಖವನ್ನು ನುಂಗುವುದು ಒಂದು ಶ್ರೇಷ್ಠ ತಪಸ್ಸೇ ಸರಿ. ಎಲ್ಲ ಕಲೆ, ತತ್ತ್ವಜ್ಞಾನ, ಸೌಂದರ್ಯ- ಇವುಗಳ ಸಾಕ್ಷಾತ್ಕಾರವು ಈ ದುಃಖ ನುಂಗುವ ಶಕ್ತಿಯಲ್ಲಿದೆ. ಮುಕ್ತವಾದ ದುಃಖವು ಅಭಿನವ ಪ್ರಜ್ಞೆಯನ್ನು ಕೊಡುತ್ತದೆ. ಹಳೆಯ ಅನುಭವಗಳ ಜಡಸಂಪುಟದಲ್ಲಿ ಅದನ್ನು ಕಟ್ಟಿಟ್ಟ ಕೂಡಲೆ ಅದರ ನಿರ್ಮಾಣಶಕ್ತಿಯು ಕುಂಠಿತವಾಗುತ್ತದೆ. ದ್ರೋಣರ ಗತಿಯು ಹಾಗೆಯೇ ಆಯಿತು. ಏಕಲವ್ಯನು ಎಲ್ಲವನ್ನೂ ನುಂಗಿಕೊಂಡನು. ಆದರೆ ದ್ರೋಣರು ಅಶ್ವತ್ಥಾಮನ ಮೇಲಿನ ಮೊಟಕು ಮಮತೆಯ ಮೂಲಕ ವ್ಯರ್ಥವಾದರು. ಅವನ ಮೇಲಿನ ಮೋಹದಿಂದಾಗಿ ಅವರ ಜ್ಞಾನದ ತಪಸ್ಸೇ ಅಪೂರ್ಣವಾಗಿ ಉಳಿಯಿತು. ಅವನ ಸಾವನ್ನು ಕುರಿತು "ನರೋವಾ ಕುಂಜರೋ ವಾ" ಎಂದು ಯುಧಿಷ್ಠಿರನು ಎಂದೊಡನೆ ಅವರು ಕುಸಿದರು. ಯಾವ ಪುತ್ರಮರಣದ ದುಃಖವನ್ನು ದ್ರೌಪದಿಯಂಥ ಸ್ತ್ರೀ ಸಮಂಜಸತನದಿಂದ ಸಹಿಸಲು ಶಕ್ಯಳಾದಳೋ, ಅದರೊಳಗಿಂದ ಔದಾರ್ಯದ ಪಾಠವನ್ನು ಹೊಸತಾಗಿ ಕಲಿತಳೋ, ಅದು ದ್ರೋಣರಂಥ ಆಚಾರ್ಯರಿಗೆ, ಶೂರರಿಗೆ ಸಾಧ್ಯವಾಗಲಿಲ್ಲ. ರಣಾಂಗಣದ ಹೊರಗೆ ಅವರು ಶೂರರಾಗಿರಲಿಲ್ಲ. ವಿದ್ಯೆಯ ಗರಡಿಯ ಹೊರಗೆ ಅವರು ಜ್ಞಾನಿಯಾಗಿರಲಿಲ್ಲ. ಅವರು ಕಾಪಾಡಿದ್ದೂ ಆ ಸಾಸಿವೆಯೊಳಗಿನ ಕಿಡಿಗೇಡಿ ವ್ಯಕ್ತಿತ್ವವನ್ನು. ಆ ಕ್ಷುದ್ರ ವ್ಯಕ್ತಿತ್ವದ

ಶೋಕಾಂತಿಕೆಯು ಎಲ್ಲಕ್ಕಿಂತ ಹೆಚ್ಚು, ಯಾತರಲ್ಲಾದರೂ ಇದ್ದರೆ ಅದು ಗುರುವಿಗೇ ವಂಚನೆ ಮಾಡುವ ಯುಧಿಷ್ಠಿರನಿಗೆ ಶಾಶ್ವತ ಮಸಿ ಬಳಿದು ವ್ಯವಹಾರೀ ವ್ಯಾಸರು, ದ್ರೋಣರಿಗೆ ಅಧಿಕಾರವಾಣಿಯಲ್ಲಿ ನೀಡಿದ ನ್ಯಾಯದಲ್ಲಿ. ಈ ನ್ಯಾಯದಾನದ ಏಕಾಂಗಿಯಾದ ಸ್ವರೂಪವು ಎಷ್ಟು ಕನಿಕರದ್ದಾಗಿದೆ! ಏಕಲವ್ಯನ ವಿಷಯದಲ್ಲಾದ ಅನ್ಯಾಯದ ಜನಕರು ಇಬ್ಬರು : ದ್ರೋಣರು ಮತ್ತು ಅರ್ಜುನ; ಪರೋಕ್ಷದಲ್ಲಿ ಪಾಂಡವರು; ಅವರನ್ನು ಮಾತ್ರ ವ್ಯವಹಾರೀ ವ್ಯಾಸರು ಎಲ್ಲ ಹೊಣೆಗಾರಿಕೆಯಿಂದ ಬಿಡುಗಡೆ ಮಾಡಿದರು. ಆದರೆ ಮುಂದೆ ಗುರುಶಿಷ್ಯರ ವಿಪರೀತ ಸಂಬಂಧ ಬಂದಾಗ ಯುಧಿಷ್ಠಿರನಿಗೆ ಅಪವಾದ ಹೊರಿಸಿ ವ್ಯಾಸರು ಮುಕ್ತರಾದರು. ಅಲ್ಲಿಯೂ ಅವರು ಪಾಂಡವರದೇ 'ಜಯ'ವಾಗಿ ಮಾಡಿದರು. ನ್ಯಾಯದ ಮಾನವು ಅವರಿಗೆ ದೊರೆಯಿತು. ಆದರೆ ನ್ಯಾಯಕ್ಕಿಂತ ಎಷ್ಟೋ ದೊಡ್ಡ ಅನ್ಯಾಯಗಳನ್ನು ಅವರು ಹಿಂದೆಯೂ ಮಾಡಿದ್ದರು. ಅದರ ನಿರಸನವಿರಲಿ, ಅದು ಮುಂದೆ ಎಲ್ಲೂ ಎಂದೂ ನಡೆಯಬಾರದೆಂಬ ಒಂದು ಶ್ರೇಯಸ್ಸನ್ನು ಪಡೆಯಲೂ ಅವರಿಗೆ ಆಗಲಿಲ್ಲ. ಪಾಂಡವರು ಇಮ್ಮಡಿ ಅನ್ಯಾಯಕ್ಕೆ ಮಾತ್ರ ಉತ್ತರಾಧಿಕಾರಿಗಳಾದರು. ದೊಡ್ಡ, ಜಾಣಮನುಷ್ಯರ ಈ ದೌರ್ಬಲ್ಯಚಕ್ರವು ಒಂದೇ ಸಮನೆ ತಿರುಗುತ್ತಿದೆ. ಅದನ್ನು ಯಾರು ನಿಲ್ಲಿಸಬಲ್ಲರು?



# ಕನಲಿದ ಕ್ಷಿತಿಜ

ಅಶ್ವತ್ಥಾಮನ ನೆನಪಾಗುತ್ತಲೇ ನನಗೆ ಉಸಿರುಕಟ್ಟಿದಂತಾಗುತ್ತದೆ. ಅವನ ವ್ಯಕ್ತಿತ್ವವೆಂದರೆ ಒಡೆದು ತುಂಡುತುಂಡಾಗಿ ಚೆಲ್ಲುವರಿದ ಒಂದು ರಾವುಗನ್ನಡಿ ಯಂತಿದ್ದು ಅದರ ಒಂದೊಂದು ತುಣುಕಿನಲ್ಲೂ ಸುತ್ತಲ ಹಿನ್ನೆಲೆಯ ಪ್ರತಿಬಿಂಬ ಗಳು ಒಂದಕ್ಕೊಂದು ಹೊಂದಾಣಿಕೆಯಿಲ್ಲವೆಂಬಂತೆ ಬೇರೆ ಬೇರೆಯಾಗಿ ಕಂಡು ಬರುತ್ತಿದ್ದರೂ ಅವೆಲ್ಲ ಒಂದೇ ವಸ್ತುವಿನ ಪ್ರತಿಬಿಂಬಗಳಾಗಿ ಕಾಣುತ್ತಿರುವ ರೀತಿಯದಾಗಿದೆ. ದ್ರೋಣ, ಪಾಂಡವ, ಯುಧಿಷ್ಠಿರ ಮೊದಲಾದವರಲ್ಲೆಲ್ಲ ಆತ ಹರಿದು ಹಂಚಿಹೋದ. ಯುದ್ಧದಿಂದಾಗಿ ಪೂರ್ತಿಯಾಗಿ ಭಗ್ನವಾದ ವ್ಯಕ್ತಿತ್ವ ಯಾರದಾದರೂ ಇದ್ದರೆ ಅದು ಇವನೊಬ್ಬನದೇ. ಈತನ ಇಡೀ ವ್ಯಕ್ತಿತ್ವವೇ, ಯುದ್ಧದಿಂದಾಗಿ, ವಕ್ರತೆ ಪಡೆಯಿತು. ರುದ್ರ ಭಯಂಕರನಾದರೂ ತೀರ

ದುಃಖಿತನಾದ ವ್ಯಕ್ತಿ ಮಹಾಭಾರತದಲ್ಲಿ ಇವನಂತಹವನು ಬೇರೊಬ್ಬನಿಲ್ಲ. ಅವನ ವ್ಯಕ್ತಿತ್ವದ ವಿದೀರ್ಣ ಕಣಗಳನ್ನು ಒಂದುಗೂಡಿಸುವ ಒಂದೇ ಒಂದು ಮಾನಸಿಕ ಸಾಧನವಿದೆ. ಅದೆಂದರೆ ಅವನ ಸರಳತೆ, ಬಾಲಭಾವ. ಕೊನೆಯವರೆಗೂ ಅವನು ಒಬ್ಬ ಮೊದ್ದು ಬಾಲಕನಾಗಿಯೇ ಉಳಿದ. ಅವನು ಶೂರ; ಆದರೆ ತಿಳಿವಳಿಕೆಯುಳ್ಳವನಾಗಲಿಲ್ಲ; ದೊಡ್ಡ ಮನುಷ್ಯನಾಗಲಿಲ್ಲ. ಯೋದ್ಧನಾದ; ಆದರೆ ಪುರುಷನಾಗಲಿಲ್ಲ; ಅವನು ನಪುಂಸಕನಲ್ಲ; ಆದರೆ ಅವನ ಮನಸ್ಸು ಮಾತ್ರ ತನ್ನ ಕಿಶೋರಾವಸ್ಥೆಯಿಂದಾಚೆಗೆ ಬೆಳೆಯಲೇ ಇಲ್ಲ. ಅಪರಿಪಕ್ವ ಯುವಕನ ಮನಸ್ಸು ಒಮ್ಮೆ ಆದರ್ಶದ ಬೆನ್ನು ಹತ್ತಿತೆಂದರೆ ಅದು ಕೆಲವೊಂದು ವಿಕೃತಿಗಳನ್ನನುಭವಿಸಲೇ ಬೇಕು. ಅಂತಹ ಹಲವು ವಿಕೃತಿಗಳು ಒಳ್ಳೆಯವೇ ಆಗಿರಲಿ, ಕೆಟ್ಟವುಗಳೇ ಆಗಿರಲಿ, ಅಶ್ವತ್ಥಾಮನ ಪಾಲಿಗೆ ಬಂದವು. ಜಾಜ್ವಲ್ಯವಾದ ಆ ಮನೋವೃತ್ತಿಗಳಿಗೆ ಅಂದವಾದ ಆಕಾರವನ್ನು ನೀಡುವುದಾಗಲಿ, ತನ್ನ ಆದರ್ಶವಾದಕ್ಕೆ ಮುಕ್ತಸ್ವರೂಪವನ್ನು ಕೊಡುವುದಾಗಲಿ ಅವನಿಂದ ಸಾಧ್ಯವಾಗಲಿಲ್ಲ. ಈ ಬಾಲಕ ಎಂದೂ ಅಂದವಾದ ಕನಸುಗಳನ್ನು ಕಂಡವನಲ್ಲ, ವಾಸ್ತವದೊಂದಿಗಿನ ತನ್ನ ಸಂಬಂಧ ವನ್ನು ಸರಿಯಾಗಿ ಕಂಡುಕೊಂಡವನು ಅಲ್ಲ. ಯಾವಾಗಲೂ ಗಾಬರಿಗೊಂಡನು. ಹೆದರಿಕೆಯಿಲ್ಲದವನಾದರೂ ಗೊಂದಲಕ್ಕೆ ಈಡಾದವನಂತೆ ಕಂಡುಬರುತ್ತಾನೆ. ಯಾರೆದುರಿಗೇ ಆಗಲಿ ತನ್ನನ್ನು ಕಂಡರೂ ತೀರಿತು, ನಾಚಿ ನಿಂತಲ್ಲೇ ನೀರಾದಾನು. ಸಂಕಟ ಎದುರಾದಾಗ ಮಾತ್ರ ಗಟ್ಟಿಯಾಗಿ ನಿಂತು ಹೋರಾಡಿ ಅದನ್ನು ದೂರಕ್ಕೆ ಅಟ್ಟಿಯಾನು. ಸಾಮಾನ್ಯವಾಗಿ ಆತ ಮಾತುಗಳನ್ನೇ ಅರಿಯ. ಆದರೆ ಜಗತ್ತನ್ನು ಕಾಣುವ ಆತನ ಕಣ್ಣು ಕುತೂಹಲದ್ದಲ್ಲವಾದರೂ ದಯೆಯಿಂದ ಕೂಡಿದ್ದು. ಸ್ವಸಂರಕ್ಷಣೆಯ ವಿಷಯದಲ್ಲಿ ಅವನು ಜಾಗರೂಕನಾಗಿದ್ದನು. ತಂದೆ ಕೊಟ್ಟಿದ್ದ ಬ್ರಹ್ಮಶಿರ – ಅಸ್ತ್ರವನ್ನೆಸೆದು ಇಡಿಯ ಬ್ರಹ್ಮಾಂಡವನ್ನೇ ಸುಟ್ಟುಹಾಕಬಲ್ಲ; ಹನ್ನೆರಡು ವರ್ಷಕಾಲ ಪೃಥ್ವಿಯ ಮೇಲೆ ಒಂದೂ ಬೀಜವುಳಿಯದಂತೆ ಅದನ್ನು ನಾಶಪಡಿಸಬಲ್ಲ; ಎಂತಹವನ ಎದೆಯ ಗುಂಡಿಗೆಯನ್ನೂ ನಡುಗಿಸಬಲ್ಲ ಆ ಅಸ್ತ್ರವನ್ನು ಅವನು ಇನ್ನೂ ಓದು ಕಲಿಯುತ್ತಿರುವಾಗಲೇ ಪಡೆದಿದ್ದ. ಮೂಲತಃ ಅವನು ಅಂತರ್ಮುಖಿ; ಆದರೆ ಅವನ ಒಳಗಣ್ಣಿಗೆ ವಾಸ್ತವದ ಸತ್ಯದ ಆವಿಷ್ಕಾರ ಮಾತ್ರ ಆಗಲಿಲ್ಲ. ಏಕೆಂದರೆ ಅವನ ಕಲ್ಪನಾಶಕ್ತಿಯು ಕಾಲಿಲ್ಲದೆ ತೆವಳುತ್ತಿತ್ತು. ಅವನ ಬಯಕೆಗಳಿಗೆ ರಸವೂ ಇರಲಿಲ್ಲ, ಬಣ್ಣವೂ ಇರಲಿಲ್ಲ. ಅವನ ಪೌರುಷದ ಕ್ಷಿತಿಜಗಳನ್ನು ಅವನ

ತಂದೆಯು ತನ್ನ ವಾತ್ಸಲ್ಯದ ಉದ್ರೇಕದಿಂದಾಗಿ ಮೊದಲೇ ಕಮರಿಹೋಗುವಂತೆ ಮಾಡಿದ್ದನು. ವಾತ್ಸಲ್ಯದ ಈ ವಿಚಿತ್ರ ಕಪಿಮುಷ್ಟಿಯಿಂದ ಅಶ್ವತ್ಥಾಮನು ಎಂದಿಗೂ ಬಿಡುಗಡೆ ಪಡೆಯಲಾಗಲಿಲ್ಲ.

ಯೋಗಾಯೋಗದಿಂದ ಯುದ್ಧವೊದಗಿತು. ಮಹಾಮಹಾ ಸೇನಾನಿಗಳೆಲ್ಲ ಒಬ್ಬರಾದ ಮೇಲೆ ಒಬ್ಬರಂತೆ ನೆಲಕ್ಕುರುಳಿದರು. ಮರಣೋನ್ಮುಖನಾಗಿದ್ದ ದುರ್ಯೋಧನನ ಆಸೆಯ ಅಂಕುರವು ಧೂಳಿನಲ್ಲಿ ಬೆರೆತುಹೋಗಿದ್ದುದು, ಅಶ್ವತ್ಥಾಮನ ವೈಶಿಷ್ಟ್ಯಪೂರ್ಣಯುದ್ಧಕೃತಿಯಿಂದ ಮತ್ತೆ ಚಿಗುರಲಾರಂಭಿಸಿತು. ಧೂಳು, ರಕ್ತ, ರಣಹದ್ದುಗಳು, ಉಸಿರುಗಟ್ಟಿಸುವ ಕಗ್ಗತ್ತಲೆಯಿಂದ ತುಂಬಿದ ದಿಕ್ಕುಗಳು, ಅಸಂಯತ ವೈರ, ಅತಿಯಾದ ವೈರಾಗ್ಯ ನಿರಾಸೆ ಈ ಎಲ್ಲದರ ಪಾಕವೂ ಅವನ ಸೇನಾಪತಿ ಭೂಮಿಕೆಯಲ್ಲಿ ಕಂಡುಬರುತ್ತದೆ. ವಾಸ್ತವವಾಗಿ ಸೇನಾನಿಯ ಭೂಮಿಕೆಯೇ ಮೂಲತಃ ಅವನ ನೈಸರ್ಗಿಕ ಭೂಮಿಕೆಯಲ್ಲ. ಭೀಷ್ಮ, ದ್ರೋಣ, ಕರ್ಣ ಮುಂತಾದವರಿಗೆ ಅದು ಸರಿಹೊಂದುವಂತಹದು. ಈ ಭೂಮಿಕೆಗೆ ಅಗತ್ಯವಾದ ಸುಸಂಸ್ಕೃತ, ಪ್ರಗಲ್ಭ ಮತ್ತು ಉಕ್ಕೇರುವ ಉತ್ಸಾಹದ ವ್ಯಕ್ತಿತ್ವ ಮತ್ತು ಕಲ್ಪಕತೆ ಅವನಲ್ಲಿರಲಿಲ್ಲ. ಒಬ್ಬರಾದ ಮೇಲೆ ಒಬ್ಬರಂತೆ ದೊಡ್ಡ ದೊಡ್ಡವರೆಲ್ಲ ನೆಲಕ್ಕುರುಳಿದ ಮೇಲೆ, ಕಾಡಿನ ಮರದಂತೆ ಎತ್ತರಕ್ಕೆ ಬೆಳೆದ, ಈ ನಿಷ್ಠಾವಂತ ಬಲಿಷ್ಠ ಹುಡುಗ ಕೇವಲ ಪ್ರಸಂಗವಶಾತ್ ಸೇನಾನಿಯಾದ. ಅವನಿಗೆ ತೀರ ಸಡಿಲವಾದ ಆ ಪದವಿಯು ಅವನ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಮುಚ್ಚಿಬಿಡುವಂತಿತ್ತು. ಯೋಧನಾದ ಅವನ ರಕ್ತ ಮತ್ತು ಸ್ನಾಯುಗಳನ್ನು ಯುದ್ಧವು ಪ್ರಚೋದಿಸಿತಾದರೂ ಅವನ ಮನಸ್ಸು ಮಾತ್ರ ಸ್ವಲ್ಪವೂ ತಿಳಿಯಾಗಲೇ ಇಲ್ಲ. ಅದಕ್ಕೆ ಯುದ್ಧದ ಮತ್ತೇರಿದ್ದಾದರೂ ಯಾವುದೇ ನೋಟವನ್ನು ಕಂಡು ಅಲ್ಲ; ತಂದೆಯ ಸಾವಿನ ಪ್ರಸಂಗವು ಅವನನ್ನು ಬೆದರಿಸಿತು. ಆದರೆ ಆ ಬೆದರಿಕೆಯಿಂದ ಅವನಲ್ಲೇನಾದರೂ ಮತ್ತೇರಿದ್ದಲ್ಲಿ ಅದು ಕೇವಲ ತಿಳಿಗೇಡಿಯಾದ ದುಃಖದ್ದು ಮಾತ್ರ. ಅದರಿಂದ ಉದ್ಭವಿಸಿತು ಅವನ ಮೂಢಕ್ರೌರ್ಯ. ಆ ಕ್ರೌರ್ಯದಲ್ಲಿರಬಹುದಾದ ಎಲ್ಲ ಟೊಳ್ಳುಭಾವಗಳೂ, ಟೊಳ್ಳುದೊಡ್ಡಸ್ತಿಕೆಗಳೂ ಅವನ ಪಾಲಿಗೆ ಬಂದವು.

ಅಶ್ವತ್ಥಾಮನ ಬಾಳೆಲ್ಲ ಮಂಜುಕವಿದಂತೆ ಮಸುಕಾಗಿದೆ. ಅವನ ಬದುಕಿನ ನಾಟಕದ ನಾಲ್ಕು ಘಟನೆಗಳನ್ನಷ್ಟೇ ವ್ಯಾಸರು ಪ್ರಕಟಪಡಿಸಿದ್ದಾರೆ. ಅದೂ ಅಲ್ಲದೆ, ಅಪೂರ್ಣವಾದ ಈ ನಾಟಕವನ್ನು ಸರಿಯಾಗಿ ಹೊಂದಿಸುವ ಗೋಜಿಗೆ

ಹೋಗದೆ ಅದನ್ನು ಹಾಗೆಯೇ ಒಂದು ಬದಿಗೆ ತಳ್ಳಿಬಿಟ್ಟಿದ್ದಾರೆ. ಮುಂದೆ, ತಮ್ಮ ಮನಸ್ಸಿಗೆ ಸರಿಹೊಂದದ ಈ ಆಟವನ್ನು ಮುರಿದೂಬಿಟ್ಟಿದ್ದಾರೆ. ಹೀಗಾಗಿ, ಮುರಿದುಹೋದ, ಅರೆಬರೆಯಾದ ಈ ನಾಟಕವನ್ನು ಇನ್ನು ಯಾರೂ ಮತ್ತೆ ಹೂಡಲಾರರು. ಮೊದಲ ಪ್ರಸಂಗದಲ್ಲಿಯೇ, ಕುಡಿಯಲು ಹಾಲು ಸಿಕ್ಕದ ಆ ಬಾಲಕನ ದೃಶ್ಯವಿದೆ. ಹಾಲಿಗಾಗಿ ಆಸೆಪಟ್ಟು ಹಿಟ್ಟು ಕಲೆಸಿದ ನೀರನ್ನೇ ಹಾಲೆಂದು ಕುಡಿದು, "ನಾನು ಹಾಲುಕುಡಿದೆ!" ಎಂದು ಕುಣಿದು ಕುಪ್ಪಳಿಸುತ್ತಾನೆ ಆತ. ಈ ಪ್ರಸಂಗದಲ್ಲಿ ಕಂಡು ಬರುವ ಬಾಲ್ಯದ ಮುಗ್ಧತೆಯು ಎಲ್ಲೆಡೆಯಲ್ಲೂ ಕಂಡು ಬರುವಂಥದೇ. ಅದು ಒಬ್ಬ ವ್ಯಕ್ತಿಯ ವಿಶಿಷ್ಟತೆಯೆಂದೇನೂ ಅಲ್ಲ. ಅದೊಂದು, ಬಡತನದ ಬೇಗೆಯ ಬಗೆಗಿನ ದಾರುಣ ಭಾಷ್ಯವಾಗಿದೆ ಅಷ್ಟೆ. ಆದರೆ ಎಂದೂ ಮರೆಯಲಾಗದಂಥದು. ಆದರೆ ಇಲ್ಲಿಯ ಹೆಗ್ಗಳಿಕೆಯೆಂದರೆ ವಿಷಮತೆಯನ್ನು ತೋರುವ ಈ ಭಾಷ್ಯವನ್ನು ಈ ಬಾಲಕನ ಸಂದರ್ಭದಲ್ಲಿಯೇ ಒಂದು ಅಮರವಾಣಿಯ ಮೂಲಕ ಉಚ್ಚರಿಸಲಾದದ್ದು. ಆ ಅಮರವಾಣಿಯಿಂದ ಅಶ್ವತ್ಥಾಮನ ಜೀವನದ ಪಾರ್ಶ್ವಭೂಮಿಕೆ ಚಿತ್ರಿತವಾಯಿತು. ಸುತ್ತಲೂ ಮಂಜುಕವಿದಿದ್ದರೂ, ಈ ಪಾರ್ಶ್ವಭೂಮಿಕೆಯಿಂದಲೇ, ಅಲ್ಲಲ್ಲಿ ಹನಿ ಹನಿಗಳಿಂದ ಬರೆದ ಅವನ ಅರೆಬರೆಯಾದ ಆಕೃತಿಯನ್ನು ಕಲ್ಪನೆಯಿಂದಲೇ ಕಂಡುಕೊಳ್ಳಬೇಕು.

ಎರಡನೆಯ ಪ್ರಸಂಗವು ಅವನ ವಿದ್ಯಾರ್ಥಿದೆಸೆಯದು. ಇದು ಎರಡು ದೃಶ್ಯಗಳಲ್ಲಿ ಹಂಚಿಹೋಗಿದೆ. ದ್ರುಪದನ ಮೇಲೆ ಹಗೆ ಸಾಧಿಸುವ ಪಣತೊಟ್ಟು ಬಂದ ದ್ರೋಣನು, ಅವನನ್ನು ಮಕ್ಕಳು ಮರಿಗಳೊಂದಿಗೆ ಮಣ್ಣುಗೂಡಿಸುವುದಾಗಿ ತನ್ನಲ್ಲೇ ತಾನು ನಿಶ್ಚಯಿಸುತ್ತಾನೆ. ಮಗನಿಗೆ ವಿದ್ಯೆಯನ್ನು ಕಲಿಸುವ ಮೂಲಕ ತನ್ನ ಪ್ರತಿಜ್ಞೆಯ ಪಾಲನೆಯನ್ನು ಪ್ರಾರಂಭಿಸುತ್ತಾನೆ. ತರುವಾಯ ಕೌರವ ಪಾಂಡವರು ಬರುತ್ತಾರೆ. ಅಶ್ವತ್ಥಾಮನ ಸ್ವತಂತ್ರ ಹಾಗೂ ಸಹಜವಾದ ನಡೆನುಡಿಗಳ, ತೀರ ಅಸ್ಪಷ್ಟವಾದರೂ ಮನಸ್ಸನ್ನು ಸೆರೆಹಿಡಿಯಬಲ್ಲ ಚಿತ್ರವನ್ನು ವ್ಯಾಸರು ಒಂದು ವಾಕ್ಯದಲ್ಲಿ ಹಿಡಿದಿಟ್ಟಿದ್ದಾರೆ. ಅದು ಅವರ ಕುಶಲತೆಯೋ ಅವರಿಂದಾದ ತಪ್ಪೋ ಎಂಬುದು ನನಗೆ ಅರ್ಥವಾಗಲಿಲ್ಲ. ಆದರೆ ಇದೊಂದು ಬರೆಯಲು ಅಸಾಧ್ಯವಾದ ಕಾಯಕವಂತೂ ಆಗಿರಲಿಲ್ಲವೆಂಬ ಅರಿವು ವ್ಯಾಸರಲ್ಲಿ ಇರಲಿಲ್ಲವೆನ್ನಲಾದೀತೇ?

ದ್ರೋಣನು ಹೊಸಬನಾಗಿಯೇ ಹಸ್ತಿನಾಪುರಕ್ಕೆ ಬಂದಿದ್ದ. ಆಗ ತನ್ನ ಹೆಸರು ದೆಸೆಗಳನ್ನೆಲ್ಲ ಮರೆಮಾಡಿ ಕೃಪಾಚಾರ್ಯನಲ್ಲಿ ವಾಸವಾಗಿದ್ದ. ಪಾಂಡವರು ಅಲ್ಲೇ ಪಕ್ಕದಲ್ಲಿ ಆಟವಾಡಲು ಬರುತ್ತಿದ್ದರು. ಅಶ್ವತ್ಥಾಮನು ಗುಟ್ಟಾಗಿ ಅವರೊಂದಿಗೆ ಬೆರೆಯುತ್ತಿದ್ದ. ಪಾಂಡವರ ಬಗೆಗೆ ಅವನಲ್ಲಿ ಮಮತೆ ಹುಟ್ಟಿಕೊಂಡಿತು. ನಿಷ್ಪಾಪಿಯೂ, ಸರಳಮನಸ್ಸಿನವನೂ ಆದ ಆ ಬಾಲಕ ತನ್ನ ಮೆಚ್ಚಿನ ಗೆಳೆಯ ಅರ್ಜುನನಿಗೆ, ತನಗೆ ಗೊತ್ತಿದ್ದ ಯುದ್ಧವಿದ್ಯೆಯನ್ನೆಲ್ಲ ಕಲಿಸಿಬಿಟ್ಟ. ರಾಜ ಕುಮಾರನ ಗೆಳೆತನವೆಂದರೆ ಭಾಗ್ಯದ ಸಂಗತಿಯಲ್ಲವೆ! ಆ ಭಾಗ್ಯವನ್ನು ತನ್ನದಾಗಿಸಿಕೊಳ್ಳಲೆಂದು ಅವನು ತನ್ನ ವಿದ್ಯೆಯನ್ನೆಲ್ಲ ಹೇಳಿಕೊಟ್ಟು ಬಿಟ್ಟಿರಬಹುದೇ? ಬಡತನ ಅವನನ್ನು ಒಳಗಿಂದೊಳಗೇ ಇರಿಯುತ್ತಿತ್ತೆ? ಒಂದು ಸಂಗತಿಯಂತೂ ನಿಜ. ಅದೇಂದರೆ, ಅಶ್ವತ್ಥಾಮ ಕೊಟ್ಟುದೆಲ್ಲ ತುಂಬು ಹೃದಯದಿಂದ ಉದಾರತೆಯಿಂದ, ಹಾಗೂ ಸಂಕೋಚವೃತ್ತಿಯಿಂದಲ್ಲದೆ ಆಟದ ರಭಸದಲ್ಲಿಯೂ ಹೌದು. ಅವನು ಯಾರಿಗೂ ಗೊತ್ತಾಗದಂತೆ ತನ್ನ ಗೆಳೆತನದ ಋಣವನ್ನು ತೀರಿಸಿದ. ಮಕ್ಕಳಿಗೆ ತಮ್ಮ ಹಲ್ಲುಗಳಿಂದ ಕಚ್ಚಿಕೊಡುವ ಗುಬ್ಬಿಯ ತುತ್ತಿನಂತಿತ್ತು ಅವನ ಈ ಕಾಯಕ. ಅವನ ಆ ಆಟವು ತುಸು ಹೊಂದಿಕೊಳ್ಳುತ್ತಿರುವಾಗಲೆ ತಂದೆಯ ದರ್ಪದ ನಡತೆಯಿಂದಾಗಿ ಅಶ್ವತ್ಥಾಮನು ಅದನ್ನು ಮೊಟಕುಗೊಳಿಸಬೇಕಾಯಿತು. ಆತ ನಾಚಿ ನೀರಾದ. ಮುಂದೆ ದ್ರೋಣನು ಕೌರವ ಪಾಂಡವರಿಗೆ ವಿದ್ಯೆಕಲಿಸಲು ರಾಜಾರೋಷ ವಾಗಿಯೇ ಒಪ್ಪಿದ. ಈ ಸಂದರ್ಭವು ಅಶ್ವತ್ಥಾಮನ ಸಹಜತೆಗೆ ಮಾರಕ ವಾಯಿತು.

ಅಶ್ವತ್ಥಾಮನ ಮರುಳು ಅಕ್ಕರೆ, ಅವನ ನಿರ್ಮಲ ನಡತೆ, ಅರ್ಜುನನಿಗೆ ನೆನಪಾಗುತ್ತದೆ. ಅದು ತನ್ನ ಗುರುಪುತ್ರನ ಬಗೆಗಿನ ಭಕ್ತಿಯಾಗಿರದೆ ಮಾನವನು ಮಾನವನನ್ನು ಅರಿತಿರುವುದರ ಸಾಕ್ಷಿಯಾಗಿದೆ; ಗೆಳೆತನದ ವಿಶುದ್ಧತೆಯ ದ್ಯೋತಕವಾಗಿದೆ. ಅರ್ಜುನನು ದ್ರೋಣರ ಸಾವಿನಿಂದಾಗಿ ಬಹಳ ತಳಮಳಿಸಿದನು. ಅದರಲ್ಲೂ ಯುಧಿಷ್ಠಿರನು ಅಶ್ವತ್ಥಾಮನ ಮರುಳುಜೀವನ ವನ್ನು ಹೀಗೆ ಮೋಸಗೊಳಿಸಿದ್ದು ಅವನನ್ನು ಬಹಳಷ್ಟು ಕೆರಳಿಸಿದೆ. ಈ ಕೇಡಿನ ಕೆಲಸಕ್ಕಾಗಿ ಯುಧಿಷ್ಠಿರನನ್ನು ದೂರುತ್ತ ಅವನು, "ಅಶ್ವತ್ಥಾಮನು ಅಲೌಕಿಕ ನಾಗಿದ್ದಾನೆ; ಎಲ್ಲ ಪ್ರಾಣಿಗಳ ಮೇಲೂ ಅವನು ಮಮತೆ ತೋರುತ್ತಾನೆ" ಎನ್ನುತ್ತಾನೆ. ಯುದ್ಧವು ಭರದಿಂದ ಸಾಗಿ, ದುರ್ಯೋಧನನ ಸಾವಿನ ವರೆಗೂ

ಅಶ್ವತ್ಥಾಮನ ಪೂರ್ಣಸಹಾನುಭೂತಿಯು ಪಾಂಡವರ ಕಡೆಗೇ ಇತ್ತು. ಘಟೋತ್ಕಚನನ್ನು "ವತ್ಸ" ಎಂದು ಕರೆಯುತ್ತಾನೆ. "ನನಗೆ ನಿನ್ನಲ್ಲೇನೂ ವೈರವಿಲ್ಲ" ಎನ್ನುತ್ತಾನೆ.

ಕರ್ಣನ ಮಗನು ಮಡಿದ ಬಳಿಕ ಕರ್ಣಾರ್ಜುನರ ಕಾಳಗ ಮೊದಲಾಗುತ್ತದೆ. ಆಗ ಅಶ್ವತ್ಥಾಮನು ದುರ್ಯೋಧನನಿಗೆ, "ದುರ್ಯೋಧನಾ, ಪಾಂಡವರ ಜೊತೆಗಿನ ಯುದ್ಧವನ್ನು ನಿಲ್ಲಿಸು. ಯುದ್ಧಕ್ಕೆ ಧಿಕ್ಕಾರವಿರಲಿ. ನಾನು ಹಾಗೂ ಕೃಪ, ಅವಧ್ಯರು. ನೀನು ಪಾಂಡವರೊಡಗೂಡಿ ರಾಜ್ಯಭಾರ ನಡೆಸು. ನಾನು ಹೇಳಿದರೆ ಅರ್ಜುನ ಶಾಂತನಾಗುವನು; ಹೋರಾಟವನ್ನು ನಿಲ್ಲಿಸುವನು. ಕೃಷ್ಣನೂ ಇದಕ್ಕೆ ಎದುರಾಡಲಿಕ್ಕಿಲ್ಲ. ಯುಧಿಷ್ಠಿರನಂತೂ ಪ್ರಾಣಿಗಳ ಮೇಲೆಲ್ಲ ದಯೆತೋರುವವನು. ಭೀಮ ಹಾಗೂ ಅವನ ತಮ್ಮಂದಿರೆಲ್ಲ ಅವನ ಅಂಕೆಯಲ್ಲಿರುವರು. ಶಾಂತಿಯನ್ನು ಸ್ಥಾಪಿಸು. ಒಪ್ಪಂದ ಮಾಡಿಕೊ" ಎಂದು ಹೇಳುತ್ತಾನೆ.

ದುರ್ಯೋಧನನು ತನ್ನ ಮಾತನ್ನು ಕೇಳಲಿಲ್ಲವೆಂದು ಅಶ್ವತ್ಥಾಮನು ಅವನ ಮೇಲೆ ಕೋಪಗೊಳ್ಳುತ್ತಾನೆ. ಆದರೆ ಯುಧಿಷ್ಠಿರನ ಭೂತದಯೆಯು ಅಶ್ವತ್ಥಾಮನ ಪಾಲಿಗೆ ಮಾತ್ರ ದಕ್ಕಲೇ ಇಲ್ಲ. ಅಶ್ವತ್ಥಾಮನ ಅಭಿಪ್ರಾಯಕ್ಕೂ ನಿಜವಾಗಿ ನಡೆದದ್ದಕ್ಕೂ ಇರುವ ವಿರೋಧಾಭಾಸಕ್ಕೆ ಸರಿಸಾಟಿಯಾದದ್ದು ಮಹಾಭಾರತದಲ್ಲಿ ಮತ್ತೊಂದಿಲ್ಲ. ಈ ವಿರೋಧಾಭಾಸದಿಂದಾಯೇ, ತನ್ನ ವಿರೋಧಿಗಳನ್ನು ಮೋಸಗೊಳಿಸಿದನೆಂಬ ಸ್ವಾಭಾವಿಕ ತಳಹದಿಯು ಅವನ ಕ್ರೌರ್ಯಕ್ಕೆ ಒದಗಿಬಂದುದು.

ದ್ರೋಣನು ಸಾಯುವವರೆಗೂ ತಂದೆ–ಮಗ ಒಂದೇ ಕಡೆ ಇದ್ದರು, ಶಾರೀರಿಕವಾಗಿ ಮತ್ತು ಮಾನಸಿಕವಾಗಿ. ಆದರೆ ಈ ಮಾನಸಿಕ ನಿಕಟತೆಯೇ ಅಶ್ವತ್ಥಾಮನ ಬೆಳವಣಿಗೆಯಲ್ಲಿ ಅಡ್ಡಿಯಾಗಿ ಪರಿಣಮಿಸಿತು. ಅವನ ಮಧುರ, ಉದಾರ ಹಾಗೂ ಲಜ್ಜೆಯ ವ್ಯಕ್ತಿತ್ವವು ಅಳಿದುಹೋಯಿತು. ಆತ ಎಂದಿಗೂ ಮಹತ್ವಾಕಾಂಕ್ಷಿಯಾಗಿರಲಿಲ್ಲ. ತಂದೆಯೇ ಅದನ್ನು ಅವನ ಮೇಲೆ ಹೇರಿದ್ದು. ಇಬ್ಬರಿಗೂ ಪಾಂಡವರ ಬಗೆಗೆ ಎಲ್ಲಿಲ್ಲದ ಮಮತೆ. ಇಷ್ಟಾಗಿಯೂ ದ್ರೋಣನು ವಿದ್ಯೆಯ ವಿಚಾರದಲ್ಲಿ ಪಕ್ಷಪಾತಿಯಾಗಿದ್ದನು. ಅಶ್ವತ್ಥಾಮನು ತನ್ನ ತಂದೆಯ ಹೇಳಿಕೆಯ ಮೇರೆಗೆ ಉಳಿದ ಕುಮಾರರೊಂದಿಗೆ ನೀರು ತರಲು ಹೋಗುತ್ತಿದ್ದನು. ತಂದೆಯು ಅವನಿಗೆ ದೊಡ್ಡಬಾಯಿಯ ಕೊಡವನ್ನು ಕೊಡುತ್ತಿದ್ದನು.

ಅದರಿಂದ ಅವನ ಕೆಲಸವು ಬೇಗ ಮುಗಿಯುತ್ತಿತ್ತು. ಬೇಗ ಮನೆಗೆ ಬರುವುದು ಸಾಧ್ಯವಾಗುತ್ತಿತ್ತು. ಮನೆಗೆ ಬರುತ್ತಲೇ ದ್ರೋಣನು ಅವನಿಗೆ ಹೆಚ್ಚಿನ ವಿದ್ಯೆಯನ್ನು ಕಲಿಸುತ್ತಿದ್ದನು. ತಂದೆಯ ಆ ಬಯಕೆಯನ್ನು ಅಶ್ವತ್ಥಾಮನೂ ಬಲ್ಲವನಾಗಿದ್ದ. ತಂದೆಯ ಮಾನಸಿಕ ಸಂಘರ್ಷದ ಪಡಿನೆಳಲು ಮಗನಲ್ಲಿಯೂ ಅದೇ ವಯಸ್ಸಿನಲ್ಲಿಯೇ ಮೂಡಿರಬಹುದೇ? ತಂದೆಯು ಮಾಡುತ್ತಿದ್ದ ಭೇದಭಾವವನ್ನು ಅಶ್ವತ್ಥಾಮನು ಎಂದೂ ವಿರೋಧಿಸಲಿಲ್ಲ. ಹೇಳಿದ್ದನ್ನು ಚಕಾರವೆತ್ತದೆ ಮಾಡುತ್ತಿದ್ದನು. ಮಮತೆಯುಳ್ಳವನಾದರೂ ಶಿಸ್ತಿನವನಾದ ತನ್ನ ತಂದೆಯ ಮಾತನ್ನು ಆತ ವಿಧೇಯತೆಯಿಂದ ಪಾಲಿಸುತ್ತಿದ್ದನು. ಮುಂದೆ ವಯಸ್ಸು ಹೆಚ್ಚುತ್ತಾ ಹೋದಂತೆ ಆತನ ಮೇಲೆ ದ್ರೋಣನ ವರ್ಚಸ್ಸಿನ ಪ್ರಭಾವ ಕೂಡ ಹೆಚ್ಚುತ್ತಾ ಹೋಗಿರಬಹುದು. ಈ ಪ್ರಸಂಗದಲ್ಲಿ ಅವನ ಮನದಲ್ಲಿಯ ಸಂಘರ್ಷವನ್ನು ಎಲ್ಲಿಯೂ ತೋರಿಸಲಾಗಿಲ್ಲ. ಇದರಿಂದಾಗಿ, ಅವನಲ್ಲಿ ವ್ಯಕ್ತಿಗತವಾದ ಯಾವುದೇ ಮಹತ್ವಾಕಾಂಕ್ಷೆಯಿರಲಿಲ್ಲವೆನ್ನಬಹುದಷ್ಟೆ. ಉತ್ಕೃಷ್ಟ ಯೋದ್ಧನು ಶಿಸ್ತನ್ನು ಪಾಲಿಸುವವನಾಗಿರುತ್ತಾನೆ. ಈ ಶಿಸ್ತೇ ಅಶ್ವತ್ಥಾಮನನ್ನು ಕಬಳಿಸಿತು. ಅವನ ಬಾಳು ಇದ್ದುದರಲ್ಲಿಯೇ ಸುಖದಿಂದ ಕೂಡಿತ್ತು. ಸುರಕ್ಷಿತವಾಗಿತ್ತು. ಅರಸುಮನೆತನಕ್ಕೆ ಅಂಟಿಕೊಂಡಿರುವುದರಲ್ಲಿಯೇ ಈ ಬ್ರಾಹ್ಮಣ ತಂದೆ ಮಕ್ಕಳ ಹಿತ ಅಡಗಿತ್ತು. ಪರಶುರಾಮನಲ್ಲಿಯಂತಹ ಸ್ವತಂತ್ರ ಯುದ್ಧ ಪ್ರತಿಭೆಯು ಅವರಿಬ್ಬರಲ್ಲೂ ಇರಲಿಲ್ಲ. ಆಶ್ರಯದಾತರ ಸೇವೆಯಲ್ಲಿದ್ದು ಸುಸ್ಥಿತಿ ಹಾಗೂ ಅವರ ದಾಸ್ಯವನ್ನು ಇಬ್ಬರೂ ಒಪ್ಪಿಕೊಂಡು ಬಿಟ್ಟಿದ್ದರು. ಅದಾದ ಬಳಿಕ ವರ್ಷಗಳೆಷ್ಟೋ ಕಳೆದು ಹೋದವು. ಅಶ್ವತ್ಥಾಮನಂತೂ ಸುಸ್ಥಿತಿಯಲ್ಲಿ ಮುಳುಗಿ ಹೋಗುತ್ತಾನೆ. ತಾರುಣ್ಯದ ಮೊದಲ ಚಿಗುರು ಚಿಗುರಿ ಉದುರಿಯೂ ಹೋಗುತ್ತದೆ. ಆ ವೇಳೆಯಲ್ಲಿ ಅವನು ಮಾಡಿದ್ದೇನು? ಹೇಗೆ ನಡೆದುಕೊಳ್ಳುತ್ತಾನೆ? ಅವನ ಮನಃಸ್ಥಿತಿ ಹೇಗಿತ್ತು? ಒಂದೇ ಸಮನೆ ಬೆಳೆಯುತ್ತಾ ನಡೆದಿದ್ದ ಕೌರವ–ಪಾಂಡವರ ವೈರದಿಂದಾಗಿ ಅವನ ಸ್ಥಿತಿ ಹೇಗಿತ್ತು? ಎನ್ನುವುದರ ಬಗ್ಗೆ ವ್ಯಾಸರು ಏನನ್ನೂ ಹೇಳಿಲ್ಲ. ಆತನೊಬ್ಬ ಗೃಹಸ್ಥನಾಗಿದ್ದ, ಸುಖಿಯಾದ ಸಂಸಾರಿಗನಾಗಿದ್ದ ಎಂಬುದಷ್ಟೇ ನಮಗೆ ತಿಳಿದುಬರುತ್ತದೆ.

ಆ ಬಳಿಕ ಅವನ ದರ್ಶನವಾಗುವುದು, ಯುದ್ಧದ ಬಡಬಾಗ್ನಿ ಹತ್ತಿ ಉರಿಯತೊಡಗಿದಾಗಲೇ. ಅವನ ಕೂಗು, ಎತ್ತರದ ದನಿಯಲ್ಲಿ ಕರ್ಕಶವಾಗಿ ಕೇಳಿಬರುವುದು ಅವನ ತಂದೆಯ ಸಾವಿನ ತರುವಾಯವೇ. ಹುಟ್ಟಿದ ಕೂಡಲೇ

ಆತ ಕುದುರೆಯಂತೆ ಕೆನೆದನಂತೆ. ಮಗುವು ಅಷ್ಟು ಗಟ್ಟಿಯಾಗಿ ಅಳಬೇಕಿದ್ದರೆ ಅದು ಬಲು ಗಟ್ಟಿಯಾಗಿರಲೇ ಬೇಕು. ಅಂತೆಯೇ ಅವನ ಹೆಸರು ಅಶ್ವತ್ಥಾಮ ಎಂದಾಯಿತು. ಆದರೆ ಅವನ ಈ ಕರ್ಕಶ ಕೂಗು, ಭಯಂಕರ ಆರ್ಭಟ, ಕ್ರೂರವಾದ ಗರ್ಜನೆಯಾಗಿ ಹೊರಟಿದ್ದು ಕೇವಲ ಯುದ್ಧಸಮಯದಲ್ಲಿ ಮಾತ್ರ. ಅವನು ಬಹಳ ಮುಂಗೋಪಿ. ಒಮ್ಮೆ ಸಿಟ್ಟು ನೆತ್ತಿಗೇರಿತೆಂದರೆ ಅದಕ್ಕೆ ಕೊನೆಮೊದಲೇ ಇರುತ್ತಿರಲಿಲ್ಲ. ಯಾವ ಸಂಗತಿಯೇ ಆಗಲಿ ಒಮ್ಮೆ ಅವನ ಮನಸ್ಸಿನಲ್ಲಿ ನಾಟಿತೆಂದರೆ ಮುಗಿಯಿತು; ಆಗ ಎಂತಹ ಘೋರ ಕೃತ್ಯಗಳನ್ನು ಮಾಡುವುದಕ್ಕೂ ಅವನು ಹೇಸುತ್ತಿರಲಿಲ್ಲವೆಂಬ ಸಂಗತಿ ಪ್ರಸಿದ್ಧವಾಗಿತ್ತು. ತನ್ನ ತಂದೆಯನ್ನು ಧೃಷ್ಟದ್ಯುಮ್ನನು – ಎಂದರೆ ಪರೋಕ್ಷವಾಗಿ ಪಾಂಡವರೇ – ಅಧರ್ಮದಿಂದ ಕೊಂದದ್ದನ್ನು ಕಂಡಾಗಲಂತೂ ಅವನ ಕೋಪವು ಮಿತಿಮೀರಿತು. ಅನಂತರ ವೈರವು ಬೇರೆಯವರ ಸಂಬಂಧದ್ದಾಗಿ ಉಳಿಯಲಿಲ್ಲ, ತನಗೇ ನೇರವಾಗಿ ಸಂಬಂಧಿಸಿದ್ದಾಗಿ ಪರಿಣಮಿಸಿತು. ಕರ್ಣ, ಭೀಷ್ಮ, ದುರ್ಯೋಧನರ ವಧೆಯ ಸಮಯದಲ್ಲಿ ಪಾಂಡವರು ಮಾಡಿದ ಮೋಸವು ಆ ವೈರಕ್ಕೆ ತಳಹದಿಯಾಯಿತು. ಆ ಎಲ್ಲ ಮೋಸಗಳನ್ನು ನೆನೆನೆನೆದು ಸಂಬಂಧಿಸಿದವರ ಮೇಲೆಲ್ಲ ಅವನು ಕಟುವಾದ ಬೈಗುಳ ಮಳೆಗರೆದನು. ತಂದೆಯ ಪ್ರತಿಜ್ಞೆಯನ್ನು ಉಳಿಸಿಕೊಳ್ಳುವುದೇ ಅವನ ಗುರಿಯಾಯಿತು.

ದುರ್ಯೋಧನನು ಅವನ ರಾಜ ಹಾಗೂ ಗೆಳೆಯ. ಆತನ ಅಂತಿಮ ಇಚ್ಛೆಯನ್ನು ಪೂರೈಸುವುದು ಅಶ್ವತ್ಥಾಮನಿಗೆ ಕರ್ತವ್ಯವೆನಿಸಿತು. ತಂದೆ ಹಾಗೂ ರಾಜನ ಇಚ್ಛೆಗಳ ಜೊತೆಗೆ, ಮೊದಲ ಬಾರಿಗೆ ಅವನ ಇಚ್ಛೆಯೂ ಕೂಡಿಕೊಂಡು ಅವನು ಸೇನಾಧಿಪತಿಯಾದನು. ಈ ಮೊದಲನೆಯ ಪ್ರಸಂಗವನ್ನು ವ್ಯಾಸರು ಬಹಳ ವಿಸ್ತಾರವಾಗಿ ವರ್ಣಿಸಿದ್ದಾರೆ. ಆದರೆ, ಅದೇ ಹರಹಿನಲ್ಲಿ ಜಿಜ್ಞಾಸುವು ದಾರಿತಪ್ಪುವಂತೆಯೂ ಮಾಡಿದ್ದಾರೆ. ಈ ವಿಸ್ತೃತ ಪ್ರಸಂಗ ಹಾಗೂ ತರುವಾಯದ ಪ್ರಸಂಗದ ಸುತ್ತಲೂ ಅವರು ತೊಡಿಸಿದ ಮಂಜಿನ ಮುಸುಕಿಗೆ ಎರಡು ಮಾತಿಲ್ಲ. ಹಾಗೆ ನೋಡಿದರೆ ಆ ಪ್ರಸಂಗದ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲಿದಂತೆ ಕಂಡರೂ ಅದೆಲ್ಲವೂ ಮಸುಕು ಕೈಚಳಕವಾಗಿದೆಯೆನ್ನಬೇಕು. ಇದು ವ್ಯಾಸರ ವಾಙ್ಮಯದಲ್ಲಿಯ ಮಯಗೃಹವೇ ಆಗಿದೆಯೆನ್ನಿ, ಬೇಕಾದರೆ! ತಿರುವು ಮುರುವುಗಳೆಲ್ಲ ಒಂದಾಗಿವೆ; ತಮ್ಮ ನಿಲುವನ್ನೆಲ್ಲ ಕಳೆದುಕೊಂಡಿವೆ. ರೇಖೆಗಳು ಅದೆಷ್ಟು ದಪ್ಪವಾಗಿವೆಯೆಂದರೆ ಅವುಗಳಿಂದಾಗಿ ಬರಿಯ ಗೀರುಗಳೇ

ಹುಟ್ಟಿಕೊಂಡಿವೆ. ಅಷ್ಟೇ ಏಕೆ ಈ ಗೀರುಗಳೆಂದರೆ ಅಶ್ವತ್ಥಾಮನ ಆ ಕಾಲದ ಮನಸ್ಸು ಹಾಗೂ ಕೃತಿಯ ಪ್ರತೀಕಗಳೆನ್ನಿಸಬಹುದು. ವಿಸಂಗತಿಯೇ ಈ ಎರಡೂ ಪ್ರಸಂಗಗಳ ತಳಹದಿಯಾಗಿದೆ. ಅದಲ್ಲದೆ, ಸೋಜಿಗದ ಮಾತೆಂದರೆ ಈ ವಿಸಂಗತಿಯನ್ನು ತತ್ವಶಾಸ್ತ್ರದ ಸುಸಂಗತಿಯ ಅಡಿಗಲ್ಲ ಮೇಲೆ ನಿಲ್ಲಿಸಿರುವುದು. ಭಗವದ್ಗೀತೆಯಲ್ಲಿಯ ಮೈನವಿರೇಳಿಸುವ ಆ ಘಟನೆ ಹಾಗೂ ಅದೇ ತತ್ವ ವಿಚಾರಗಳನ್ನು ಇಲ್ಲಿ ತೀರ ವಿರುದ್ಧವಾದ ರೀತಿಯಲ್ಲಿ ಬಳಸಲಾಗಿದೆ. ಅದು ಒಂದು ವಸ್ತುವಿನ ನೆಳಲಿನಂತೆ ಕಾಣಿಸುತ್ತದೆ. ಹಾಗೆ ನೋಡಿದರೆ ಈ ಪ್ರಸಂಗದಲ್ಲಿ ಅಶ್ವತ್ಥಾಮನು ಅರ್ಜುನನ ದೆವ್ವದಂತಹ ನೆರಳಿನ ಹಾಗೆ ಕಂಡು ಬರುತ್ತಾನೆ. ಹಾಗೆ ಕಾಣದಿದ್ದರೇನೇ ಅಚ್ಚರಿಯ ಮಾತಾಗುತ್ತಿತ್ತು. ಕ್ರಾಂತದರ್ಶಿಗಳಾದ ವ್ಯಾಸರ ಪ್ರತಿಭೆಯೂ ಪ್ರಜ್ಞೆಯೂ, ವಾಸ್ತವತೆಯನ್ನು ಬಿಚ್ಚಿ ತೋರಿಸಲೆಂದು, ವಾಸ್ತವದ ವ್ಯಕ್ತಿಗಳನ್ನು ಆಧರಿಸಿ ಅಜ್ಞೇಯವಾದುದನ್ನು ಚಿತ್ರಿಸಲು ಎಳಸುತ್ತವೆ. ಆಕೃತಿಯು ವಾಸ್ತವವಾಗಿದ್ದರೂ ಬಣ್ಣ ಮಾತ್ರ ಅವಾಸ್ತವವಾಗಿರುತ್ತದೆ. ಶಬ್ದ ಮತ್ತು ದೃಶ್ಯಗಳು ಪರಿಚಿತವಾಗಿರುತ್ತವೆ. ಭಯಾನಕದ ಮುನ್ಸೂಚನೆಯೂ ಅಷ್ಟರಲ್ಲಿ ಉಂಟಾಗಿರುತ್ತದೆ. ದುರ್ಯೋಧನನ ಮರಣವೆಂದರೆ ವಾಸ್ತವವಾಗಿ ಒಂದು ದೃಷ್ಟಿಯಿಂದ ಸರ್ವನಾಶವೇ. ಆಗಲೇ ಯುದ್ಧ ನಿಲ್ಲಬೇಕಾಗಿತ್ತು. ಆದರೆ ನಿಲ್ಲಲಿಲ್ಲ. ದುರ್ಯೋಧನನ ಪ್ರಾಣವು ಒಮ್ಮೆಲೇ ಹೋಗಲಿಲ್ಲ. ಎಷ್ಟೋ ಕಾಲ – ಮೂರು ನಾಲ್ಕು ದಿನಗಳ ವರೆಗಾದರೂ – ಆತ ಬದುಕಿದ್ದ. ಈ ಅವಧಿಯೇ ಈ ಪ್ರಸಂಗದಲ್ಲಿಯ ನಾಟಕೀಯ ಒತ್ತಡವನ್ನೂ ಉತ್ಪತ್ತಿಮಾಡುವ ಅವಧಿಯಾಗಿದೆ. ಈ ಒತ್ತಡದ ವೇಗವು ಅಶ್ವತ್ಥಾಮನ ವಿಲಕ್ಷಣ ಗತಿಯಲ್ಲಿ ಹಾಗೂ ಪ್ರಚಂಡ ಶಕ್ತಿಯಿಂದ ತುಂಬಿದ ಕೃತಿಯಲ್ಲಿ ಇದೆ. ಆದರೆ ಈ ಗತಿ ಮತ್ತು ಕೃತಿ ಯಾವುದೇ ಜಯಿಷ್ಣುಪ್ರೇರಣೆಯಿಂದ ತುಂಬಿದ್ದಲ್ಲ. ಅದರ ಸ್ವರೂಪವು ಸಂಪೂರ್ಣವಾಗಿ ಅಭಾವಾತ್ಮಕವಾದುದು. ವಿನಾಶದ ವೇಗವು ಅದರಲ್ಲಿದೆ. ಅಳಿವು ಉಳಿವುಗಳಲ್ಲಿಯ ವಿಕಟತೆಯ ಒಂದೊಂದು ಆವಿಷ್ಕಾರವೂ ಅದರಲ್ಲಿ ತುಂಬಿದೆ. ಅಶ್ವತ್ಥಾಮನನ್ನು ಕೆರಳಿಸಿದ್ದು ಪರಾಭವ; ಅಹಂಕಾರವಲ್ಲ. ಅವನ ದ್ವೇಷವು ಪ್ರಚಂಡ ಮೃತ್ಯುಮಯ ಅಂಧಶಕ್ತಿಯೊಂದಿಗೆ ಒಂದಾಯಿತು. ತಾನು ತಾನಾಗುವುದು ಅವನಿಗೆ ಬೇಕಾಗಿರಲಿಲ್ಲ. ತನ್ನ ಒಡೆಯನ ರಾಜ್ಯವನ್ನೂ ಅವನು ಕಾಯಬೇಕಾಗಿರಲಿಲ್ಲ. ಅವನಿಗೆ ಬೇಕಿದ್ದುದು ಬರಿಯ ಸೇಡು; ಧೃಷ್ಟದ್ಯುಮ್ನ ಹಾಗೂ ಪಾಂಡವರನ್ನು ಕುರಿತದ್ದು. ಈ ಉನ್ಮನಸ್ಕ ಸ್ಥಿತಿಯಲ್ಲಿರುವಾಗಲೆ ಅವನು ದೇಹದ ನಶ್ವರತೆ ಹಾಗೂ

ಅಮರತ್ವಗಳನ್ನು ಕುರಿತು ಗುಡುಗಿದ್ದನು. ಯುದ್ಧಾರಂಭದಲ್ಲಿ, ತನ್ನವರೊಂದಿಗೆ ಹೇಗೆ ಯುದ್ಧಮಾಡುವುದೆಂಬ ಭ್ರಾಂತಿಗೆ ಸಿಲುಕಿಕೊಂಡಿದ್ದ ಅರ್ಜುನನಿಗೆ ಕೃಷ್ಣನು ಹೇಳಿದ ರಣಾಂಗಣೋಚಿತವಾದ ಆ ತತ್ತ್ವೋಪದೇಶವೇ ಬೇರೆ, ಪೈಶಾಚ ಮನೋವೃತ್ತಿಯಿಂದ ಕೂಡಿದ ಅಶ್ವತ್ಥಾಮನು ಯುದ್ಧಾಂತ್ಯದಲ್ಲಿ, ಕೃಪನೇ ಮೊದಲಾದ ಸೋತ ಅರೆಜೀವಿಗಳಿಗೆ ಹೇಳುವ ಈ ಮಾತುಗಳೇ ಬೇರೆ. ದೈವಗತಿಯನ್ನು ಶರಣುಹೊಕ್ಕ ಮಾನವನ ಮೂಢ ನಂಬುಗೆಯೂ ಇಲ್ಲಿಲ್ಲ. ತತ್ತ್ವಶಾಸ್ತ್ರಕ್ಕೆ ಬೇಕಿದ್ದ ಯಾವುದೇ ಗಟ್ಟಿ ನಿಲುವೂ ಇಲ್ಲಿಲ್ಲ. ಇಲ್ಲಿರುವುದು ಸ್ವಾಮಿಭಕ್ತಿಯ ಚೌಕಟ್ಟು ಮಾತ್ರ.

ಈ ತತ್ತ್ವವಿಚಾರದ ಹೊಳಹಿಗಿಂತಲೂ ಹೆಚ್ಚಿನ ಚಮತ್ಕಾರ ಕಂಡುಬರುವುದು ಆ ಬಳಿಕವೇ. ತಾನೇ ಪಿಶಾಚಿಯಂತಾದಾಗಲೂ ಭೂತಗಳನ್ನು ಕಂಡು ಬೆಚ್ಚಿಬೀಳತೊಡಗುತ್ತಾನೆ. ಇಂತಹ ಮೊದಲ ಪ್ರಸಂಗದ ಆರಂಭವೂ ಬಹಳ ಭಯಾನಕವಾಗಿದ್ದು ಅದಕ್ಕಾಗಿ ವ್ಯಾಸರು ಒಂದು ಪ್ರತಿಮೆಯನ್ನು ಒಳ್ಳೆಯ ರೀತಿಯಲ್ಲಿ ಅಳವಡಿಸಿದ್ದಾರೆ. ಯುದ್ಧದಲ್ಲಿ ಪಾಂಡವರಿಂದ ಸೋತ ಅಶ್ವತ್ಥಾಮ್ನನಿಗೆ ಅಂದು ರಾತ್ರಿ, ಕಾಗೆಯ ಮೊಟ್ಟೆ ಹಾಗೂ ಮರಿಗಳನ್ನು ಕೊಂದು ಹಾಳುಮಾಡುವ ಒಂದು ಗೂಬೆಯು ಮರದ ಮೇಲೆ ಕುಳಿತಿರುವುದು ಕಂಡುಬರುತ್ತದೆ. ಅದನ್ನು ಕಾಣುತ್ತಲೇ, ಧೃಷ್ಟದ್ಯುಮ್ನನನ್ನೂ ದ್ರೌಪದಿಯ ಮಕ್ಕಳನ್ನೂ ಅವರು ಮಲಗಿ ನಿದ್ರಿಸುತ್ತಿರುವಾಗಲೇ ಕೊಂದು ಬಿಡುವ ಯೋಚನೆ ಅವನಿಗೆ ಹೊಳೆಯುತ್ತದೆ. ಕುಂಟು ಕಲ್ಪನೆಯ ಮನುಷ್ಯನಿಗೆ ಹೊಳೆದ ಆ ಆಲೋಚನೆಯು ಅವನನ್ನು ಪೂರ್ಣವಾಗಿ ಆವರಿಸುತ್ತದೆ. ಹೀಗಾಗಿ ಕೃಪನು ನಿಷೇಧಿಸಿದರೂ ಅವನು ತನ್ನ ಹಟವನ್ನು ಬಿಡುವುದಿಲ್ಲ. ಆತನ ಆಕಾಂಕ್ಷೆಯೂ ಬೆಳೆಯುತ್ತಾ ಹೋಗಿ ಕೊನೆಗೆ ಕೃಪನೂ ಆ ಬಲೆಯಲ್ಲಿ ಬೀಳುತ್ತಾನೆ.

ಅಶ್ವತ್ಥಾಮನಿಗೆ ಧೃಷ್ಟದ್ಯುಮ್ನನ ಶಿಬಿರದ ಮುಂದೆ ಭೂತ ಕಾಣಿಸುತ್ತದೆ. ಭಯಂಕರವಾಗಿದ್ದರೂ ಅದು ತೇಜಸ್ವಿಯಾಗಿರುತ್ತದೆ, ಭವ್ಯವಾಗಿರುತ್ತದೆ. ಅವನಿಗೆ ಭೂತದ ಅನುಭವ ಆಗದಿರುವುದು ಕಠಿಣ. ಯಾವ ಮನಃಸ್ಥಿತಿಯಲ್ಲಿ ಅವನು ಇದ್ದನೋ, ಆ ಸ್ಥಿತಿಯಲ್ಲಿ ಅವನ ಮೂಕ ಸ್ವಭಾವದ ಪ್ರತಿ ಪ್ರತೀಕ ವಾಗಿತ್ತು ಅದು. ಆ ಭೂತ ಮಾತಾಡುತ್ತಿರಲಿಲ್ಲ. ಅವನಷ್ಟೇ ಅದೂ ಕೂಡ ಕ್ರಿಯಾಶೀಲವಾಗಿ ಮಾತ್ರ ಇತ್ತು. ಅಶ್ವತ್ಥಾಮನು ಯಾವ ಅಸ್ತ್ರಗಳನ್ನು ಪ್ರಯೋಗಿಸುತ್ತಿದ್ದನೋ ಅವನ್ನೆಲ್ಲ ಅದು ಹಿಡಿದು ಹಾಕುತ್ತಿತ್ತು. ಅವನ ಮೇಲೆ

ಪ್ರತಿಯಾಗಿ ಪ್ರಹಾರವನ್ನು ಮಾತ್ರ ಮಾಡುತ್ತಿರಲಿಲ್ಲ. ಆ ಭೂತವನ್ನು ಕಂಡು ಅಶ್ವತ್ಥಾಮನು ಹೆದರಲೂ ಇಲ್ಲ ಆಶ್ಚರ್ಯಚಕಿತನೂ ಆಗಲಿಲ್ಲ. ಯಾವುದೇ ಭಯಂಕರ ಸಂಗತಿಯನ್ನು ಕಂಡು ಹೆದರುವ ಸ್ಥಿತಿಯನ್ನು ಅವನು ಆಗಲೇ ಮೀರಿದ್ದನು. ಎಲ್ಲಿಯವರೆಗೆ ಅವನ ಶರೀರವು ಸುದೃಢವಾಗಿತ್ತೋ ಅಲ್ಲಿಯ ವರೆಗೂ ಅವನು ಭೀತಿಯಿಂದ ಮುಕ್ತನಾಗಿದ್ದನು.

ಆ ಭೂತವು ಎಲ್ಲ ಆಯುಧಗಳನ್ನೂ ಬಚ್ಚಿಟ್ಟುಕೊಂಡ ಬಳಿಕ ಅಶ್ವತ್ಥಾಮನು ಶಿವನನ್ನು ಆರಾಧಿಸತೊಡಗಿದನು. ಶಿವನು ಪ್ರತ್ಯಕ್ಷನಾಗಿ, "ಕೃಷ್ಣನು ನನಗೆ ಪ್ರಿಯನಾದುದರಿಂದ ಅವನನ್ನು ಆದರಿಸುವ ಸಲುವಾಗಿ ಧೃಷ್ಟದ್ಯುಮ್ನನನ್ನೂ ದ್ರೌಪದಿಯ ಪುತ್ರರನ್ನೂ ಪಾಂಚಾಲರನ್ನೂ ಈವರೆಗೆ ಕಾಪಾಡಿದೆ. ಆದರೆ ವಾಸ್ತವವಾಗಿ ಅವರೆಲ್ಲ ಕಾಲನ ದವಡೆಯಲ್ಲಿ ಸಿಕ್ಕಿ ಹಾಕಿಕೊಂಡವರು. ಅವರ ಮೃತ್ಯುವನ್ನು ತಪ್ಪಿಸಲು ಸಾಧ್ಯವಾಗದು. ಆ ಮೃತ್ಯುವನ್ನು ಅವರಿಗೆ ಒದಗಿಸಲೆಂದೇ ನಾನು ನಿನಗೆ ಮೃತ್ಯುಂಜಯವಾದ ಶಸ್ತ್ರವನ್ನು ಕೊಡುತ್ತಿದ್ದೇನೆ" ಎಂದನು. ಇದು, ವಿರಾಟ್ ಸ್ವರೂಪದ ಕೃಷ್ಣನ ಕರಾಳ ದವಡೆಯಲ್ಲಿ ಸಿಕ್ಕು ಸಾಯುತ್ತಿದ್ದ ಯೋಧರ ಆ ಒಂದು ದೃಶ್ಯದ, ಆ ಒಂದು ಸಂಗತಿಯ ಆವೃತ್ತಿ ಮಾತ್ರವಾಗಿದೆ. ಈ ದರ್ಶನವು ಅಶ್ವತ್ಥಾಮನಿಗೆ ಆಶ್ವಾಸಕವಾಗಿದ್ದರೂ ವಿಶ್ವರೂಪದರ್ಶನದಂತೆ ಪ್ರೇರಕ ಮಾತ್ರ ಆಗಲಿಲ್ಲ. ಯುದ್ಧದಲ್ಲಿ ನಡೆದ ಸಂಹಾರದ ಕೊನೆಯ ಘಟ್ಟವನ್ನು ಪೂರ್ಣಗೊಳಿಸಲೆಂದೇ ಅದು ಆಯಿತು; ದೇವ ಹಾಗೂ ಅವನ ಭಕ್ತ ಇವರ ನಡುವಿನ ಸ್ವಾಭಾವಿಕ ಆಕರ್ಷಣೆಯಿಂದಂತೂ ಅಲ್ಲ. ಅಶ್ವತ್ಥಾಮನ ಉಗ್ರ ಆತ್ಮಾಹುತಿಯ ನಿಶ್ಚಯದ ಆಹ್ವಾನದಂತೆ ಅದು ನಡೆಯಿತು. ಈಶ್ವರನು ಕರುಣೆಯಿಂದ ತನ್ನ ಭಕ್ತನತ್ತ ಹೊರಳದೆ, ದೈವನಿರ್ಧಾರಿತ ಸಾವನ್ನು ಬಹುಕಾಲ ತಡೆದು ನಿಲ್ಲಿಸಲಾಗದೆಂಬ, ದೈವವಾದೀ ಚಿಂತನೆಯಿಂದ ಈ ಪ್ರಸಂಗವು ಹುಟ್ಟಿಬಂತು. ಈ ದರ್ಶನದಿಂದ, ಶಸ್ತ್ರದಾನದಿಂದ, ಅಶ್ವತ್ಥಾಮನಿಗೆ, ಅವನು ಬಯಸಿದ ವಸ್ತು ಸಿಕ್ಕಿತು, ಶಕ್ತಿ ಸಿಕ್ಕಿತು. ಬೆಲೆಕೊಟ್ಟು ವಸ್ತುಗಳನ್ನು ಕೊಂಡಂತಾಗಿತ್ತು. ಆದರೆ ಅದರಿಂದ ಅವನಿಗೆ ಕರುಣೆ, ಶುದ್ಧಿ, ಮುಕ್ತಿ, ಶಾಂತಿ ಇವುಗಳ ಪೈಕಿ ಯಾವ ಒಂದೂ ಸಿಕ್ಕಲಿಲ್ಲ. ಶತ್ರುಸಂಹಾರದ ನಂತರವೂ ಆತನ ಮನಸ್ಸು ವೈರದಿಂದ ತುಂಬಿತ್ತು. ನಿದ್ದೆಯಲ್ಲಿದ್ದ ಧೃಷ್ಟದ್ಯುಮ್ನನನ್ನು ಕೊಲ್ಲುವ ಮೊದಲು ಅವನನ್ನು ಕಾಲಿನಿಂದ ಮೆಟ್ಟಿ ಎಬ್ಬಿಸಿದನು; ಆದರೆ ಸಾವರಿಸಿಕೊಂಡು ಸಿದ್ಧನಾಗುವುದಕ್ಕೆ ಬಿಡಲಿಲ್ಲ.

ಅಷ್ಟೇ ಅಲ್ಲದೆ ಅವನನ್ನು ಶಸ್ತ್ರದಿಂದ ಇರಿದು ಕೊಲ್ಲಲೂ ಒಪ್ಪಲಿಲ್ಲ. ವೀರೋಚಿತ ಸಾವು ಬರಬಾರದೆಂದು ಪಶುವನ್ನು ಕೊಲ್ಲುವಂತೆ ಕೊಂದನು; ತುಳಿತುಳಿದು ಕೊಂದನು. ಆ ವೇಳೆಯಲ್ಲಿ ಅವನೂ ಪಶುವಾಗಿಯೇ ಇದ್ದನು.

ತಾನು ಈ ಪಾಂಡವ ವೀರರನ್ನು ಹೇಗೆ ಕೊಲೆಮಾಡಿದನೆಂಬ ವಿಚಾರವನ್ನು ಅವನು ದುರ್ಯೋಧನನಿಗೆ ಹೇಳಿದನು. ಪಾಂಡವರ ಕಡೆ ಏಳು ಜನ, ಕೌರವರ ಕಡೆ ಮೂವರು ಯೋಧರು ಬಾಕಿ ಉಳಿದರು. ದುರ್ಯೋಧನನು ಯುದ್ಧದ ಸಮಾಪ್ತಿಯನ್ನು ಕೇಳಿಕೊಂಡನು. ಅಶ್ವತ್ಥಾಮನು ಸೇಡುತೀರಿಸಿಕೊಂಡ ದ್ದಾಯಿತು. ಇದೇ ದುರ್ಯೋಧನನಿಗೂ ಅಶ್ವತ್ಥಾಮನಿಗೂ ಸಮಾಧಾನದ ಒಂದು ನೆಲೆಯಾಗಿತ್ತು.

ಶಿವದರ್ಶನದ ವರದಿಂದಾಗಿ ವ್ಯಾಸರು, ಮುಂಬರುವ ಅಶುಭ ಭವಿಷ್ಯವನ್ನೇ ಸೂಚಿಸಿದ್ದಾರೆ. ಇಲ್ಲಿ ಕೂಡ, ಅಶ್ವತ್ಥಾಮನನ್ನು ಅಧರ್ಮಿಯೆನಿಸಿ, ಕೃಷ್ಣನು ಅವನ ಹಣೆಯಲ್ಲಿಯ ಮಣಿಯನ್ನು ತೆಗೆದುಕೊಳ್ಳುವಂತೆ ಮಾಡುತ್ತಾರೆ. ಅಶ್ವತ್ಥಾಮನು ಪಾಂಡವ ಸಂಹಾರಕ್ಕಾಗಿ ಬ್ರಹ್ಮಶಿರ – ಅಸ್ತ್ರವನ್ನು ಬಳಸುತ್ತಾನೆ. ದ್ರೋಣನು "ಈ ಅಸ್ತ್ರವನ್ನು ಎಂದಿಗೂ ಉಪಯೋಗಿಸಬೇಡ" ಎಂದು ಹೇಳಿದ್ದರೂ ಕೇಳದೆ ಅದನ್ನು ಉಪಯೋಗಿಸಿಬಿಡುತ್ತಾನೆ. ಇದರಿಂದಾಗಿ ತಂದೆಯೊಂದಿಗಿನ ಅವನ ನಂಟು ಕಡಿದುಹೋಗುತ್ತದೆ. ಗಾಳಿಯ ಪಟವು ಕಿತ್ತು ಹಾರಿಹೋದಾಗಿನ ದಾರದಂತಾಗುತ್ತದೆ ಅವನ ಸ್ಥಿತಿ. ಸೇಡಿನ ಪಿಶಾಚಿಯನ್ನು ಹದ್ದುಬಸ್ತಿನಲ್ಲಿಡಲಾರದವನಾಗುತ್ತಾನೆ. ಕೃಷ್ಣನ ಮಾತಿನಂತೆ, ಪಾಂಡವರನ್ನಲ್ಲ ದಿದ್ದರೂ ಉತ್ತರೆಯ ಗರ್ಭವನ್ನಾದರೂ ಬಲಿಕೊಟ್ಟು ಆ ಅಸ್ತ್ರವನ್ನು ಸಂಹರಿಸಿದಂತಾಗುತ್ತದೆ. ಅವನ ಮಣಿ ಹೋಯಿತು. ಯಾವುದರ ಮೂಲಕ ವಾಗಿ ಹಸಿವು, ನೀರಡಿಕೆ, ಭಯಭೀತಿಗಳೆಲ್ಲ ಹೊರಟು ಹೋಗುತ್ತವೆಯೋ, ಅಂತಹ ಆ ಮಣಿಯನ್ನು ದ್ರೌಪದಿಯು ಕೇಳುತ್ತಾಳೆ; ಕೃಷ್ಣನು ಅದನ್ನು ಅವಳಿಗೆ ಕೊಡುತ್ತಾನೆ. ಈ ಮಣಿಯ ಉಲ್ಲೇಖದ ಹಿನ್ನೆಲೆಯಲ್ಲಿ ವ್ಯಾಸರು ಒಂದು ಚಿಕ್ಕ ವಿಸಂಗತಿಯನ್ನು ನಿರ್ಮಿಸಿದ್ದಾರೆ. ಅಶ್ವತ್ಥಾಮನ ಬಳಿ ಆ ಮಣಿಯು ಜನ್ಮತಃ ಇತ್ತು. ಹಾಗಿದ್ದೂ, ಬಾಲ್ಯದಲ್ಲಿ ಅವನು ಹಸಿವಿನಿಂದ ಹಾಲಿಗಾಗಿ ತೊಳಲಾಡಿದ್ದೇಕೆ? ಮಣಿಯ ಸಂಬಂಧದಲ್ಲಿ ಯಾವುದೋ ಸಂಗತಿಯು ಕಳಚಿ ಹೋಗಿದೆ, ಅಳಿಸಿ ಹಾಕಲ್ಪಟ್ಟಿದೆ. ಮಣಿ ಹೋಯಿತು; (ಇದೊಂದು ವಿಸಂಗತಿಯನ್ನು ಬಿಟ್ಟರೆ ಅಶ್ವತ್ಥಾಮನ ಬಾಲ್ಯದ ಹಸಿವು ಮತ್ತೆ ಮರುಕಳಿಸಿತು.

ಹೀಗಾಗಿ, ಅವನು ತೀವ್ರವಾದ ಹಸಿವು ಬಾಯಾರಿಕೆಗಳಿಗೆ ಗುರಿಯಾದ; ಅಸಹಾಯಕನಾದ; ಬಲಹೀನನಾದ. ಎಲ್ಲಕ್ಕಿಂತ ಹೆಚ್ಚಾಗಿ, ಮಣಿಯನ್ನು ದಾನಕೊಟ್ಟು ಬಿಡುವಂತೆ ವ್ಯಾಸರೇ ಅವನಿಗೆ ಆಜ್ಞಾಪಿಸುತ್ತಾರೆ. ವ್ಯಾಸರು ಒಡೆಯರು. ಅವರ ಆಜ್ಞೆಯನ್ನು ಹೇಗೆ ತಾನೆ ಮೀರಿಯಾನು? ಸ್ವಾಮಿಭಕ್ತಿಯ ವಲಯವೊಂದು ಮಾತ್ರ ಆಗಲೂ ಅವನ ಸುತ್ತ ತಿರುವುಮುರುವಾಗಿ ಸುತ್ತುತ್ತಲಿತ್ತು. ಉತ್ತರೆಯ ಗರ್ಭನಾಶದಂತಹ ಒಂದು ಚಿಕ್ಕ ಹಾನಿಯುಂಟುಮಾಡಿ ತನ್ನ ಅಸ್ತ್ರವು ಮರಳಿ ಬರುವುದೆಂದು ಅಶ್ವತ್ಥಾಮ ನುಡಿದನು. ಅದು ಹಾಗೇ ಮರಳಿತು. ಕೃಷ್ಣನು ಉತ್ತರೆಯ ಗರ್ಭಕ್ಕೆ ಮತ್ತೆ ಜೀವವನ್ನು ಬರಿಸಿದರೂ, ಅಶ್ವತ್ಥಾಮನಿಗೆ ಮಾತ್ರ ಮೈಯೆಲ್ಲ ಹುಣ್ಣಾಗಿ ಮಹಾರೋಗಿಯಾಗುವಂತೆ ಶಾಪ ಕೊಡುತ್ತಾನೆ. ಅಶ್ವತ್ಥಾಮನು ಶಸ್ತ್ರಗಳನ್ನು ತ್ಯಜಿಸಿದನು. ಗಾಯಾಳುವಾಗಿ ತೀರ ದೀನನಾಗಿ ತನ್ನ ಮೋರೆಯನ್ನು ಮುಚ್ಚಿಕೊಂಡು ಅಳುತ್ತ ಕಾಡಿನತ್ತ ಓಡಿಹೋಗಿ ಕಾಣದಂತಾದನು.

ಕೃಷ್ಣನ ನುಡಿಯಂತೆ ಅಶ್ವತ್ಥಾಮನು ಇಂದಿಗೂ ಭೂಮಿಯಲ್ಲಿ ತಿರುಗುತ್ತಲೇ ಇದ್ದಾನೆ. ಏಳು ಜನ ಚಿರಂಜೀವಿಗಳ ಪೈಕಿ ಭಾಗ್ಯಹೀನವಾದ ಚಿರಂಜೀವಿತ್ವವು ಅವನ ಪಾಲಿಗೆ ಅಂಟಿಕೊಂಡಿತು. ಬಲಿಚಕ್ರವರ್ತಿಯನ್ನು ಪರಮಾತ್ಮನೇ ಪಾತಾಳಕ್ಕೆ ನೂಕಿದರೂ ಆತ ಪುಣ್ಯಾತ್ಮನಾಗಿಯೇ ಉಳಿದನು. ದೀಪಾವಳಿಯ ಸಮಯಕ್ಕೆ ಮನೆಮನೆಗಳಲ್ಲಿ ಅನ್ನ ಧಾನ್ಯಗಳನ್ನು ಸೂರೆಗೊಳ್ಳುತ್ತ ಅವನು ಇಂದಿಗೂ ತಿರುಗುತ್ತಿರುತ್ತಾನಂತೆ. ಹನುಮಂತನು ಚಿರಂಜೀವಿ. ಅವನು ಬೇರೆ ಬೇರೆ ರೂಪಗಳಲ್ಲಿ ಭಕ್ತರಿಗೆ ಒಲಿಯುತ್ತಾನೆ. ಹೆರಿಗೆಯವರ ತೊಂದರೆಗಳನ್ನು ನೀಗಿಸುತ್ತಾನೆ. ಮಸಣದಲ್ಲಿಯ ಹೆಣಗಳನ್ನು ಕಾಯುತ್ತಾನೆ. ಹುಣ್ಣಿಮೆ ಅಮಾವಾಸ್ಯೆಗಳಂದು ಅಲ್ಲಿ ಚೇಟಕಿಗಳ* ಕುಣಿತವನ್ನು ಕಾಣುತ್ತಾನೆ. ಮಾಂತ್ರಿಕರಿಗೆ ಸಿದ್ಧಿಯನ್ನು ಕರುಣಿಸುತ್ತಾನೆ. ಇನ್ನೂ ಏನೇನೋ ಮಾಡುತ್ತಿರುತ್ತಾನೆ. ಉಳಿದ ಚಿರಂಜೀವಿಗಳು ಮಾತ್ರ ಮಾನವರ ಬದುಕಿನಲ್ಲಿ ಅಷ್ಟಾಗಿ ಕೈಹಾಕುವುದಿಲ್ಲ. ಆದರೆ ಅಶ್ವತ್ಥಾಮನು ಮಾತ್ರ, ಜಗತ್ತಿನಲ್ಲಿಯ ಪ್ರತಿಯೊಬ್ಬ ಮನುಷ್ಯನ ದುಃಖ ದೈನ್ಯಗಳ ಮೂರ್ತಿವೆತ್ತ ಕುರುಹಾಗಿದ್ದಾನೆ. ಪರಿತ್ಯಕ್ತನೂ ದೀನನೂ ಯಾಚಕನೂ ಆದ ಆ ಮಹಾರೋಗಿಯು ಒಂಟಿಯಾಗಿ

---

* ಚೇಟಕಿ- A sorcerer that plots mischief.

ಹಳ್ಳಿಗಳಲ್ಲಿ ಸುತ್ತುತ್ತಾನೆ. ತನ್ನ ಹಣೆಯ ಗಾಯವನ್ನು ತೋರಿಸುತ್ತ ಜನರಿಂದ ಎಣ್ಣೆ ಹಾಗೂ ಹರಕು ಚಿಂದಿಬಟ್ಟೆಗಳನ್ನು ಬೇಡುತ್ತಾನಂತೆ. ಇಂದಿಗೂ ಜನರಲ್ಲಿ ಅವನ ಬಗ್ಗೆ ಹೆದರಿಕೆಯಿದೆ. ಎಣ್ಣೆ ಕೊಡದವರನ್ನು ಅವನು ಶಪಿಸುತ್ತಾನಂತೆ – ಮಹಾರೋಗಿಯಾದವನು ಜಗತ್ತಿಗೆ ಯಾವ ವರವನ್ನೂ ಕೊಡಲಾರ. ಈ ಭಯಂಕರ ವ್ಯವಹಾರೀ ಸತ್ಯವು ಅಶ್ವತ್ಥಾಮನು ಚಿರಂಜೀವಿಯಾಗಿದ್ದಾನೆಂಬ ಕಲ್ಪನೆಯ ರೂಪದಿಂದ ಭಾರತದಲ್ಲಿ ನೂರಾರು ವರ್ಷಗಳಿಂದ ಮನೆಮನೆಗಳಲ್ಲೂ ಸುತ್ತುತ್ತಿದೆ.

ರೋಗವನ್ನು ಅನುಭವಿಸುವ ವ್ಯಥೆಯ ಆಂತರ್ಯದಲ್ಲಿ ಒಂದು ನಾಜೂಕಾದ ಸತ್ಯವು ಅಡಕವಾಗಿರುತ್ತದೆ. ಪರಮ ನಮ್ರತೆಯ ಸತ್ಯವನ್ನು ಆರ್ತರ ಭಕ್ತಿಭಾವದಲ್ಲಿ ಕೃಷ್ಣನು ಉಲ್ಲೇಖಿಸಿದ್ದಾನೆ. ಆರ್ತರಲ್ಲಿಯ ಮೂಕ ಸಹನೆಯು ವಿಶಿಷ್ಟ ಸೌಂದರ್ಯದಿಂದ ತುಂಬಿರುತ್ತದೆ. ಈ ಸೌಂದರ್ಯದ ಅರಿವು ಮೂಡಿದ್ದರಿಂದಲೇ ಅಶ್ವತ್ಥಾಮನು ತನ್ನ ಮೃತ್ಯುವಿನ ವರವನ್ನು ಬಯಸದೆ ಇದ್ದಾನೆಯೆ? ಕೊನೆಗೂ ಅವನಿಗೆ ಮೃತ್ಯುವಿನ ವರದಾನವನ್ನು ಕೊಡದೇ ಇರುವಲ್ಲಿ ವ್ಯಾಸರು ಒಂದು ಕಲಾತ್ಮಕ ಗೂಢ ಪೇಚನ್ನು ನಿರ್ಮಿಸಿದ್ದಾರೆ. ಮೃತ್ಯುವಿಲ್ಲ, ಧನ್ಯತೆಯಿಲ್ಲ, ಶಾಂತಿಯಿಲ್ಲ, ವೈರವಿಲ್ಲ, ಸೇಡಿಲ್ಲ. ಉಳಿದಿರುವುದು ಬರಿಯಸಂಕಟ; ಶಾರೀರಿಕ ವೇದನೆಯ ಅಪಾರ ಅರಿವು. ಯಾವ ಜೊತೆಗಾರರೂ ಇಲ್ಲದ ಒಂಟಿಯಾದ ಬಾಳಯಾತ್ರೆಯು, ತೀರ ಕೀಳು. ಅವಸ್ಥೆಯಲ್ಲಿರುವಾಗಲೂ, ಮೃತ್ಯುವಿನ ಭವ್ಯತೆಯನ್ನು ತನಗಿಂತಲೂ ಕೀಳುಮಾಡುವ ಶಕ್ತಿಯು, ಎಂದಿಗೂ ಅಳಿಯದ ತನ್ನ ಈ ವೇದನೆಯಲ್ಲಿದೆಯೆಂಬ ಸಂಗತಿಯನ್ನು ಅವನು ಸೂಚಿಸುತ್ತಿರಬಹುದೆ? ಸೂಕ್ಷ್ಮ ಹಾಗೂ ಭವ್ಯ ಎರಡನ್ನೂ ಕಳೆದುಕೊಂಡ ನಂತರ ಬಂದ, ಕೊನೆಯಿಲ್ಲದ ಇಂತಹ ಧಗಧಗಿಸುವ ಅವಸ್ಥೆಯಲ್ಲಿ ಕೂಡ, ತೋರಿಕೆಯ ದಯೆಯನ್ನು ದೂರವಿರಿಸಬಲ್ಲ ಯಾವುದೋ ಒಂದು, ವಿಲಕ್ಷಣ ಹಾಗೂ ಆಕರ್ಷಕವಾದದ್ದು ಇದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅದು ಎಷ್ಟೊಂದು ವಿಲಕ್ಷಣವಾಗಿದೆ ಮತ್ತು ಎಷ್ಟೊಂದು ದರ್ಪದಿಂದ ಕೂಡಿದೆ ಎಂದರೆ ಅದನ್ನು ಹೆಸರಿಸುವುದು ಶಕ್ಯವಲ್ಲ. ಆದರೆ ಕೆಲವೊಂದು ಬಾರಿ, ಅತಿ ದುರವಸ್ಥೆ ಹಾಗೂ ದೈನ್ಯತೆಗಳಿರುವಲ್ಲಿ ಮಾತ್ರ ತುಸು ಮಟ್ಟಿಗಾದರೂ ಅದರ ಅನುಭವವಾಗುತ್ತದೆ. ಆ ಸಂಗತಿಯೇ ಅಶ್ವತ್ಥಾಮನ ಚಿರಂಜೀವಿಯಾದ ವ್ಯಥೆ ಹಾಗೂ ಆತನ ವ್ಯಕ್ತಿತ್ವಗಳ ಸಾಕ್ಷಾತ್ಕಾರವೆನಿಸುತ್ತದೆ.

ತೆರೆದ ಗಗನದಡಿಯ ನೆಲದ ಮೇಲೆ ಸಂಚರಿಸುತ್ತಿರುವಾಗಲೂ ತನ್ನ ಅನುಭವದ ವಿಶ್ವವನ್ನು ಬೇಕೆಂದೇ ಪಕ್ಕಕ್ಕೆ ತಳ್ಳುತ್ತ ಅಶ್ವತ್ಥಾಮನು ನಾಲ್ಕೂ ಕ್ಷಿತಿಜಗಳನ್ನೂ ತನ್ನತ್ತ ಸೆಳೆದುಕೊಳ್ಳುತ್ತಾನೆ. ತನ್ನನ್ನು ತಾನು ಬಂಧನ ಕ್ಕೊಳಗುಮಾಡಿಕೊಳ್ಳುತ್ತಾನೆ. ಹೀಗೆ ಮಾಡಿ ಉಸಿರುಗಟ್ಟಿಸಿಕೊಳ್ಳುವ ಅವನ ಈ ಹಳೆಯ ರೂಢಿಗೆ ಕೊನೆಯಿಲ್ಲ. ತಂದೆಯ ನಂಟು ಹರಿಯಿತು. ಸ್ವಾಮಿಯ ಸ್ಮೃತಿಯು ಮುಗಿಯಿತು. ಈ ಅಖಂಡ ಬಂಧನದ ಮನೋಮಯ ಜಗತ್ತಿನಲ್ಲಿ ಅಕ್ಷಯ ಸಂಚಾರ ಮಾಡುವ ನಿರ್ಧಾರ ಮಾತ್ರ ತನ್ನ ಹಣೆಯಬರೆಹದ ಫಲವೆಂದುಕೊಂಡು ಅವನು ಸುತ್ತುತ್ತಲೇ ಇದ್ದಾನೆ. ಆತ ಯಾವ ಸಂದೇಶವನ್ನೂ ಕೊಡಬಯಸುವುದಿಲ್ಲ. ಅಮೃತತ್ವಕ್ಕೆ ಅಂಕುರಗಳಿರುವುದಿಲ್ಲ. ಯಾವುದರಲ್ಲಿ ಸೃಷ್ಟಿಶೀಲತೆಯಿಲ್ಲವೋ ಅದು, ಅವನಿಂದ ಪ್ರದರ್ಶಿತವಾಗುವುದೇನು?



# ವ್ಯಕ್ತಿರೇಖೆ ಕಳೆದುಕೊಂಡ ಮನುಷ್ಯ

ತೆಂಗಿನ ಮರದ ಬೇರುಗಳು ಬೆತ್ತಲೆ ಬಿದ್ದದ್ದು ಕಾಣುತ್ತದೆ. ಅವುಗಳ ಬಣ್ಣ ಜೀರ್ಣಶೀರ್ಣ. ಇಂಥ ನೇರ ಎತ್ತರದ ಆ ಮರದ, ಆ ಮೋಟು ಮೇಲ್ಮೈಯ ಬೇರುಗಳನ್ನು ನೋಡಿದಾಗ ನನ್ನ ಮನಸ್ಸು ವಿಷಣ್ಣವಾಗುತ್ತದೆ. ಅದರ ತಲೆ ಆಕಾಶಕ್ಕೆ ಮುಟ್ಟಿದೆಯೆಂಬುದು ಲಕ್ಷ್ಯಕ್ಕೆ ಬರುವುದೇ ಇಲ್ಲ. ಆ ಮರದ ಬುಡಕ್ಕೆ ಯಾವುದೇ ಬಣ್ಣ ಅಥವಾ ಆಕಾರ ಇರುವುದಿಲ್ಲ. ನೀರಿನ ಸೆಲೆಯೊಂದೇ ಅದಕ್ಕೆ ಆಧಾರ; ಉಸುಕೇ ಅದರ ಪೋಷಣೆ. ಉಸುಕಿನ ಬಂಜೆ ಸಾನ್ನಿಧ್ಯದಲ್ಲಿಯೇ ಅದರ ಬದುಕು ಸಾಗುವುದೆಂಬುದನ್ನೆ ಆ ಬೇರುಗಳು ಹೇಳುವಂತಿದೆ.

ಇದೇ ವಿಷಣ್ಣ ಭಾವವು, ದುರ್ಯೋಧನನ ಆಕೃತಿಯು ಮುಂದೆ ಬಂದೊಡನೆ ನನ್ನ ಮನಸ್ಸಿನಲ್ಲಿ ಉಂಟಾಗುತ್ತದೆ. ಆಗ ಕಂಡುಬರುವುದು, ಅವನ ವ್ಯಕ್ತಿತ್ವದ ಆ ಕೇವಲ ಮೊಟಕಾದ ಮುರುಟಾದ ಮೇಲ್ಮೈ ಬೇರುಗಳು. ವ್ಯಾಸರು ಖಲತ್ವದ

ಒಂದೇ ಒಂದು ಬಣ್ಣವನ್ನು ಅವನ ವ್ಯಕ್ತಿತ್ವದಲ್ಲಿ ತುಂಬಿದ್ದಾರೆ. ಅದೂ ಎಂಥ ಕೌಶಲದಿಂದ ಎಂದರೆ, ಅದರ ವಿಡಂಬನೆಯ ಬದಿಯನ್ನಷ್ಟೆ ತೋರಿಸಿ, ಬೇಕೆಂದೇ ವಿರೂಪಮಾಡಿದ ಆ ವ್ಯಕ್ತಿತ್ವವು ಕಾಲಲ್ಲೆ ಕುಸಿದಂತೆ ಅನಿಸುವ ಹಾಗೆ ಮಾಡಿದ್ದಾರೆ. ಅವರು ತಮ್ಮ ದೃಷ್ಟಿಯನ್ನು ಆ ಕಾಲಬದಿಯಿಂದ ಅಲುಗಲು ಬಿಡುವುದಿಲ್ಲ. ಆದರೆ ಕ್ವಚಿತ್ತಾಗಿ ಅಂಥ ಒಂದು ಕ್ಷಣವೂ ಬರುತ್ತದೆ. ಆಗ ಅವರು ಒಂದು ಕಿರಣವನ್ನು ಅವನ ಮೇಲೆ ಚೆಲ್ಲುತ್ತಾರೆ. ಆ ಕಿರಣದಲ್ಲಿ ಮಾತ್ರ ದುರ್ಯೋಧನನ ತಲೆಯನ್ನು ಎತ್ತರಿಸಿದ್ದು ಕಾಣಸುತ್ತದೆ. ಅವನ ಕಾಲುಗಳನ್ನು, ವ್ಯಾಸರು, ಇಲ್ಲದಂತೆ ಮಾಡಿದ್ದಾರೆ. ಸೊಂಟದಿಂದ ಕೆಳಗೆ ಒಂದು ಬಂಡೆ ಇರುವಂತಿದೆ ಈ ಕಾಲು. ಅದೇ ಆ ಜಡಮೂಢ ವ್ಯಕ್ತಿತ್ವದ ದರ್ಶನವನ್ನೇ ವ್ಯಾಸರು ಯಾವಾಗಲೂ ಮಾಡಿಸುತ್ತಾರೆ. ದುರ್ಯೋಧನನ ವ್ಯಕ್ತಿತ್ವಕ್ಕೆ ಅವರಿಟ್ಟ ಪ್ರತೀಕವೆಂದರೆ ಅವನ ತೊಡೆಗಳು. ಆ ತೊಡೆಗಳ ಉಲ್ಲೇಖವು ದ್ರೌಪದಿಯ ವಸ್ತ್ರಾಪಹರಣದ ಪ್ರಸಂಗದಿಂದ ಹಿಡಿದು ಕೊನೆಯ ವರೆಗೂ ಬಂದಿದೆ. ಆರಂಭದಿಂದ ಅಂತ್ಯದ ವರೆಗೆ ದುರ್ಯೋಧನನು ಒಬ್ಬ ಖಳ. ಆದರೆ ಅವನ ಪಾಪಿಬುದ್ಧಿಯ ಚಿಕಿತ್ಸೆ ಮಾಡುವಾಗ ವ್ಯಾಸರು ಒಂದೇ ಶಬ್ದವನ್ನು ಮತ್ತೆ ಮತ್ತೆ ಬಳಸಿದ್ದಾರೆ, "ಮೂರ್ಖ", "ಹುಚ್ಚ" ಎಂಬುದಾಗಿ.

ಬೌದ್ಧಕತೆಗಳಲ್ಲಿ ಬುದ್ಧನು ಶುದ್ಧ ಭಾವನೆಗಳ ಹಾಗೂ ಮಾರನು ಪಾಪ ಭಾವನೆಗಳ ಪ್ರತೀಕನಾಗಿದ್ದಾನೆಂದು ಕಾಣಿಸಿದ್ದಾರೆ. ಆದರೆ ಮಾರನು ಅತ್ಯಂತ ತೀಕ್ಷ್ಣಬುದ್ಧಿಯವನು. ಕಲೆ ಸೌಂದರ್ಯಗಳ ಮರ್ಮಜ್ಞನು. ಜೀವನದಲ್ಲಿಯ ವಿಲಾಸ ಭೋಗದ ತತ್ತ್ವವನ್ನು ಅತಿ ಕಟಾಕ್ಷದಿಂದ ಕಾಪಾಡುವವನು ಮತ್ತು ಸಂವರ್ಧಿಸುವವನು. ಜೀವನದಲ್ಲಿಯ ಉತ್ತೇಜಕತ್ವವೆಂದರೆ ಮಾರ. ದುರ್ಯೋಧನನು ವಿದ್ಯಾಮಂಡಿತ; ಕುಶಲ ಯೋಧ; ಅಪ್ರತಿಮ ಸಾರಥಿ. ಅಲ್ಲದೆ ಒಳ್ಳೆಯ ಕರ್ತೃತ್ವಶಾಲಿಯಾದ ರಾಜ. ಸತ್ತೆಯ ತೇಜಸ್ಸಿನ ಪರೀಕ್ಷಕನೂ, ಆ ತೇಜಸ್ಸು ತನ್ನಲ್ಲಿ ಸ್ಫುರಿಸುತ್ತಿರುವುದಕ್ಕೆ ಈರ್ಷ್ಯೆಪಡುವವನೂ ಆಗಿದ್ದಾನೆ. ಆದರೆ ಸೂಕ್ಷ್ಮಬುದ್ಧಿಯವನಾಗಿರಲಿಲ್ಲ. ಅವನ ವ್ಯಕ್ತಿತ್ವದ ಪದರಗಳನ್ನು ತೆರೆಯುತ್ತ ಹೋದಂತೆ ಅವನಲ್ಲಿ ಮೂರ್ಖತ್ವವೇ ಹಾಸುಹೊಕ್ಕಾಗಿ ತುಂಬಿದ್ದು ಕಂಡುಬರುತ್ತದೆ. ಒಮ್ಮೊಮ್ಮೆ ಅವನ ಮೂರ್ಖತನವು ಹುಚ್ಚಿನ ಸರಹದ್ದಿನ ತನಕ ಮುಟ್ಟುವುದು; ಇವೆಲ್ಲ ಪ್ರಸಂಗಗಳು ಕಣ್ಣೆದುರು ಬಂದದ್ದೇ ಆದರೆ ಒಂದು ಬಗೆಯ ಕನಿಕರವೇ ಅವನ ಬಗೆಗೆ ಉತ್ಪನ್ನವಾಗುತ್ತದೆ. ಅವನ ಬುದ್ಧಿಯು ಹಕ್ಕಿಯ ಹಾರುವಿಕೆಯಂತೆ ಸರಳರೇಖೆಯಲ್ಲಿ ಇರುತ್ತಿತ್ತು ಮತ್ತು ಅದರ ವೇಗವು

ಪ್ರಚಂಡ. ಆದರೆ ಅದರ ದಾರಿಯ ತೆಕ್ಕೆ ಆಕುಂಚಿತ. ಅಲ್ಲಿಯೂ ಅವನ ಬುದ್ಧಿಯು "ಎಲ್ಲವೂ ಬೇಕು, ಎಲ್ಲರದ್ದೂ ಬೇಕು, ಎಂದೆಂದಿಗೂ ಬೇಕು" ಎಂಬ ಭಾವನೆಯಿಂದ ನಿರ್ಬಂಧಿತ. ತರಳ ಬುದ್ಧಿಯ ವಯಸ್ಕನೊಬ್ಬನ ಉದಾಹರಣೆಯೆಂದರೆ ದುರ್ಯೋಧನನದೇ. ತನಗೆ ಬೇಕಾದದ್ದು ಸಿಕ್ಕುವುದಿಲ್ಲ ವೆಂದಾದೊಡನೆ ತರಳನು ಉದ್ದಾಮ ವೃತ್ತಿಯಿಂದ, ಕೈಗೆ ಸಿಕ್ಕಿದ್ದನ್ನೆಲ್ಲ ಹಾಳುಗೆಡಹುತ್ತಾನೆ; ಪೆಟ್ಟೂ ತಿನ್ನುತ್ತಾನೆ; ಆದರೆ ಸೋಲನ್ನು ಅನುಭವಿಸು ವುದಿಲ್ಲ. ಅಂತಹದೇ ಚಿತ್ರ, ದುರ್ಯೋಧನನದು. ಅವನ ಬಾಲಿಶತೆ, ಎರಡು ಮೂರು ಕಡೆ ಬಹಳ ಸ್ಪಷ್ಟವಾಗಿ ಕಂಡುಬರುತ್ತದೆ.

ಪಾಂಡವರು ವನವಾಸಕ್ಕೆ ಹೋಗಿದ್ದರೂ, ಮುಂದೆ ಅವರು ಹಿಂತಿರುಗಿ ಬರುವರು ರಾಜ್ಯವನ್ನು ಪಡೆಯುವರು ಎಂಬ ಹೆದರಿಕೆಯಿಂದ ಅವನಿಗೆ ನೆಮ್ಮದಿಯೇ ಇರುವುದಿಲ್ಲ. ಆತ ಅಳುತ್ತಿದ್ದ, ಬಡಬಡಿಸುತ್ತಿದ್ದ. ಒಮ್ಮೆ ಶಕುನಿಗೆ ಹೇಳುತ್ತಾನೆ – "ಪಾಂಡವರು ಇಂದ್ರಪ್ರಸ್ಥಕ್ಕೆ ಬಂದದ್ದು ಕಂಡುಬಂದರೆ, ನಾನು ಅನ್ನ ತ್ಯಾಗಮಾಡಿ ಪ್ರಾಣಬಿಡುವೆನು; ಇಲ್ಲವೇ ವಿಷಪಾನ ಮಾಡುವೆನು; ಇಲ್ಲವೇ ಅಗ್ನಿಪ್ರವೇಶ ಮಾಡುವೆನು. ಅವರು ತಿರುಗಿ ಬಂದಾರು ಮತ್ತು ಅವರ ಉತ್ಕರ್ಷವಾದೀತು – ಎಂಬುದನ್ನು ನಾನು ಕಲ್ಪನೆಯಲ್ಲಿಯೂ ಸಹಿಸಲಾರೆ" ಎಂಬುದಾಗಿ. ಆಗ ಶಕುನಿಯು ಅವನಿಗೆ ಬಾಯ್ಬಿಟ್ಟು ಹೇಳುತ್ತಾನೆ : "ರಾಜನಾಗಿದ್ದ ನೀನು, ಇದೇನು ಹೀಗೆ ಬಾಲಿಶವಾಗಿ ನಡೆಯುವೆ?" ಎಂದು.

ರಾಜಸೂಯಯಾಗದ ಮೂಲಕ ಪಾಂಡವರ ಅಭ್ಯುದಯವಾದದ್ದನ್ನು ಕಂಡು ಸಿಡಿಮಿಡಿಗೊಂಡು ಉರಿಯುತ್ತಿದ್ದ ದುರ್ಯೋಧನನ ಕಲ್ಪನೆಗೆ ಇಂತಹವೇ ಬಾಲಿಶ ಚಿಗುರುಗಳು ಮೂಡಿದವು. ತನ್ನ ಕಲ್ಪನೆಗಳನ್ನು ಯಾರಿಗಾದರೂ ಹೇಳಿದ ಹೊರತು ಅವನಿಗೆ ತಡೆಯಲಾಗುತ್ತಿರಲಿಲ್ಲ. ಮನಸ್ಸಿನಲ್ಲಿಯೇ ಯೋಚಿಸಿ ಏನಾದರೊಂದು ನಿರ್ಣಯವನ್ನು ಕೈಗೊಳ್ಳುವ ತ್ರಾಣವೇ ಅವನಲ್ಲಿರಲಿಲ್ಲ. ಅಂತೆಯೇ ಅವನ ಬುದ್ಧಿಯು ಇತರರ ಹೇಳಿಕೆಯಂತೆ ನಡೆಯುತ್ತಿತ್ತು. ಆದರೆ ಅಲ್ಲಿಯೂ ಮೋಜಿನ ಅಂಶವೆಂದರೆ, ಆ ಅನ್ಯರ ಸಲಹೆಯು ಅವನ ಕಲ್ಪನೆಗೆ ಸುಸಂಗತವೇ ಆಗಿರಬೇಕು! ಪ್ರತಿಕೂಲವಾದ ಮಾತನ್ನು ಆತ ಕೇಳುವವನೇ ಅಲ್ಲ. ಪಾಂಡವರ ಐಶ್ವರ್ಯದ ಬಗೆಗೆ ವಿಲಕ್ಷಣ ಅಸೂಯೆಯೆನಿಸಿ, ತನ್ನ ರೀತಿಯಲ್ಲಿ ಅವರನ್ನು ಇಲ್ಲವಾಗಿಸುವ ಉಪಾಯವನ್ನು ಅವನು ಹುಡುಕಿಕೊಂಡದ್ದು ಹೀಗೆ. ಪಾಂಡವರಲ್ಲಿ

ಅವರವರೊಳಗೇ ಜಗಳ ಹಚ್ಚಬೇಕು. ಸುಂದರ ಸ್ತ್ರೀಯರ ಪ್ರಲೋಭನೆಯೊಡ್ಡಿ ಅಣ್ಣ ತಮ್ಮಂದಿರನ್ನು ಬೇರೆಯಾಗಿಸಬೇಕು. ಹೊಸ ಸವತಿಯರು ಬಂದೊಡನೆ ದ್ರೌಪದಿಯ ಮನಸ್ಸಿನಲ್ಲಿಯೂ ಪಕ್ಷಪಾತ ಹುಟ್ಟುವುದು; ಅನಂತರ ಅವಳ ಮನಸ್ಸು ಮೆಲ್ಲಮೆಲ್ಲನೆ ಪಾಂಡವರಿಂದ ದೂರವಾಗುವುದು. ಈ ಆಲೋಚನೆಯಲ್ಲಿ ಅವಳ ಬಗೆಗೆ ಅವನಲ್ಲಿ ಯಾವ ವಾಸನೆಯೂ ಇರಲಿಲ್ಲವೆಂಬುದು ವಿಶೇಷ. ಈ ಸರಳಸಾಟಿಯ ಗಣಿತವನ್ನು ಕರ್ಣನು ಕೇಳಿದನು; ಮತ್ತು ದುರ್ಯೋಧನನಿಗೆ ಈ ಯೋಜನೆಯ ಮರುಳುತನವನ್ನು ತೋರಿಸಿಕೊಟ್ಟನು. "ಪಾಂಡವರ ಒಕ್ಕಟ್ಟಿನ ಮೂಲ, ದ್ರೌಪದಿಯೇ ಆಗಿದ್ದಾಳೆ; ಅನೇಕ ಗಂಡಂದಿರು ಇರುವುದು ಹೆಣ್ಣಿಗೆ ಪ್ರಿಯವಾಗಿರುತ್ತದೆ; ದ್ರೌಪದಿಗೆ ಈ ಸಂಧಿ, ಅನಾಯಾಸವಾಗಿ ಸಿಕ್ಕಿದೆ; ಅದನ್ನು ಅವಳು ಬಿಡುವಳೇ? ಪತಿಗಳು ನಿರ್ಧನರಾಗಿದ್ದಾಗಲೂ ಅವಳು ಅವರ ಮೇಲೆ ಪ್ರೀತಿ ತೋರಿಸುತ್ತಿದ್ದಳು ಎಂದಾಗ ವೈಭವದಲ್ಲಿ ಅವಳು ಅವರನ್ನು ಬಿಡುತ್ತಾಳೆಯೇ?" ಎನ್ನುತ್ತಾನೆ ಕರ್ಣ.

ಭೀಷ್ಮ, ದ್ರೋಣ, ಅಶ್ವತ್ಥಾಮ, ವಿದುರ ಮುಂತಾದವರ ಮಾತನ್ನು ಮತ್ತು ಪ್ರತ್ಯಕ್ಷ ತಂದೆಯ ಕಿವಿಹಿಂಡುವ ಮಾತುಗಳನ್ನು, ದುರ್ಯೋಧನನು ಲೆಕ್ಕಿಸಲಿಲ್ಲ. ಆತ ಬಗ್ಗುವುದು ಕೇವಲ ಕರ್ಣನ ಇದಿರು. ಪಾಂಡವರಲ್ಲಿ ಯಾರು ಯಾರು ದೊಡ್ಡವರೋ, ಯಾರು ಯಾರು ತೇಜಸ್ವಿಗಳೋ, ಯಾರು ಯಾರು ಪರಾಕ್ರಮಭರಿತರೋ ಅವರೆಲ್ಲ ಒಬ್ಬ ಕರ್ಣನಲ್ಲಿಯೇ ತನ್ನ ಪಕ್ಷಕ್ಕೆ ಇದ್ದಾರೆ ಎಂಬುದು ಚಿಕ್ಕಂದಿನಿಂದಲೇ ಅವನಿಗೆ ಮನದಟ್ಟಾಗಿತ್ತು.

ಅವನ ಸ್ವಭಾವವು ಇಷ್ಟು ಏಕಮುಖಿ, ಉದ್ದಾಮ, ಮತ್ಸರಿ ಮತ್ತು ಸುಖವಿದ್ದಾಗಲೂ ಅದು ತಾಳಬಹುದೇ ಉಳಿಯಬಹುದೇ ಎಂಬ ಚಿಂತೆಯಲ್ಲಿ ಬೀಳುವಷ್ಟು ಕಾತರವಾದದ್ದು ಹೇಗೆ? ಈ ಪ್ರಶ್ನೆಯನ್ನು ಅನುರೋಧಿಸುವಾಗ ಅವನ ವ್ಯಕ್ತಿತ್ವವು, ಬಾಲಿಶವೂ ಸಾದಾಸರಳವೂ ಆಗಿರಲಿಲ್ಲವೆಂಬುದು ಕಂಡುಬರುತ್ತದೆ. ಅವನ ವ್ಯಕ್ತಿತ್ವದಲ್ಲಿ ಅನೇಕ ವ್ಯಕ್ತಿಗಳು ಬೆರೆತುಹೋದದ್ದು ನನಗೆ ಕಾಣುತ್ತದೆ. ಹೆಚ್ಚೇನು? ಈ ವ್ಯಕ್ತಿತ್ವಗಳ ನಿರ್ಮಿತಿಯೆಂದರೇ ದುರ್ಯೋಧನ. ಎರಡು ವೃದ್ಧ ಊನಮನಸ್ಸುಗಳು, ಎರಡು ಬಾಲ ಮನಸ್ಸುಗಳು; ಧೃತರಾಷ್ಟ್ರ ಗಾಂಧಾರಿಯರ ಊನಮನಸ್ಸುಗಳು; ಅವನ್ನು ಯಾವಾಗಲೂ ಹೆದರಿಸುವ, ಕೆರಳಿಸುವ ಭೀಮನ ಅರೆತರಳ ಹಾಗೂ ಅರೆತರುಣ ಮನಸ್ಸು – ಇವನ್ನು ದುರ್ಯೋಧನನ ವ್ಯಕ್ತಿತ್ವದಿಂದ ಬೇರ್ಪಡಿಸಲು

ಬರುವಂತಿಲ್ಲ. ನಾಲ್ಕನೆಯದು ಬಾಲಮನಸ್ಸು; ಅವನದೇ ಸ್ವಂತದ್ದು. ಇದು ಆರಂಭದಲ್ಲಿ ಭೀಮನ ಬಾಲಮನಸ್ಸಿಗೆ ಸರ್ವಸಮಾಂತರವಾಗಿತ್ತು. ಆದರೆ ಭೀಮನು ಬೆಳೆಯುತ್ತಿದ್ದ; ದುರ್ಯೋಧನನು ಮನಸ್ಸಿನಿಂದ ಬಹಳಷ್ಟು ಬೆಳೆಯಲಾರದವನಾದನು. ಮುದ್ದುಗೆಡಿಸಿದ ಮಕ್ಕಳು ಎಂದೂ ಬೆಳೆ ಯುವುದಿಲ್ಲ. ಆ ರೀತಿ ಆತನು ಮನಸ್ಸಿನಿಂದ ತರಳನೇ ಆಗಿ ಉಳಿದನು. ಅವನ ಬೆಳವಣಿಗೆಯನ್ನು ಅವನ ತಂದೆತಾಯಿಗಳೇ ತಡೆದರು. ಲೋಭಕ್ಕೆ ಒಳಗಾದ ಮಂದಿ, ದೂರದ ದೃಶ್ಯ ನೋಡಲಾರರು.

ಧೃತರಾಷ್ಟ್ರ ಗಾಂಧಾರಿಯರು ದುರ್ಯೋಧನನ ನಂತರ ಕೆಲವು ವರ್ಷಗಳ ಮೇಲೆ ನಿಧನ ಹೊಂದಿದರು. ಆದರೆ ಅವರೀರ್ವರೂ ಪೂರ್ಣವಾಗಿ ಎಂದೂ ಬದುಕಲೇ ಇಲ್ಲವೆಂದು ನನಗೆ ಅನಿಸುತ್ತದೆ. ಅಪೂರ್ಣ ವ್ಯಕ್ತಿತ್ವವೂ ನಡೆದೀತು; ಪೂರ್ಣವ್ಯಕ್ತಿತ್ವ ಯಾರದಿದೆ? ಆದರೆ ಇವರ ವ್ಯಕ್ತಿತ್ವಗಳು ವಿಷಮತೆಯಿಂದಲೇ ಭಾರಾಕ್ರಾಂತವಾಗಿದ್ದವು, ಅತಿ ದುರ್ಬಲವಾಗಿದ್ದವು. ಸ್ವೈರವಾಗಿ ಅಲೆದಾಡುವ ಅವರ ಮನಸ್ಸಿನಲ್ಲಿ ಏನೇ ಬಂದರೂ ಅದು ಎಂದೂ ಆಳಕ್ಕೆ ನಾಟಲು ಶಕ್ಯವಾಗಲಿಲ್ಲ. ಗಾಳಿಗೆ ತರಗೆಲೆ ಹಾರುವಂತೆ ಅವರ ವಿಚಾರಗಳು ಅತ್ತಿತ್ತ ಹಾರಾಡುತ್ತಿದ್ದವು. ಅತಿ ಆಳವಾಗಿ ಅವರ ಮನಸ್ಸಿನಲ್ಲಿ ತಳವೂರಿದ್ದು ಒಂದೇ; ಅದೆಂದರೆ, ವಾತ್ಸಲ್ಯ. ಆದರೆ ಈ ವಾತ್ಸಲ್ಯವನ್ನು ಸಂಭ್ರಮವು ಬಾಧಿಸಿತ್ತು. ಕುಂತಿಯ ಪ್ರೇಮವೊಂದೇ, ಪಾಂಡವರ ಬದುಕಿಗೆ, ಪರಾಕ್ರಮಕ್ಕೆ ಆಧಾರ ವಾಗಿತ್ತು. ದುರ್ಯೋಧನನ ಬಗೆಗೆ ಹಾಗಾಗಲಿಲ್ಲ. ಅವನ ಪಾಲಿಗೆ, ತಾಯ್ತಂದೆಗಳ ಪ್ರೇಮವೆಂಬುದು, ನಿತ್ಯದ, ಬೇಡಿದಾಗ ಸಹಜವಾಗಿ ಸಿಕ್ಕುವ, ಅಂತೆಯೇ ವಿಶೇಷವೇನೂ ಅನಿಸದ ವಸ್ತುವಾಯಿತು. ಒಂದು ರೀತಿ ಕುಂತಿಯ ಕರ್ಣನನ್ನು ಕುರಿತ, ಕದ್ದು ಬಚ್ಚಿಟ್ಟ ವಾತ್ಸಲ್ಯ ಮತ್ತು ಗಾಂಧಾರಿಯ ಪ್ರಕಟವಾದರೂ, ಸದಾ ಸಂಭ್ರಾಂತ ವಾತ್ಸಲ್ಯ – ಇವೆರಡರಲ್ಲಿಯೂ ಒಂದೇ ಪ್ರಕಾರದ ವಿಷಣ್ಣತೆಯ ಭಾವವು ಕಟ್ಟಿತುಂಬಿರುವುದು ನನಗೆ ಕಂಡುಬರುತ್ತದೆ. ಕುಂತಿಯು ಕರ್ಣನ ಬಗೆಗಿನ ತನ್ನ ಪ್ರೇಮವನ್ನು ಪ್ರಕಟವಾಗಿ ಯಾವಾಗ ವ್ಯಕ್ತಮಾಡಿದಳೋ, ಆಗ ಅದು ವ್ಯಾವಹಾರಿಕ ದೃಷ್ಟಿಯಿಂದ ನಿರುಪಯೋಗಿ ಯಾಗಿತ್ತು. ಗಾಂಧಾರಿಯ ವಾತ್ಸಲ್ಯವು, ಮಗನು ಜೀವಂತನಾಗಿರುವಾಗಲೂ ಅಪೂರ್ಣವಾಗಿತ್ತು ದುರ್ಬಲವಾಗಿತ್ತು. ಚಿಂತೆಯಿಂದ, ಲಜ್ಜೆಯಿಂದ ಭಾರಾಕ್ರಾಂತವಾಗಿತ್ತು. ಅವಳ ಮನಸ್ಸು ಬೇಸರಗೊಂಡಿತ್ತು. ಧೃತರಾಷ್ಟ್ರನಿಗೂ ನಡುನಡುವೆ ಈ ಬೇಸರದ ವೈರಾಗ್ಯದ ಉಮ್ಮಳ ಬರುತ್ತಿತ್ತು. ಕೆಲವುಸಲ ಈ

ವೈರಾಗ್ಯವು ಕೃತಕವೂ ಆಗಿರುತ್ತಿತ್ತು. ಆದರೆ ಗಾಂಧಾರಿಯ ನ್ಯಾಯನಿಷ್ಠುರತೆಗೆ ಅದು ಸಾಟಿಯಿದ್ದಿಲ್ಲ. ಉತ್ತರವಯಸ್ಸಿನಲ್ಲಿ ಅವಳಿಗೆ ಅರಿವಾದದ್ದು, ಅವನಿಗೆ ಅರಿವಾಗಲಿಲ್ಲವೆಂದಲ್ಲ; ಅವನ ಭಾವನೆಗಳಿಗೆ ಧೃಡತೆಯೇ ಇರಲಿಲ್ಲ. ಹೇಗೆ ಇರಬೇಕು? ಊನ ನಿಯತಿಯಿಂದ ಆವೃತ ಆತ. ನ್ಯೂನ ಭಾವನೆಯಿಂದ ಪೂರ್ತಿ ನುಂಗಲ್ಪಟ್ಟವನು. ಇದೇ ನ್ಯೂನ ಭಾವನೆಯ ವಾರಸತ್ವ, ತುಸು ಬೇರೆ ಸ್ವರೂಪದಲ್ಲಿ ದುರ್ಯೋಧನನ ಪಾಲಿಗೆ ಬಂದಿತ್ತು.

ತಾನು ಹಿರಿಯನಾದರೂ ಕುರುಡನಾದುದರಿಂದ ರಾಜ್ಯಕ್ಕೆ ಒಡೆಯ ನಾಗಲಾರೆನೆಂಬ ಕೊರಗು, ಧೃತರಾಷ್ಟ್ರನ ಮನದಾಳದಲ್ಲಿ ಮನೆಮಾಡಿ ಕೊಂಡಿತ್ತು. ವಿದುರನು ತನ್ನ ಹೀನ ಜನ್ಮವನ್ನು ಸತ್ತಾಹೀನತೆಯನ್ನು ಒಂದು ಭೂಷಣದಂತೆ ಶೋಭೆಗೊಳಿಸಿದನು. ತಾನು ರಾಜ್ಯವೈಭವವನ್ನು ಸ್ವೇಚ್ಛೆ ಯಿಂದ ತ್ಯಾಗಮಾಡಿದೆನೆಂಬ ನೆನಪು ಕೂಡ ಭೀಷ್ಮನಿಗಿರಲಿಲ್ಲ. "ನೀವು ನೀಡಿದ್ದನ್ನು ನಾನು ಸ್ವೀಕರಿಸುವೆನು; ತಂದೆಯ ಸಂತತಿಗೋಸ್ಕರ ಬೇಕಾದ ದಿವ್ಯವನ್ನು ಮಾಡುವೆನು" ಎಂಬ ವೃತ್ತಿಯ ಮೂಲಕ ಭೀಷ್ಮನಿಗೆ ಚಿತ್ತವೃತ್ತಿಯ ಸ್ಥೈರ್ಯ ಬಂತು. ಆದರೆ ಧೃತರಾಷ್ಟ್ರನಿಗೆ ಇದು ಸಾಧಿಸಲಿಲ್ಲ. ಅವನ ಕೊರಗು ಸದಾ, ನಾನಾ ರೂಪಗಳನ್ನು, ನಾನಾ ತಿರುವುಗಳನ್ನು ಪಡೆಯುತ್ತ ಉಳಿಯಿತು. ಅವನ ಭಾವನಾವಿವಶತೆ ಮಹಾಭಾರತದ ಇತರ ಯಾವುದೇ ವ್ಯಕ್ತಿಯದಕ್ಕಿಂತ ಹೆಚ್ಚು ಪ್ರಬಲವಾಗಿತ್ತು. ಧೃತರಾಷ್ಟ್ರನು ಪ್ರೇಮಮಯಿಯಾಗಿದ್ದನು. ಅಂಧರಿಗೆ ಪರಾವಲಂಬನದ ಮೂಲಕ ಇತರರನ್ನು ನಂಬಬೇಕಾಗುತ್ತದೆ. ಗತಿಯಿಲ್ಲದವನು ಅಸಹಾಯನಾಗಬೇಕಾಗುತ್ತದೆ. ಹಾಗೆಯೇ ಧೃತರಾಷ್ಟ್ರನೂ ನಂಬುತ್ತಿದ್ದನು. ಆದರೆ ಕುರುಡರಲ್ಲಿ ಅಪನಂಬಿಕೆ, ಸಂಶಯ ಕೂಡ ತೀವ್ರವಾಗಿರುತ್ತದೆ. ಅವರಿಗೆ ಸಂರಕ್ಷಣೆಯ ಅಗತ್ಯ ಸತತವಾಗಿರುತ್ತದೆ. ಆದ್ದರಿಂದ ಆ ಧಾರೆ ಸದಾ ಹರಿತವಾಗಿಯೇ ಇರುತ್ತದೆ. ಕೆಲವೊಮ್ಮೆ ಅದು ಮೋಸದ ರೂಪವನ್ನು ತಾಳುತ್ತದೆ. ಅಂಧ ಧೃತರಾಷ್ಟ್ರನು ಹೀಗೆಯೇ ಮೋಸಗಾರಿಕೆ ಮಾಡಲು ನೋಡುತ್ತಿದ್ದಾಗ, ಆ ವಿಕಲಾಂಗನ ನುಡಿಗಳನ್ನು ಸತ್ಯವೆಂದೇ ಭಾವಿಸ ಲಾಗುತ್ತದೆ. ಆದರೆ, ವ್ಯವಹಾರದಲ್ಲಿ ಮಾತ್ರ, ತನ್ನ ವೈಗುಣ್ಯದ ಲಾಭವನ್ನು ಪಡೆದುಕೊಳ್ಳುವ ಚಟ ಅಥವಾ ವಾಡಿಕೆ ಬಿದ್ದೊಡನೆ ವಿಕಲಾಂಗನು ಧೂರ್ತ ಹೊಂಚುಗಾರಿಕೆಯಿಂದ ಆ ದೌರ್ಬಲ್ಯವನ್ನು ಲಾಭದಾಯಕವನ್ನಾಗಿ ಮಾಡಲು ನೋಡುತ್ತಾನೆ. ಧೃತರಾಷ್ಟ್ರನದೂ ಹಾಗೆಯೇ ಆಯಿತು. "ನಾನು ರಾಜ್ಯದಿಂದ ವಂಚಿತನಾದೆ; ನನ್ನ ಮಕ್ಕಳೂ ಹಾಗೆಯೇ ಆಗುವರು" ಎಂಬ ಶಂಕೆಯಿಂದ

ಅವನು ಹಗಲಿರುಳೂ ಮನದಲ್ಲಿ ತ್ರಸ್ತನಾಗಿರುತ್ತಿದ್ದನು. ಅದರಲ್ಲಿ ಇನ್ನೊಂದು ಸಂಗತಿ ಸೇರಿಕೊಂಡಿತು; ಈ ಮನುಷ್ಯ, ಪಾಂಡುವಿನ ಸಾವಿನಿಂದಾಗಿ ನಿಜವಾಗಿಯೂ ರಾಜಪದದ ದುರ್ಲಭವಾದ ಸುಖವನ್ನು ಪ್ರತ್ಯಕ್ಷ ಭೋಗಿಸಲು ಶಕ್ಯನಾದನು. ಈ ಭೋಗವು ಸಿಗದಿದ್ದರೆ, ಬಹುಶಃ ಅವನು ಭೀಷ್ಮಾದಿಗಳ ಸಲಹೆಯನ್ನೇ ಪ್ರಮಾಣವೆಂದು ಮನ್ನಿಸಬಹುದಿತ್ತು. ಆದರೆ ಒಮ್ಮೆ ದುಷ್ಪ್ರಾಪ್ಯವಾದ ಸುಖವು ಲಭಿಸಿದ ಕೂಡಲೇ ಅದನ್ನು ಬಿಟ್ಟು ಕೊಡುವುದು ಕಠಿಣವಾಗುತ್ತದೆ. ಭೀಷ್ಮನ ತ್ಯಾಗದ ಮೋಹಿನಿಯು ಧೃತರಾಷ್ಟ್ರನ ಮನಸ್ಸಿನಿಂದ ಎಂದೋ ಮಾಯವಾಗಿತ್ತು. ಹೊರನೋಟಕ್ಕೆ ಅವನು ಅವರಿಗೆ ಆದರ ತೋರಿಸಿದರೂ ಮನಸ್ಸಿನಿಂದಲೂ ಅವನ ಭಾವನೆ, ಇವರು (ಭೀಷ್ಮಾದಿಗಳು) ನಮ್ಮಿಂದ ಪೋಷಿತರು ಎಂಬುದಾಗಿಯೇ ಇತ್ತು. ಇದೇ ವೃತ್ತಿಯ ಅನುಕರಣ ವನ್ನು ದುರ್ಯೋಧನನು ಮಾಡಿದನು. ಹಾಗೆ ನೋಡಿದರೆ, ದುರ್ಯೋಧನನು ಧೃತರಾಷ್ಟ್ರನ ಸುಪ್ತ ಆಕಾಂಕ್ಷೆಗಳ ಪ್ರಕಟ ಕರ್ತೃತ್ವದ ರೂಪಾಂತರನು. ದುರ್ಯೋಧನನು ಗಾಂಧಾರಿಯಿಂದ ಅನ್ಯೂನ ದೇಹವನ್ನು ಪಡೆದನು. ಆದರೆ ಮನಸ್ಸು ಪಡೆದದ್ದು ಮಾತ್ರ ತಂದೆಯಿಂದ. ಕ್ಷಣಕ್ಷಣಕ್ಕೂ ಸಂಶಯದಿಂದ ಪೀಡಿತವಾಗುವಂತಹ ಮನಸ್ಸು ಅದು. ಧೃತರಾಷ್ಟ್ರನ ಮೇಲಿದ್ದ ಭೀಷ್ಮಾದಿಗಳ ಹಿಡಿತವು, ಪಾಂಡುವಿನ ಸಾವಿನ ನಂತರ ಸಡಿಲವಾಯಿತು. ಆದರೆ ದುರ್ಯೋಧನನ ಮೇಲೆ ಧೃತರಾಷ್ಟ್ರನ ಹಿಡಿತವು ಎಂದೂ ಇರಲಿಲ್ಲ. ಕೇಳಿಕೆಯ ಸುದ್ದಿಗಳನ್ನು ಪ್ರಮಾಣವೆಂದು ಭಾವಿಸುವ ಧೃತರಾಷ್ಟ್ರನು ಪುತ್ರಮೋಹದಿಂದ ಪ್ರಕಟವಾಗಿಯೇ ಪಕ್ಷಪಾತಿಯಾದನು. "ಪಾಂಡವರು ನನಗೆ ಮಕ್ಕಳಿದ್ದಂತೆ; ಮಕ್ಕಳಿಗಿಂತಲೂ ಹೆಚ್ಚು ಪ್ರಿಯರು" ಎಂದು ಬಾಯಿಯಲ್ಲಿ ಸದಾ, ಮೊದಲಿಂದ ಕೊನೆಯವರೆಗೂ ಅವನು ಹೇಳುತ್ತಿದ್ದನು. ಆದರೆ ವಸ್ತುಸ್ಥಿತಿಯು ಹೇಗಿತ್ತೆಂದರೆ, ಪಾಂಡವರ ಬಗೆಗೆ ಅವನ ಮನಸ್ಸಿನಲ್ಲಿ ತಾವೇ ಇದ್ದಿಲ್ಲ. ಅದ್ದರಿಂದಲೆ ಅವನಿಗೆ ಈ ಮಾತನ್ನು ಆಗಿಂದಾಗ್ಗೆ ಹೇಳಬೇಕಾಗುತ್ತಿತ್ತು.

ಅವನ ಈ ಪಕ್ಷಪಾತವು ಈ ಮಕ್ಕಳ ಚಿಕ್ಕಂದಿನಿಂದಲೇ ಆರಂಭವಾಯಿತು. ಪಾಂಡುವಿನ ಮರಣಾನಂತರ ಪಾಂಡವರು ಹಸ್ತಿನಾಪುರಿಗೆ ಬಂದರು. ಆ ತನಕ ಈ ಎರಡೂ ಬದಿಯ ಮಕ್ಕಳಿಗೆ ಒಬ್ಬರೊಬ್ಬರನ್ನು ಕುರಿತು ಏನೂ ಮಾಹಿತಿ ಇದ್ದಿಲ್ಲ; ಮತ್ತು ಮುಂದೆ, ಧೃತರಾಷ್ಟ್ರನ ಮನಸ್ಸು ಇಬ್ಬಗೆಯಾಗಿದೆಯೆಂಬು ದನ್ನು ಗುರುತಿಸಲಾರದಷ್ಟೂ ಕುಂತಿಯು ಭೋಳೆ ಇದ್ದಿಲ್ಲ. ವಿಧವೆಯಾದ ತಾಯಿ, ಹದ್ದಿಗಿಂತ ಹೆಚ್ಚು ಜಾಗರೂಕಳಾಗಿರುತ್ತಾಳೆ. ಪ್ರಸಂಗ ಬಂದರೆ

ಹಿಂಸ್ರವಾಗುತ್ತಾಳೆ. ತನ್ನ ರಕ್ಷಣೆಗಾಗಿ ಅವಶ್ಯವಿರುವ ಈ ಹಿಂಸ್ರವೃತ್ತಿಯನ್ನು ಭೀಮನ ರೂಪದಲ್ಲಿ ಕುಂತಿಯು ಜೋಪಾನಮಾಡಿದಳು. ತೀರ ಯಾರಿಗೂ ಲಕ್ಷ್ಯಕ್ಕೆ ಬಾರದ ರೀತಿಯಲ್ಲಿ ಧೃತರಾಷ್ಟ್ರನಲ್ಲಿಯೂ ಅದೇ ಧೋರಣೆ ಕಂಡುಬರುತ್ತದೆ. ಪಾಂಡವರಲ್ಲಿಯೇ ಭೀಮನು ಎಲ್ಲರಿಗಿಂತ ತುಂಟ, ಉಡಾಳ, ಶಕ್ತಿವಂತ, ಅವಿವೇಕಿ, ಹೊಟ್ಟೆಬಾಕ, ಕೋಪಿಷ್ಠ ಮತ್ತು ಅಷ್ಟೇ ಮುಗ್ಧ, ಅಮಾಯಕ. ಮಾಡಿದರೆ ಜೀವಾಳದ ಪ್ರೀತಿ ಮಾಡುವನು; ಇಲ್ಲದಿದ್ದಲ್ಲಿ ಪ್ರೀತಿಯ ಸೋಗೂ ಕಾಣಿಸದು. ಯುಧಿಷ್ಠಿರ ಅರ್ಜುನರಿಬ್ಬರೂ ಶಾಂತರು; ಆದ್ದರಿಂದಲೆ, ಪಾಂಡವರ ಚಿಕ್ಕಂದಿನ ಮುಖಂಡ ಭೀಮನಾದನು. "ನೀನು ಕೌರವರ ಮೇಲೆ ಕಾಲು ಕೆರೆಯಬೇಡ" ಎಂದು ಯಾರೂ ಅವನನ್ನು ದಬಾಯಿಸಲಿಲ್ಲ. ಧಾಂಡಿಗ ಹುಡುಗ ಇತರ ಮಕ್ಕಳ ನಡುವೆಯೂ ಕೌತುಕದ ವಿಷಯವಾಗುತ್ತಾನೆ. ಭೀಮನಿಗೂ ಹಾಗೆಯೇ ಆಯಿತು. ಕೌರವ ಪಾಂಡವರ ಪ್ರತ್ಯೇಕ ಪಕ್ಷಗಳೇ ಏರ್ಪಟ್ಟವು. ಈ ತನಕ ಕೌರವರೇ ಎಲ್ಲರ ಕೌತುಕದ ವಿಷಯವಾಗಿದ್ದರು. ಈಗ ಭೀಮನ ಮಾತು ಮುಂದಾಯಿತು. ಎಲ್ಲರ ಬಾಯಲ್ಲಿ ಅವನದೇ ಸುದ್ದಿ. ಒಮ್ಮೆ ಭೀಮನು ಕೌರವರನ್ನು ನೀರಿನಲ್ಲಿ ಮುಳುಗಿಸುವುದು, ಅವರು ಗಾಬರಿಯಾಗಿ ಅರೆಸತ್ತಂತೆ ಆದೊಡನೆ ಅವರನ್ನು ಬಿಟ್ಟುಕೊಟ್ಟು ನಗುವುದು. ಅವರು ಮರವನ್ನೇರಿದರೆ, ಮರವನ್ನು ಗಡಗಡ ಅಲ್ಲಾಡಿಸಿ ಅವರನ್ನು ಪಟಪಟನೆ ಕೆಳಗೆ ಕೆಡಹುವುದು; ಓಟದಲ್ಲಿ ಆಟದಲ್ಲಿ ಅವರನ್ನು ಯಾವಾಗಲೂ ಸೋಲಿಸುವುದು – ಈ ಮೂಲಕ "ನೀನು ನಾನು" ಎಂಬ ವಾತಾವರಣವು ಅರಮನೆಯಲ್ಲಿ ಉಂಟಾಯಿತು.

ದುರ್ಯೋಧನನು ಇದೇ ಅನುಭವದ ಮೂಲಕ, ಈ ಹೊಸತಾಗಿ ಬಂದ ಮಕ್ಕಳ ಅತಿಕ್ರಮಣದ ಮೂಲಕ, ಮುಂದೆ ಇವರೇ ರಾಜ್ಯಕ್ಕೆ ಒಡೆಯರಾಗುವರೇ ಎಂಬ ಚಿಂತೆಯ ಮೂಲಕ ಚಿಕ್ಕಂದಿನಲ್ಲಿಯೇ ಭೀಮನಿಗೆ ಪ್ರತಿಸ್ಪರ್ಧಿಯಾದನು. ಭೀಮನಿಗಿಂತ ಆತ ದುರ್ಬಲ. ಆದರೆ ದುರ್ಬಲರ ವೈರವು ಅವರನ್ನು ಅತಿಕ್ರೂರಿಗಳನ್ನಾಗಿ ಕಪಟಿಗಳನ್ನಾಗಿ ಮಾಡುತ್ತದೆ. ಇದೇ ವೃತ್ತಿ ದುರ್ಯೋಧನನಲ್ಲೂ ಸಂಚರಿಸಿತು. ಈ ವ್ಯಕ್ತಿಗೆ ಅಂಧಪಿತನ ಮನಃಪೂರ್ವಕ ಬೆಂಬಲವಿದೆಯೆಂಬುದನ್ನು ಅರಿಯದಷ್ಟು ಆತ ಮೂಢನಾಗಿರಲಿಲ್ಲ. ಮಕ್ಕಳ ಜಗಳಗಳಿಗೆ ಮಿತಿಯಿರುತ್ತದೆ. ಹೀಗೆ, ಇತರರಂತೆ, ಧೃತರಾಷ್ಟ್ರನಿಗೂ ಅನಿಸುತ್ತಿತ್ತು. ಇದೂ ಅಲ್ಲದೆ, ತಾನು ಹಲವಾರು ವರ್ಷ ಆಳಿದ್ದರಿಂದ ಪಾಂಡವರಿಗೆ ರಾಜ್ಯ ದೊರೆತರೂ, ತಮಗೆ ಭೀಷ್ಮಾದಿಕರ ಕೃಪೆಯಿಂದ ಅರ್ಧಪಾಲು ಸಿಕ್ಕೇ ಸಿಗುತ್ತದೆಯೆಂಬುದು

ಗೊತ್ತಿದ್ದುದರಿಂದ ಅವನು ಒಂದು ರೀತಿ ಸಂತುಷ್ಟನಾಗಿದ್ದನು. ಆದರೆ ಯಾವಾಗ ದುರ್ಯೋಧನನು ಭೀಮನಿಗೆ ವಿಷಹಾಕಿ ನದಿಯಲ್ಲಿ ಎಸೆದನೋ ಆಗ ಕಠೋರ ವೈರದ ದರ್ಶನವು ಎಲ್ಲ ಹಿರಿಯರಿಗೆ ಆಯಿತು. ಪಾಂಡವರು ಕುಂತಿಯೊಂದಿಗೆ ದೂರ ತೆರಳಿಹೋದರು. ಆದರೂ ದುರ್ಯೋಧನನು ಅರಗಿನ ಮನೆಯಲ್ಲಿ ಅವರನ್ನು ಸುಟ್ಟುಹಾಕುವ ಸಂಚು ಮಾಡಿದನು. ಸ್ವಲ್ಪದರಲ್ಲಿ ಅದು ಹುಸಿಯಾಯಿತು. ಈ ಲಾಕ್ಷಾಗೃಹವನ್ನು ಕೌರವ ಪಾಂಡವರ ವೈರದ ಪ್ರತೀಕವೆಂದೇ ತಿಳಿಯಬೇಕು. ಅನಂತರ ಪಾಂಡವರ ವಿವಾಹ, ಇಂದ್ರಪ್ರಸ್ಥಕ್ಕೆ ಅವರ ಆಗಮನ, ಅವರ ರಾಜ್ಯದ ಆರಂಭ, ರಾಜಸೂಯಯಾಗ, ಮಯಸಭೆ – ಈ ಎಲ್ಲ ಸಂಗತಿಗಳು ಅವರ ಅಜೇಯ ಪರಾಕ್ರಮದ ಮತ್ತು ಒಕ್ಕಟ್ಟಿನ, ಸಾಕ್ಷಿಯನ್ನು ನೀಡಲು ಸಾಕು.

ಲಾಕ್ಷಾಗೃಹದ ಯೋಜನೆ ಹುಸಿಯಾಯಿತು; ದುರ್ಯೋಧನನ ಮನಸ್ಸು ನೆಲೆಗೆಟ್ಟಿತು. ತಂದೆಯಂತೆ, ಅರ್ಧರಾಜ್ಯದಿಂದ ಅವನಿಗೆ ಸಮಾಧಾನ ವಾಗುವಂತಿದ್ದಿಲ್ಲ; ಮಯಸಭೆಯೊಳಗಿನ ಅಪಮಾನದಿಂದಂತೂ ಆತ ಉರಿದೆದ್ದ. ದ್ರೌಪದಿಯು ಅವನನ್ನು ನೋಡಿ ನಕ್ಕಳು; ಭೀಮನೂ ನಕ್ಕನು; "ಧೃತರಾಷ್ಟ್ರ ಪುತ್ರನೇ ಬಾಗಿಲು ಇಲ್ಲಿದೆ ನೋಡು" ಎಂದು ಹೇಳಿ, ನಗುತ್ತ, ಮಯಸಭೆಯಲ್ಲಿ ಗೋಡೆ ಎಲ್ಲಿ ಬಾಗಿಲು ಎಲ್ಲಿ ಎಂಬುದನ್ನು ಅವನಿಗೆ ತೋರಿಸಿದನು. ಇದರಲ್ಲಿ ಅವನನ್ನು ಕುರಿತ ಪರಿಹಾಸದೊಡನೆ, ಅವನ ತಂದೆಯನ್ನು ಕುರಿತಾದ ವ್ಯಂಗ್ಯವೂ ಇತ್ತು. ಆ ವೇಳೆಗೆ, ಕುಂತಿಯಾಗಲಿ, ಹಿರಿಯ ಪಾಂಡವರಾಗಲಿ, ಹೆಚ್ಚೇನು ಕೃಷ್ಣ ಕೂಡ, ದುರ್ಯೋಧನನಿಗಾದ ಅಪಮಾನ ವನ್ನು ದುರ್ಲಕ್ಷಿಸಿದರು. ಲಾಕ್ಷಾಗೃಹವನ್ನು ಮರೆಯುವುದು ಅವರಿಗೆ ಸಾಧ್ಯ ವಾಗಲಿಲ್ಲ. ಆದರೆ, ಆ ಮೂಲಕ ದುರ್ಯೋಧನನ ಬಾಲ್ಯವೈರ ಮಾತ್ರ ಉಕ್ಕಿ ಬಂದಿತು. ಈಗ ಬೆಂಕಿ ಇಕ್ಕುವುದು, ವಿಷ ಮೊದಲಾದವಕ್ಕಿಂತ ಮಿಗಿಲಾದ ಉಪಾಯವನ್ನು ಅವನು ಯೋಜಿಸಿದ; ಪಾಂಡವರ ಸಂಪತ್ತನ್ನು ದ್ರೌಪದಿಯ ಸಹಿತವಾಗಿ ಹರಣಮಾಡುವ ಶಕುನಿಯಿಂದ ಸೂಚಿತವಾದ ದ್ಯೂತ ಮಾರ್ಗವನ್ನು ಅವಲಂಬಿಸಿದ. ಶಕುನಿಯ ಕಪಟವು ಅವನಿಗೆ ಮೆಚ್ಚುಗೆ ಯಾಗುವಂತಹದೇ ಆಗಿತ್ತು.

ದ್ರೌಪದಿಯ ವಿಡಂಬನೆ ಮಾಡುವಾಗ ದುರ್ಯೋಧನ, ತನ್ನ ತೊಡೆಯನ್ನು ಅವಳಿಗೆ ತೋರಿಸಿದನಾದರೂ ಕೀಚಕನಂತೆ ಅವಳ ಬಗೆಗೆ ಅವನಿಗೆ ಕಾಮವಾಸನೆಯಿರಲಿಲ್ಲ; ಅವಳ ಬಗೆಗೆ ದ್ವೇಷವೇ ಇತ್ತು. ಆ ದ್ವೇಷದ ಪರಮಾವಧಿಯು ಅವಳನ್ನು 'ದಾಸಿ'ಯೆಂದು ಹೀನರೀತಿಯಲ್ಲಿ ನಡೆಯಿಸಿ ಕೊಳ್ಳುವುದರಲ್ಲಿದೆಯೆಂಬುದನ್ನೆ ಆತ ಮನಗಂಡನು. ಮಯಸಭೆಯಲ್ಲಾದ ಅಪಮಾನದ ಸೇಡು ತೀರಿಸಿಕೊಂಡನು. ಆ ಸಮಯದಲ್ಲಿ ಅವನ ಉದ್ದಾಮ ವೈರವೃತ್ತಿಗೆ ಮತ್ತು ಅಶಿಷ್ಟತನಕ್ಕೆ, ಎಲ್ಲರಿಗೂ ಮಿಗಿಲಾಗಿ ಯಾರಾದರೂ ವಿರೋಧವನ್ನು ವ್ಯಕ್ತಪಡಿಸಿದ್ದರೆ, ಅದು ವಿಕರ್ಣನೇ. ಕಟುವಾದ ಶಬ್ದಗಳಲ್ಲಿ ಆತ, ಅಣ್ಣನ ಕಿವಿಹಿಂಡಿದ, ಭೀಮನು ಯುಧಿಷ್ಠಿರನಿಗೆ ಮಾಡಿದಂತೆ. ಧೃತರಾಷ್ಟ್ರನಿಗೆ, ದ್ರೌಪದಿಯ ಪ್ರಶ್ನೆಗಳಿಗೆ ಉತ್ತರಕೊಡಲು ಹಚ್ಚಿ, ಅವಳಿಗೆ ಮೂರು ವರಗಳನ್ನು ಕೊಡುವಂತೆ ಮಾಡಿದವನೂ ಅವನೇ.

ಪಾಂಡವರು ವನಕ್ಕೆ ಹೋದರು; ತಂದೆತಾಯಿಗಳೊಂದಿಗೆ ದುರ್ಯೋಧನನ ವೈಮನಸ್ಯ ಪ್ರಕಟವಾಯಿತು. ಪಾಂಡವರ ವನವಾಸವು ಧೃತರಾಷ್ಟ್ರನಿಗೆ ಮನಸಾ ಮೆಚ್ಚುಗೆಯಾಗಿತ್ತು. ಆದರೆ ಹೊರತೋರಿಕೆಗೆ ನ್ಯಾಯದ ಸೋಗು ಮಾಡುವುದಿತ್ತು. ನಡೆದ ಘಟನೆಯ ಬಗ್ಗೆ ಅವನು ವಿದುರನ ಅಭಿಪ್ರಾಯ ಕೇಳಿದನು; ವಿದುರನು, ದುರ್ಯೋಧನನಂತಹ ಮಗನನ್ನು ತ್ಯಾಗ ಮಾಡಲು ಹೇಳಿದನು. ಆಗ, ಧೃತರಾಷ್ಟ್ರನ ನಿಜಸ್ವರೂಪ ಬಯಲಾಯಿತು. "ನಿನಗೆ ಪಾಂಡವರು ಪ್ರಿಯರು, ನಾವು ಅಲ್ಲ" – ಎಂದು ಹೇಳಿ ಅವರನ್ನು ಅಟ್ಟಿದನು. ಹಾಗೆ ನುಡಿದಿದ್ದರೂ ಅವನಿಗೆ ವಿದುರನಲ್ಲಿ ಪ್ರೇಮವಿತ್ತು. ಮುಂದೆ ಅವನು ಹೋದನೆಂದು ಪಶ್ಚಾತ್ತಾಪವಾಯಿತು. ಅವನನ್ನು ಮತ್ತೆ ಕರೆಯಿಸಿ ಅವನ ಕ್ಷಮೆ ಕೋರಿದನು.

ಈ ಸಂಗತಿ ಗೊತ್ತಾದ ಕೂಡಲೇ ದುರ್ಯೋಧನನಿಗೆ ತಂದೆಯ ಬಗ್ಗೆ ವಿಪರೀತ ಸಿಟ್ಟು ಬಂತು. ಪಾಂಡವರನ್ನು ಈ ಮುದುಕ, ಅಡವಿಯಿಂದ ಹಿಂದಕ್ಕೆ ಕರೆಯಿಸಿಕೊಳ್ಳುವನೋ ಎಂದು ಗಾಬರಿಯಾಯಿತು. ತಂದೆಯನ್ನು ಅವನು ಪ್ರಕಟವಾಗಿಯೇ ವಿರೋಧಿಸಿದ. ಇದರಿಂದ, "ನಾನು ಕುರುಡ, ಆತ ನನ್ನದೇನು ಕೇಳುತ್ತಾನೆ?" ಎಂದು ಧೃತರಾಷ್ಟ್ರನು ಉದ್ಗಾರ ತೆಗೆಯಬೇಕಾಯಿತು. ಗಾಂಧಾರಿ, ವ್ಯಾಸ ಮುಂತಾದವರು ಹೇಳಿದರು. ಆದರೂ ದುರ್ಯೋಧನನನ್ನು ತ್ಯಜಿಸಲು ಅವನು ಒಪ್ಪಲಿಲ್ಲ. ಮಗನ ಮೋಹದ ದೌರ್ಬಲ್ಯವನ್ನು ಆತ

ಬಹಿರಂಗವಾಗಿಯೇ ಸ್ವೀಕರಿಸಿದ. ಪುತ್ರಪ್ರೇಮದ ಮುಂದೆ ತಾನು ಹತಬಲನೆಂದು ಉದ್ಗಾರ ತೆಗೆದ. ಬುದ್ಧಿಶಾಲಿಯಾದ ವ್ಯಾಸರಿಗೂ ಅವನ ಈ ಉದ್ಗಾರದ ಮುಂದೆ ಹೆಚ್ಚೇನೂ ಹೇಳಲು ಬರಲಿಲ್ಲ. ಆಗ ಧೃತರಾಷ್ಟ್ರನನ್ನು ಬಿಚ್ಚುಮಾತಿನಲ್ಲಿ ಛೇಡಿಸಿದವಳು ಗಾಂಧಾರಿಯೇ. ಪಾಂಡವರು ವನಕ್ಕೆ ತೆರಳಿದಾಗ ಎಲ್ಲರೂ ಕಂಬನಿಗರೆದರು. ಹಾಗೆ ಕರೆಯದಿದ್ದವರು ದುರ್ಯೋಧನ, ದುಃಶಾಸನ, ಕರ್ಣ ಮತ್ತು ಶಕುನಿ. ಇದು ದ್ರೌಪದಿಯ ನೆನಪಿನಲ್ಲಿಯೂ ಚೆನ್ನಾಗಿಯೇ ಉಳಿಯಿತು. ಅಂದಾಗ, ಗಾಂಧಾರಿಯು ಇದನ್ನು ಅಲಕ್ಷಿಸಿರಬಹುದೆಂದು ಹೇಳುವುದು ಹೇಗೆ? ಮಗನ ವಿನಾಶವು ಅವಳನ್ನು ಸತಾಯಿಸಹತ್ತಿತು. ಅವನ ದುಷ್ಟ ಮತ್ಸರಿ ಸ್ವಭಾವಕ್ಕಾಗಿ ಸಭೆಯೊಳಗಿನ ಅವನ ಅಶ್ಲೀಲ ವರ್ತನೆಗಾಗಿ ಅವಳಿಗೆ ತೀರ ಸಿಟ್ಟು ಬಂದಿತ್ತು. ಅವಳ ನ್ಯಾಯವೃತ್ತಿಯು ಜಾಗೃತವಾಯಿತು. ವಿದುರನಂತೆಯೇ ಪಾಂಡವರನ್ನು ಕಾಡಿನಿಂದ ಹಿಂದಕ್ಕೆ ಕರೆತರಿಸಿ. ಅವರಿಗೆ ಅರ್ಧರಾಜ್ಯವನ್ನು ಕೊಡುವ ಆಗ್ರಹವನ್ನು ಅವಳು ಹಿಡಿದಳು. ಅವಳ ಆಗ್ರಹದಿಂದಲೇ ದುರ್ಯೋಧನನು ಅನುದ್ಯೂತದ ಆಗ್ರಹ ಹಿಡಿದಿದ್ದನು. ಅದನ್ನು ಧೃತರಾಷ್ಟ್ರನು ಮುರಿದು ಹಾಕಿದ್ದನು. ಇದು ದುರ್ಯೋಧನನ ಮನಸ್ಸಿನಲ್ಲಿ ಚೆನ್ನಾಗಿಯೇ ಇತ್ತು. ತಂದೆಯನ್ನು ಬಗ್ಗಿಸುವ ಹಾಗೆ ಇನ್ನು ಮುಂದೆ ತಾಯಿಯನ್ನು ಬಗ್ಗಿಸುವುದು ಸಾಧ್ಯವಿಲ್ಲವೆಂಬುದನ್ನು ಆತ ಗುರುತಿಸಿದ. ಇದರ ಪರಿಣಾಮವೆಂದರೆ ಆತ ಅವಳಿಂದ ತಪ್ಪಿಸಿಕೊಳ್ಳತೊಡಗಿದ. ಯಾರಾದರೂ, ಪಾಂಡವರೊಂದಿಗಿನ ಒಡಂಬಡಿಕೆಯ ಮಾತನ್ನೇನಾದರೂ ಎತ್ತಿದಲ್ಲಿ ಅವರನ್ನು ಮಾತನಾಡಿಯೋ ಮಾತನಾಡದೆಯೋ ಉದ್ದಾಮತನದಿಂದ ಸುತ್ತುಗೇಡು ಮಾಡುವುದು ಹೇಗೆಂಬ ಕಲೆಯು ದುರ್ಯೋಧನನಿಗೆ ಕರಗತವಾಗಿತ್ತು. ತಂದೆಯ ಹಾಗೂ ವ್ಯಾಸರ ಮಾತನ್ನು ಆತ ಹಾರಿಸಿಬಿಟ್ಟ. ವಿದುರ ಮತ್ತು ಭೀಷ್ಮರಿಗೆ "ನೀವು ನಮ್ಮ ಉಡಿಯ ಅನ್ನವುಂಡು ಪಾಂಡವರನ್ನು ತಲೆಗೇರಿಸಿಕೊಳ್ಳುತ್ತೀರಿ" ಎಂದು ಸ್ಪಷ್ಟವಾಗಿಯೇ ಚುಚ್ಚಿ ನುಡಿದ. ಮೈತ್ರೇಯನು ಇದೇ ಉಪದೇಶವನ್ನು ತುಂಬಿದ ಸಭೆಯಲ್ಲಿ ಮಾಡಿದ. ಆ ವೇಳೆಗೆ ಆತ ಬಾಯಿಯಿಂದ ಒಂದು ಅಕ್ಷರವನ್ನೂ ಹೊರತೆಗೆಯದೆ ಅವನ ಕಡೆಗೆ ಕಣ್ಣೆತ್ತಿಯೂ ನೋಡದೆ, ತೊಡೆತಟ್ಟಿಕೊಂಡು ತನ್ನ ಅಧಿಕಾರವನ್ನು ವ್ಯಕ್ತಮಾಡಿದ.

ಕರ್ಣನ ವ್ಯಥೆಯು ಮಾನಧನನಾದ ದುರ್ಯೋಧನನಿಗೆ ತಿಳಿದಂತೆ, ಬೇರೆ ಯಾರಿಗೂ ತಿಳಿಯಲಿಲ್ಲ. ದ್ರೌಪದೀಸ್ವಯಂವರದಲ್ಲಿ ಕರ್ಣನ ತೇಜೋವಧೆ ಯಾದುದನ್ನು ಕೇಳಿ ಕುಂತಿಯೂ ಹಳಹಳಿಸಲಿಲ್ಲ. ಆದರೆ ಆ ಮುಳ್ಳು ದುರ್ಯೋಧನನಿಗೆ ಚುಚ್ಚಿತು. ಕ್ಷತ್ರಿಯತ್ವದ ಕೊರತೆ ಅವನಿಗೆ ಎಂದೂ ಬರಬಾರದೆಂದು ಅಂಗದೇಶದ ರಾಜಪದವನ್ನು ಅವನು ಕರ್ಣನಿಗೆ ಕೊಟ್ಟ; ಆಮರಣ ಮೈತ್ರಿಯನ್ನು ಅವನಲ್ಲಿ ಬೇಡಿದ. ಕರ್ಣ ಕೂಡ, ಈ ಋಣವನ್ನು ಕೊನೆಯತನಕ ಮರೆಯಲಿಲ್ಲ.

ರಾಜನೆಂದು ದುರ್ಯೋಧನನ ಆಡಳಿತ ಪ್ರಜೆಗಳಿಗೆ ಬಹಳ ಸುಖದ್ದೇ ಆಗಿತ್ತೆಂದು ಯುಧಿಷ್ಠಿರನೇ ಒಪ್ಪಿಕೊಂಡಿದ್ದಾನೆ. ಪಾಂಡವರಿಗೆ ಸೂಜಿಯ ಮೊನೆಯಷ್ಟೂ ಭೂಮಿಯನ್ನು ಕೊಡುವುದಿಲ್ಲವೆಂಬ ತನ್ನ ಛಲವನ್ನು ದುರ್ಯೋಧನನು, ತಾನು ಸಾಯುವವರೆಗೂ ಪಾಲಿಸಿದ್ದಾನೆ. ಪರಾಜಯದ ವೇದನೆಯನ್ನು ಸಹಿಸುತ್ತಲೇ ಆತ ಸತ್ತಿದ್ದಾನೆ. ಆದರೆ, ಕೊನೆಗೆ ಐವರು ಪಾಂಡವರು ಮಾತ್ರ ಉಳಿದಿದ್ದಾರೆಂಬ ವಾರ್ತೆ ಅವನಿಗೆ ಇದ್ದುದರಲ್ಲಿ ಸಮಾಧಾನದ್ದೆನಿಸಿತು. ಅಶ್ವತ್ಥಾಮನಿಗೆ, ಅವನ ನಿಷ್ಠೆಗಾಗಿ, ಕರ್ತೃತ್ವಕ್ಕಾಗಿ ಆತ, ಧನ್ಯವಾದಗಳನ್ನರ್ಪಿಸಿದ. ತನ್ನ ದುಃಸ್ಥಿತಿಯ ಬಗ್ಗೆ ದುಃಖವನ್ನು ತೋರಿಸಲಿಲ್ಲ. ತನ್ನನ್ನು ಕುರಿತೇ ಆರಂಭದಲ್ಲಿ ಮರುಕಪಟ್ಟುಕೊಳ್ಳುತ್ತಿದ್ದ ಅವನು ಧೈರ್ಯದಿಂದ ಪ್ರಾಣಬಿಟ್ಟನು. ಸಾಯುತ್ತಿರುವಾಗಲೂ ತನ್ನ ವೈರವು ಸ್ಥಿರವಾಗಿದೆಯೆಂಬ ಸಮಾಧಾನವನ್ನು ಅನುಭವಿಸಿದನು. ತಂದೆತಾಯಿಗಳಿಗಾಗಿ ಹಂಬಲಿಸಲಿಲ್ಲ. ಕೊನೆಯ ಗಳಿಗೆಯಲ್ಲಿ ಯಾರ ಬಗೆಗೂ ಕಣ್ಣೀರು ಮಿಡಿಯಲಿಲ್ಲ. ದುರ್ಯೋಧನನ ಬದುಕಿಗೆ ಲೋಭಲಾಲಸೆಯ ಹಲವು ಕಲೆಗಳಿವೆ. ಆದರೆ ಮೈತ್ರಿಯ ಸಂಬಂಧಕ್ಕೆ ಮಾತ್ರ ಅವನು ಕಲಂಕ ಹಚ್ಚಲಿಲ್ಲ. ಹಾಗಿಲ್ಲದಿದ್ದರೆ ಮಾದ್ರಿಯ ಸೋದರ ಶಲ್ಯನು ಅವನ ಪಕ್ಷಕ್ಕೆ ಬರುತ್ತಲೇ ಇರಲಿಲ್ಲ.

ದುರ್ಯೋಧನನ ದ್ವೇಷದ ಹುರಿಕಟ್ಟು ಜಿಗುಟು ಮತ್ತು ಬಿರುಸಾದದ್ದು. ಆ ಹುರಿಕಟ್ಟಿನಿಂದಲೇ ಅವನ ವೈರವು ಮುರುಟೆನಿಸದಿರುವುದು. ತಾಳೆಯ ಮರದಂತೆನಿಸುತ್ತದೆ, ಅದು. ಈ ಹುರಿಕಟ್ಟಿನ ವ್ಯಕ್ತಿತ್ವಕ್ಕೆ ಅವನ ಕೊನೆಯ ಒಂದು ಹೇಡಿಕೃತ್ಯದಿಂದ, ಮುಕ್ಕು ಉಂಟಾಯಿತು. ಪಾಂಡವರನ್ನು ಕೊಲ್ಲಲು ಅವನು ಅನೇಕ ಹೀನಯುಕ್ತಿಗಳನ್ನು ಬಳಸಿದ್ದನು. ಅವುಗಳ ಅಂತರ್ಯದಲ್ಲಿ ಭಯದ ಬೀಜವಿತ್ತು. ಆದರೆ ಆ ಭಯವು ಕ್ಷಮ್ಯವಾಗಿತ್ತು. ರಾಜವೈಭವದ ಕನಸು ಆ

ಭಯದ ಹೊಟ್ಟೆಯಲ್ಲಿ ಹುದುಗಿತ್ತು. ಆದರೆ ಭೀಷ್ಮ, ದ್ರೋಣ, ಕರ್ಣ – ಎಲ್ಲರೂ ಬಿದ್ದಿದ್ದಾರೆ. ಈಗ ಸೋಲು ತಪ್ಪಿದ್ದಲ್ಲ. ಇಂಥ ವೇಳೆಗೆ ದುರ್ಯೋಧನನು ಜಲಸ್ತಂಭನ ವಿದ್ಯೆಯ ಆಧಾರದಿಂದ ನೀರಿನಲ್ಲಿ ಅಡಗಿ ಕುಳಿತ; ಸಾವನ್ನು ತಪ್ಪಿಸಿಕೊಳ್ಳಲಿಕ್ಕೆ ಅಷ್ಟರಮಟ್ಟಿಗೆ ದುರ್ಬಲನೂ ಹೇಡಿಯೂ ಆದ; – ಇದನ್ನು ಕಂಡು ಅತಿ ವಿಷಾದವಾಗುತ್ತದೆ. ಹಿಂದೆ ಅನೇಕ ಸಲ ಆತ್ಮಹತ್ಯೆಯ ಮಾತುಗಳನ್ನು ಅವನು ಆಡಿದ್ದುಂಟು. ಆಗ ಈಗ ಸಾವು ಎದುರಿಗೆ ನಿಂತದ್ದು ಕಂಡಾಗ ಅವನ ಧೈರ್ಯವು ಜಾರಿತು; ಅವನು ಅಡಗಿ ಕುಳಿತ. ಈಗ ಆತ ಶೂರಯೋಧನಲ್ಲ; ತನ್ನ ಸೈನಿಕರ ಪಕ್ಕದಲ್ಲಿ ಸುಖವಾಗಿ ಕೊನೆಯ ನಿದ್ದೆ ಪಡೆಯುವುದು ತನ್ನ ಕರ್ತವ್ಯವೆಂದು ಭಾವಿಸುವ ರಾಜನಲ್ಲ; ಈಗ ಆತ ಕುರುಡನ ಮಗ; ಸದಾ ಧಗಧಗಿಸುತ್ತ ಉರಿಯುತ್ತ ಬದುಕುವಂಥವನು; ತನ್ನ ಕುಬ್ಜ ಆಸೆಗಳನ್ನು ಜೋಪಾನ ಮಾಡುವಂಥವನು.

ದುರ್ಯೋಧನನ ಜೀವನದಲ್ಲಿ ಶಾಶ್ವತವಾಗಿದ್ದ ಮೈತ್ರಿಯ ರಸಾಯನದ ಮೇಲೆ, ವ್ಯಾಸರು ಯುದ್ಧದ ನಿಕರಪ್ರಸಂಗದಲ್ಲಿ ಸೂಚ್ಯರೂಪದ ನಾಟಕೀಯ ಪ್ರಸಂಗವನ್ನು ನಿಲ್ಲಿಸಿದ್ದಾರೆ. ದುರ್ಯೋಧನನ ಸ್ವಭಾವದೊಳಗಿನ ಎಲ್ಲ ಕೋಮಲತೆಯನ್ನೂ ಅವರು ಅದರಲ್ಲಿ ತುಂಬಿದ್ದಾರೆ. ಬಾಲಿಶ ಮನಸ್ಸಿನ ಈ ಮನುಷ್ಯನ ಭಾವನೆಗಳ ತಂತುಗಳನ್ನು ಬಾಲ್ಯದ ನೆನಪುಗಳೊಂದಿಗೆ ಕೌಶಲದಿಂದ ಜೋಡಿಸಿದ್ದಾರೆ. ಆ ಪ್ರಸಂಗ ಹೀಗಿದೆ : ಅಶ್ವತ್ಥಾಮ ಘಟೋತ್ಕಚರ ಯುದ್ಧ ನಡೆಯುತ್ತದೆ. ಅದರಲ್ಲಿ ಅಶ್ವತ್ಥಾಮ ಹಿಂದೇಟು ಹಾಕುತ್ತಾನೆ. ಅನಂತರ ಕರ್ಣ ಘಟೋತ್ಕಚರ ಯುದ್ಧ ನಡೆಯುತ್ತದೆ. ಕರ್ಣನು ಘಟೋತ್ಕಚನ ಮೇಲೆ ತನ್ನ ವಾಸವೀಶಕ್ತಿಯನ್ನು ಪ್ರಯೋಗಿಸುತ್ತಾನೆ. ಘಟೋತ್ಕಚ ಸಾಯುತ್ತಾನೆ. ಆದರೆ ಇದೇ ಕರ್ಣನ ಸಾವಿಗೆ ನಾಂದಿಯಾಗುತ್ತದೆ.

ಈ ಪ್ರಸಂಗದಲ್ಲಿ ಘಟೋತ್ಕಚನ ಪ್ರಾಣಕ್ಕೆ ಸಂಕಟ ಬಂದಿದ್ದರೂ ಕೃಷ್ಣಾರ್ಜುನರು ಒಬ್ಬರನ್ನೊಬ್ಬರು ನೋಡಿಕೊಂಡು ನಗುತ್ತಿದ್ದರು; ಚಿಕ್ಕಂದಿನ ಕತೆಗಳನ್ನು ಹೇಳಿಕೊಳ್ಳುತ್ತಿದ್ದರು. ಅದನ್ನು ಕಂಡ ದುರ್ಯೋಧನ ವಿಚಲಿತನಾದ. ಆಗ ಅವನು ಸಾತ್ಯಕಿಯೊಡನೆ ಯುದ್ಧ ಮಾಡುತ್ತಿದ್ದ. ಅದನ್ನು ತಡೆದು ಅವನೆಂದನು, "ಕ್ರೋಧ, ಲೋಭ, ಅಸೂಯೆ ಮತ್ತು ಕ್ಷಾತ್ರ ಆಚಾರಗಳಿಗೆ ಧಿಕ್ಕಾರವಿರಲಿ; ಸೈನ್ಯಕ್ಕೆ ಧಿಕ್ಕಾರವಿರಲಿ; ನನಗೆ ಚಿಕ್ಕಂದಿನದೆಲ್ಲ ನೆನಪಾಗುತ್ತದೆ. ನೀನು ನನಗೆ ಪ್ರಾಣಕ್ಕೂ ಪ್ರಿಯನಾದ ಮಿತ್ರ; ನಾನೂ ನಿನಗೆ ಹಾಗೆಯೇ. ಈಗ

ನೀನು ನನ್ನೊಡನೆ ಯುದ್ಧ ಮಾಡಲು ಸಿದ್ಧನಾದೆ. ನನಗೆ ಚಿಕ್ಕಂದಿನ ಪ್ರೀತಿ ನೆನಪಾಗುತ್ತದೆ, ಅದೆಲ್ಲ ಯುದ್ಧದಲ್ಲಿ ಸಂದುಹೋಯಿತು. ಕ್ರೋಧ ಲೋಭಗಳ ಹೊರತು ಯುದ್ಧದಲ್ಲಿ ಬೇರೆ ಏನಿದೆ?" ಎಂಬುದಾಗಿ.

ಆದರೆ, ಕೃಷ್ಣಾರ್ಜುನರ ಜೋಡಿಯನ್ನು ನೋಡಿ, ಚಿಕ್ಕಂದಿನ ಕಾವ್ಯಮಯ ವಿಶ್ವಾಸದಲ್ಲಿ ದುರ್ಯೋಧನನು ಹೊಕ್ಕಂತೆ, ಬಿರುಸು ಸ್ವಭಾವದ ಪ್ರೌಢ ಸಾತ್ಯಕಿ ಹೋಗುವುದು ಸಾಧ್ಯವಿದ್ದಿಲ್ಲ. "ಇದು ಆಚಾರ್ಯರ ಮನೆಯಲ್ಲ; ಇಲ್ಲಿ ನಾವು ಆಡಲಿಕ್ಕೆ ಬಂದಿಲ್ಲ" ಎಂದು ಆತ ಒಣದಲ್ಲಿಯೇ ಎಂದನು.

ಆದರೂ ದುರ್ಯೋಧನನ ಮನಸ್ಸಿನ ಮೇಲಿನ ಮೋಹಿನಿಯು ಇಳಿದಿರ ಲಿಲ್ಲ. ಆತ ಅದೇ ಗುಂಗಿನಲ್ಲಿ ಹೇಳಿದ : "ಚಿಕ್ಕಂದಿನ ಆ ಕ್ರೀಡೆ ಎಲ್ಲಿದೆ? ನಿಜವಾಗಿಯೂ ಕಾಲದ ಲೀಲೆ ಅಗಮ್ಯ. ಎಲ್ಲಿ ಆ ಕ್ರೀಡೆ – ಎಲ್ಲಿ ಈ ಯುದ್ಧ! ನಾವೆಲ್ಲ ಲೋಭದಿಂದ ಹೋರಾಡುತ್ತಿದ್ದೇವೆ!" ಎಂಬುದಾಗಿ.

ಇದನ್ನು ಕೇಳಿ, ಕೃಷ್ಣನಿಗೂ ಸುಮ್ಮನಿರುವುದು ಸಾಧ್ಯವಾಗಲಿಲ್ಲ. ಅವನೆಂದ "ಇದೇ ಕ್ಷತ್ರವೃತ್ತಿ. ಗುರುವಿನೊಡನೆಯೂ ಹೋರಾಡಬೇಕಾಗುತ್ತದೆ. ನನ್ನನ್ನು ಕೊಲ್ಲು" ಎಂಬುದಾಗಿ. ನಿಶ್ಶಸ್ತ್ರನಾಗಿದ್ದ ಕೃಷ್ಣನನ್ನು ದುರ್ಯೋಧನನು ನಿಜವಾಗಿಯೂ ಕೊಂದಾನು ಎಂಬ ಶಂಕೆಯಿಂದ ಸಾತ್ಯಕಿಯು ಅವರಿಬ್ಬರ ನಡುವಿನ ಸಂವಾದಕ್ಕೆ ಸ್ವರ ಒಡೆಯುವುದಕ್ಕೇ ಬಿಡಲಿಲ್ಲ. ಕೃಷ್ಣನಿಗೆ ದುರ್ಯೋಧನನ ಮನಸ್ಸಿನ ಮೆದುತನ ಅರಿವಾಗಿತ್ತು; ಅವನ ಉತ್ತರದಲ್ಲಿ ಕಟುಕತೆಯಿರಲಿಲ್ಲ. ಕೇವಲ ಯುದ್ಧನೀತಿಯ ಪುರಸ್ಕಾರವಿತ್ತು. ಪರಸ್ಪರ ಪ್ರೇಮಕ್ಕಿಂತ ಶ್ರೇಷ್ಠವಾದ ಯುದ್ಧದ ಮೌಲ್ಯವಿತ್ತು. ಆದರೆ ಈ ಮೌಲ್ಯದ ಆಚಾರವು ಯುದ್ಧಪ್ರವೃತ್ತಿಗೆ ಪೋಷಕವಿದ್ದರೂ ಅದರ ಉದ್ಧರಣೆಯು ಎಲ್ಲಿಗೆ ಒಯ್ಯಬಹುದೆಂಬುದರ ದಿಟವು ಸಾತ್ಯಕಿಗೆ ಹೊಳೆದಿರಲಿಕ್ಕಿಲ್ಲ. ಆದ್ದರಿಂದ ಅವನು ಲಗುಬಗೆಯಿಂದ ಎಂದನು : "ನನಗೆ ನನ್ನ ಮಿತ್ರರನ್ನು ಸಂಕಟದಲ್ಲಿ ಹಾಕುವ ವಿಚಾರವಿಲ್ಲ" ಎಂಬುದಾಗಿ. ಇಷ್ಟು ಹೇಳಿ ಆತ ಸಿಡಿದೆದ್ದು ಕಾದಾಡಲು ಅಣಿಯಾದನು. ಅದರೊಂದಿಗೆ ದುರ್ಯೋಧನನ ಲಹರಿ ಬದಲಾಯಿತು; ಅವನೂ ಉರಿದೆದ್ದು ಹೋರಾಡತೊಡಗಿದ.

ಮುಂದಿನ ಯುದ್ಧದಲ್ಲಿ ದುರ್ಯೋಧನನು ಕರ್ಣನಂತೆ ಸೆಟೆದು ನೇರವಾಗಿ ನಿಲ್ಲದಾದ. ವೈರವು ಪ್ರಜ್ವಲಿತವಿದ್ದರೂ ಅವನಿಗೆ ಅದು ಸಾಧ್ಯವಾಗಲಿಲ್ಲ. ಆದರೆ, ನೀರಿನೊಳಗಿಂದ ಮೇಲೆದ್ದು ಬಂದ; ಅನಿಚ್ಛೆಯಿಂದ ಬಂದ; ಆಗ ಮಾತ್ರ ಮುರಿದು ಹೋದ ಈ ಸಂದು ಮತ್ತೆ ಕೂಡಿತು; ಗೊತ್ತಾಗದಂತೆ ಕೂಡಿತು.

ದಿಟ್ಟಿಸಿ ನೋಡಿದಲ್ಲದೆ ಈ ಸಂದು ಅರಿವಾಗದು. ಅನಂತರ ಅಂತ್ಯವೇ ಬಂತು. ತೀರ ಉದ್ದಾಮ ಅಹಂಕಾರದಿಂದ ದುರ್ಯೋಧನನು ಮರಣಗತಿಯನ್ನು ಅಂಗೀಕರಿಸಿದ. ಈ ರಾಜನು ಭೂಮಿಯ ಮೇಲೆ ಒರಗಿದ. ಸುತ್ತಲೂ ಸತ್ತ ಪರಿವಾರದೊಂದಿಗೆ, ಕೇವಲ ಒಂದು ಮಿಣುಗುಟ್ಟುವ ಜೀವ ಹಿಡಿದಿರುವ ಸ್ಥಿತಿಯಲ್ಲಿಯೂ, ಅಶ್ವತ್ಥಾಮನು ಪಾಂಡವ ಪರಿವಾರದ ಸಮಗ್ರ ವಿನಾಶದ ಸುಖವಾರ್ತೆ ಹೇಳುತ್ತಲೆ ದುರ್ಯೋಧನನ ಪ್ರಾಣ ಕಣ್ಣಲ್ಲಿಯೂ ಕೊರಳಲ್ಲಿಯೂ ಮರಳಿ ಬಂದಿತು. ಕಣ್ಣುಗಳು ತುಸು ಸುಖಿಸಿದವು. ಮನಸ್ಸು ಆರ್ದ್ರವಾಯಿತು. ತುಟಿಯಲ್ಲಿ ನಸುನಗೆ ಮೂಡಿತು. ತನ್ನ ಪರಮ ಮಿತ್ರನಿಗಾಗಿ ಆತ ಕೃತಜ್ಞತೆಯ ಉದ್ಗಾರ ತೆಗೆದ. ವೈರದ ಹಾಗೂ ಸ್ನೇಹದ ಪರಮೋಚ್ಚ ಬಿಂದುವನ್ನು ಏಕಕಾಲಕ್ಕೆ ಅನುಭವಿಸುತ್ತಲೆ ಆತ ಸತ್ತ.

ಬಾಲ್ಯದಿಂದಲೂ ವ್ಯಕ್ತಿತ್ವದ ರೇಖೆಯನ್ನೇ ಕಳೆದುಕೊಂಡು ಕುಳಿತ ಈ ಮನುಷ್ಯ! ಆದರೆ ಈ ಕೊನೆಯ ದೃಶ್ಯದ ಆಧಾರದಿಂದ ನೀಲಧೂಸರದ ಮಬ್ಬು ಮುಸುಕಿದ ರಣಭೂಮಿಯಲ್ಲಿ ವೈರ ಮತ್ತು ಮೈತ್ರಿ ಇವುಗಳ ಕೇವಲ ಕಪ್ಪು-ಬಿಳುಪು ಬಿಮ್ಮುಗಳಿಂದ ತುಂಬಿದ, ಆಕಾರ ಹೀನವಾದರೂ ಅತಿ ಅವಾಢವ್ಯವಾದ ಒಂದು ಆಕೃತಿಯು ನನಗೆ ಕಾಣಿಸುತ್ತದೆ. ಅದು ಸಾಮಾನ್ಯ ಯೋಧನದು. ಆದರೆ ಈ ಆಕೃತಿಯು ಇಷ್ಟು ಪ್ರಚಂಡವಾಗಿದೆಯೆಂದರೆ, ಅದರೊಳಗೇ ಯುದ್ಧದ ಸಕಲಯೋಧರೂ ಸಮಾವೇಶಗೊಂಡಿರುತ್ತಾರೆ. ಸೋಜಿಗವೆಂದರೆ ಈ ಯೋಧನ ಅಂತರಂಗವು ಸಂಕುಚಿತವಾಗಿದ್ದರೂ ಈ ಅವಾಢವ್ಯ ಆಕಾರದಿಂದಾಗಿ ಮಹಾಭಾರತದೊಳಗಿನ ಪ್ರತಿಯೊಂದು ವ್ಯಕ್ತಿಯೂ ಇವನೊಂದಿಗೆ ಸುಖ ಸಂವಾದದಿಂದ ಇಲ್ಲವೇ ವಿಸಂವಾದಿಯಾಗಿ ಸಂಬದ್ಧವಾಗಿದೆ. ಇವನ ಸಂಕುಚಿತದಿಂದಾಗಿಯೇ ಈತನೊಬ್ಬನೇ ಯುದ್ಧದ ಪ್ರತೀಕನಾದನು. ಕ್ರೌರ್ಯ, ಸಂಕುಚಿತತೆ, ವಿನಾಶ – ಇವೇ ಯುದ್ಧದ ವಿಶೇಷ; ಇವೇ ಅವನ ವಿಶೇಷಗಳೂ ಆಗಿದ್ದವು. ಕೃಷ್ಣನು ಅರ್ಜುನನಿಗೆ ಗೀತೆಯನ್ನು ಬೋಧಿಸಿದ; ಅರ್ಜುನ ಗೆದ್ದನೆಂದು ಆತ ಅನೇಕರಿಗೆ ಭಾರತಯುದ್ಧದ ನಾಯಕನಾಗಿ ಕಾಣುತ್ತಾನೆ. ನನಗೆ ಹಾಗೆ ಕಾಣದು. ಭಾರತಯುದ್ಧದ ನಾಯಕ, ಪ್ರಣೇತ – ದುರ್ಯೋಧನ. ಖಳನಾಯಕನಾದರೂ ಅವನೇ ನಾಯಕ. ಆದರೆ ಹಾಗೆ ನೋಡಿದರೆ ಯುದ್ಧಕ್ಕೆ ನಾಯಕನೊಬ್ಬನು ಇರುವನಾದರೂ ಎಲ್ಲಿ? ಯುದ್ಧಗಳಾಗುವುದು ಖಳನಾಯಕರಿಂದಲೇ ಅಲ್ಲವೆ?



# ಏಕಾಕಿ

ದುರ್ಯೋಧನನು ದುಷ್ಟನಾಗಿದ್ದ. ಭಾರತ ಯುದ್ಧದ ಅಗ್ರೇಸರ ಪ್ರಣೇತನಾಗಿದ್ದ. ದ್ರೌಪದಿಯ ಮಾನಭಂಗದ ಕಲ್ಪನೆಯ ಪ್ರಮುಖ ಜನಕನಾಗಿದ್ದ. ರಜಸ್ವಲೆಯನ್ನು ತುಂಬಿದ ಸಭೆಗೆ ಎಳೆತರುವ ಅಭಿನವ ದುಷ್ಟ ಕಲ್ಪನೆಯು ಬೇರೆ ಯಾರಿಗೂ ಬರುವಂತಿದ್ದಿಲ್ಲ; ಅದು ದುರ್ಯೋಧನನಿಗೆ ಬಂದಿತು. ಹಲವಾರು ಕುಬ್ಜಕಪಟಗಳನ್ನು ಆತ ಪಾಂಡವರ ವಿರುದ್ಧ ರಚಿಸಿದ ಮತ್ತು ಕಣ್ಣೆದುರಿಗೇ ಅವು ಬೂದಿಯಾದುದನ್ನು ಕಂಡ. ಯುದ್ಧ ಒಂದೇ ಒಂದು ಆತ ಅಂಗೀಕರಿಸಿದ ಮೊದಲ ಮತ್ತು ಕೊನೆಯ ಧರ್ಮಬದ್ಧಕೃತ್ಯ. ಆದರೆ ಸೋಜಿಗವೆಂದರೆ, ಒಮ್ಮೆ ಯುದ್ಧವನ್ನು ಸ್ವೀಕರಿಸಿದ ಮೇಲೆ ಆತ ಕಪಟಕ್ಕಿಂತ ಶೌರ್ಯವನ್ನೇ ಆಧರಿಸಿದ. ಅಶ್ವತ್ಥಾಮನ ತೀರ ಕೊನೆಯ ಕೃತ್ಯವನ್ನು ಬಿಟ್ಟರೆ ದುರ್ಯೋಧನನ ಕಡೆಯಿಂದ ಕಪಟವೇನೂ ನಡೆದಿಲ್ಲ. ಘಟಿಸಿದ ಮೋಸದ

ಕೃತ್ಯಗಳೆಲ್ಲ ಪಾಂಡವರ ಪಕ್ಷದಿಂದಲೇ ಘಟಿಸಿವೆ. ಖಚಿತವಾಗಿ, ಈ ಸಂಗತಿಗಳ ಮೂಲಕವೇ ಕೌರವರ ವಿಷಯಕ್ಕೆ ತಿರಸ್ಕಾರ ಉಳಿಯುವುದಿಲ್ಲ; ಅನುಕಂಪೆಯಷ್ಟೇ ಉಳಿಯುತ್ತದೆ. ಆದರೆ ಈ ಅನುಕಂಪೆಯು ಕೇವಲ ದುರ್ಬಲ ಭಾವುಕರ ಬಗೆಗಿನ ಮರುಕವಲ್ಲ. ಅದಕ್ಕೆ ಒಂದು ಅಪ್ರತಿಮ ಶ್ರೇಯಸ್ಸಿನ ಜೊತೆಯೂ ಸಿಕ್ಕುತ್ತದೆ. ಈ ಬದಿಯ ನ್ಯಾಯದ ಪರಡಿಯು ಪಾಂಡವರ ಕಡೆಗಷ್ಟೇ ಭಾರವಿತ್ತು. ಕೇವಲ ಪಾಂಡವರ ಕಡೆಯ ವಿಚಾರಮಾಡಿದರೆ, ನ್ಯಾಯವು ಅವರಿಗೆ ಕೂಡಲೇ ಸಲ್ಲುತ್ತದೆ. ಕೌರವರ ಬದಿಗೆ ಪ್ರಥಮವಾಗಿ ನ್ಯಾಯವು ಬರುವುದಿಲ್ಲ. ನ್ಯಾಯ ಬರುವುದು ಕರ್ಣನ ಧೀರಗಂಭೀರ ರೂಪವನ್ನು ತಾಳಿ. ಕರ್ಣನಿಲ್ಲದಿದ್ದರೆ ಕೌರವರಿಗೆ ನ್ಯಾಯ ನೀಡುವುದು ವ್ಯಾಸರಿಗೆ ಶಕ್ಯವಾಗುತ್ತಿದ್ದಿಲ್ಲ. ಕರ್ಣನಿಲ್ಲದಿದ್ದರೆ ನೀತಿಯ ಆಹ್ವಾನವು ಇಷ್ಟು ಉಗ್ರವಾಗುತ್ತಿರಲಿಲ್ಲ. ಕರ್ಣನಿಲ್ಲದಿದ್ದರೆ ಪಾಂಡವರಲ್ಲಿ ಹುರಿಕಟ್ಟು ಗಟ್ಟಿಯಾಗುತ್ತಿದ್ದಿಲ್ಲ. ಏಕೆಂದರೆ ಅವರಿಗೆ ಯುದ್ಧದ ಆಹ್ವಾನವನ್ನು ನೀಡಲು ದುರ್ಯೋಧನನಲ್ಲಿ ಹುಮ್ಮಸ್ಸೇ ಇರುತ್ತಿರಲಿಲ್ಲ.

ಕರ್ಣನು ಭಾರತಯುದ್ಧದ ಆಶ್ವಾಸನೆಯ ಪ್ರತೀಕವಾಗಿದ್ದ. ಕರ್ಣನಿದ್ದುದರಿಂದ ಕೃಷ್ಣನಿಗೆ, ಅರ್ಜುನನ ಮುಂದೆ ತತ್ತ್ವಜ್ಞಾನದ ವ್ಯಾಖ್ಯಾನ ಮಾಡಬೇಕಾದ ಪ್ರಸಂಗವೊದಗಿತು. ಬದುಕುಸಾವಿನ ವೇದಾಂತವನ್ನು ಇಷ್ಟೆಲ್ಲ ರೀತಿಯಿಂದ ಅರಳಿಸಿ ಉಬ್ಬಿಸಿ ಹೇಳಬೇಕಾಯಿತು. ಜೀವನಮೃತ್ಯುಗಳ ಅಭಿನ್ನತಾಲದ ಶಬ್ದರೂಪದ ಪ್ರತೀಕವೇ ಗೀತೆ. ಆದರೆ ಈ ತಾಲದ ಪ್ರತ್ಯಕ್ಷ ಸ್ಫುರಣವು ಕರ್ಣನ ಸ್ವಭಾವದಲ್ಲಿ, ಕೃತಿಯಲ್ಲಿ ಇರುತ್ತದೆ. ಕೃಷ್ಣ ಮತ್ತು ಕರ್ಣರು ವಾಸ್ತವವಾಗಿ ಒಂದೇ ತಾತ್ತ್ವಿಕ ಭೂಮಿಕೆಯ, ಪೌರುಷ–ಚೈತನ್ಯದ, ನಿರ್ಭಯತೆಯ ಮತ್ತು ನಿರ್ಮಮತೆಯ ಎರಡು ಪ್ರತಿಮೆಗಳು. ಒಂದು ಪ್ರತಿಮೆಯನ್ನು ದೈವೀಸ್ತರದಲ್ಲಿ ಇಡುವುದು ವ್ಯಾಸರಿಗೆ ಇಷ್ಟವಾಯಿತು. ಇನ್ನೊಂದನ್ನು ಅವರು, ಸಂಪೂರ್ಣ ಪಾರ್ಥಿವಸ್ತರದಲ್ಲಿಟ್ಟರು. ಇವರಿಬ್ಬರೂ ಪರಸ್ಪರ ವಿರುದ್ಧಪಕ್ಷಗಳನ್ನು ವಹಿಸುವಂತೆ ಮಾಡುವಲ್ಲಿ ವ್ಯಾಸರು ಒಂದು ಕಲಾತ್ಮಕ ಸಿದ್ಧಿಯನ್ನು ಗಳಿಸಿದರು. ಭೀಷ್ಮ, ದ್ರೋಣ, ಅಶ್ವತ್ಥಾಮ ಇವರು ಯುದ್ಧದಲ್ಲಿ ಪಾಂಡವವಿರೋಧಿಗಳಾಗಿರಲಿಲ್ಲವೇ? ಆದರೆ ಅವರ ವಿರೋಧವು ಯುದ್ಧದ ಮಟ್ಟಗಷ್ಟೇ ಸೀಮಿತವಾಗಿತ್ತು. ಒಂದು ರೀತಿಯಲ್ಲಿ ಅದು ಕೃತ್ರಿಮವಾದದ್ದು. ಮನಸ್ಸಿನೊಳಗೆ ಅವರು ಪಾಂಡವಪ್ರೇಮಿಗಳಾಗಿದ್ದರು. ಅವರು ಉಂಡ ಅನ್ನಕ್ಕೆ ಕೊಟ್ಟ ವಚನಕ್ಕೆ ಧರ್ಮಯುದ್ಧದ ವೀರೋಚಿತ

ಕರ್ತವ್ಯಕ್ಕೆ ಪ್ರಾಮಾಣಿಕವಾಗಿ ಬದುಕುವುದಿತ್ತು. ಭಾವನಾಶೂನ್ಯರಾಗಿ ಅವರು, ವೈರಿಯ ಭೂಮಿಕೆಯನ್ನು ನಿರ್ವಹಿಸಿದರು. ಆದರೆ ಕರ್ಣನದು ಹಾಗಿರಲಿಲ್ಲ. ಅವನ ವೈರವು ಜ್ವಲಂತವಾಗಿತ್ತು. ಕಟ್ಟು ಬಿದ್ದ ಹಲವು ಭಾವನೆಗಳ ಉದ್ರೇಕ ಅದರಲ್ಲಿತ್ತು. ವೈರ ಸಾಧಿಸುವಲ್ಲಿ, ಕೇವಲ ದುಷ್ಟತನದ ಆಧಾರವನ್ನಷ್ಟೇ ಪಡೆದನೆನ್ನುವಂತಿಲ್ಲ. ಅವನು ವೈರಿಗಳಿಗೆ ದಾನ ನೀಡಿದ್ದು ತುಂಬು ಮನಸ್ಸಿನಿಂದ. ತನ್ನ ವಿನಾಶದ ಆ ದಾನರೂಪ ಪ್ರತೀಕವನ್ನು ಆತ ಎಂದೋ ಗುರುತಿಸಿದ್ದ. ಆದರೂ ಅರ್ಜುನನ ಪ್ರಾಣರಕ್ಷಣೆಗಾಗಿ ಬಂದ ಇಂದ್ರನಿಗೆ ಅವನು, ಗೊಣಗುಟ್ಟದೆ, ಕವಚಕುಂಡಲಗಳನ್ನು ದಾನವಾಗಿ ನೀಡಿದ. ಅವನ್ನು ಕೊಡಬೇಡವೆಂದು ಸೂರ್ಯನು ಹೇಳಿದರೂ ಆತ ಕೊಟ್ಟ. ಆ ದಾನವನ್ನು ಕೊಡುವಾಗ ಕರ್ಣನ ಮನಸ್ಸಿನಲ್ಲಿ ಯಾವ ಭಾವನೆ ತಾನೇ ಬಂದಿಲ್ಲ? ಎಲ್ಲ ವಾಸನೆಗಳು, ಎಲ್ಲ ಕಟು ಕರ್ತವ್ಯದ ಭಾವನೆಗಳು, ಎಲ್ಲ ಹುರಿಕಟ್ಟು ಮತ್ತು ಸಮರ್ಪಣದ ಭಾವನೆಯ ಪರಿಪೂರ್ತಿ – ಇವೆಲ್ಲವೂ ಅದರಲ್ಲಿದ್ದವು.

ಕಿವಿಯಲ್ಲಿ ಕುಂಡಲಗಳಿರುವ ತನಕ ಕರ್ಣನು ಅವಧ್ಯನಾಗಿದ್ದನು. ತೇಜಸ್ಸಿನಿಂದ ಹೊಳೆಯುತ್ತಿದ್ದನು. ಕುಂಡಲಗಳನ್ನು ಕತ್ತರಿಸುವಾಗ ಕರ್ಣಗಳು ಭೇದಿಸಿಹೋಗುತ್ತಿದ್ದವು. ತೇಜಸ್ಸಂತೂ ಹೋಗುವುದೇ ಇತ್ತು. ಸಾವು ಅಚಲವಾಗಿತ್ತು. ತನ್ನ ಸಾವೆಂದರೆ ಪಾಂಡವರಿಗೆ ಜಯವೆಂಬ ಸತ್ಯವೂ ಅವನಿಗೆ ತಿಳಿದುಹೋಗಿತ್ತು. ಆದರೂ ಕುಂಡಲಗಳನ್ನು ಆತ ಕೊಟ್ಟ. ಆಗ ಅವನು ಸಾವಿಗಂಜಲಿಲ್ಲ. ಪಾಂಡವರ ಗೆಲುವಿನ ಕಲ್ಪನೆಯಿಂದ ವ್ಯಥಿತನಾಗಲಿಲ್ಲ. ಅವನು ವಿಚಲಿತನಾದದ್ದು ಒಂದೇ ಒಂದು ಸಂಗತಿಗಾಗಿ. ಕಿವಿ ಹರಿದು ಹೋದರೆ ತಾನು ವಿರೂಪನಾದೇನೆಂಬ ಶಂಕೆಯಿಂದಾಗಿ. ಕುಂಡಲಗಳನ್ನು ಕೊಯ್ದು ಕೊಡುವಾಗ ತನ್ನ ಈ ಶಾರೀರಿಕ ಊನವು ಮುಚ್ಚಿಹೋಗಬೇಕೆಂದು ಇಂದ್ರನಿಂದ ಅವನು ವರವನ್ನು ಬೇಡಿಕೊಂಡನು. ಇಂದ್ರನೂ ಅದನ್ನು ಕೊಟ್ಟನು. ಇಂದ್ರನು ಸೌಂದರ್ಯದ ಭೋಕ್ತ್ಯ. ಹಲವರ ಊನ ಅವಯವಗಳನ್ನು ಅವನು ಸುಂದರ ಹಾಗೂ ಸತೇಜಗೊಳಿಸಿಕೊಟ್ಟವನು. ಎಂದಾಗ, ಮೂಲತಃ ಸುಂದರನೂ ಸದೃಢನೂ ಆದ ಕರ್ಣನು ಚಿಕ್ಕದಾದರೂ ತನಗೆ ನೀಡಿದ ಆ ಭಿಕ್ಷೆಯಿಂದಾಗಿ ಉಂಟಾಗಬಹುದಾದ ಆ ಕುರೂಪತೆಯು ಇಂದ್ರನಿಗೂ ಸಹನವಾಗುವಂತಿರಲಿಲ್ಲ; ಶೋಭೆಕೊಡುವಂತೆಯೂ ಇರಲಿಲ್ಲ. ಅಲ್ಲದೆ ವರವನ್ನು ತಾನಾಗಿ ಕೊಡದಿರುವುದೂ ಅವನಿಗೆ ಕಮ್ಮಿಯೆನಿಸುತ್ತಿತ್ತು. ಸ್ವಂತ

ಜೀವನವನ್ನೇ ಧಾರೆಯೆರೆದು ಕೊಡುವ ಈ ವೀರನ ದೇಹವು ಅಭಂಗವೂ ಸುಂದರವೂ ಆಗಿರಬೇಕು. ಮೇಲಾಗಿ, ಈ ಯಜ್ಞಕರ್ಮವು ಸಂಪೂರ್ಣ ವಾಗಬೇಕೆಂಬ ಒಂದು ಸಂಕೇತವೂ ಇದರ ಹಿಂದೆ ಇದ್ದಿರಬೇಕು.

ಆದರೆ ಕರ್ಣನ ಕಡೆಯಿಂದ ವಿಚಾರಮಾಡಿದರೆ, ಯಾವಾಗ ಅವನಲ್ಲಿ ಅರ್ಜುನನಿಗೆ ಈ ರೀತಿ ಗುಪ್ತವಾಗಿ ಪ್ರಾಣದಾನ ಮಾಡುವ ತ್ಯಾಗಭಾವನೆಯ ಸ್ಫುರಣೆಯಿಂದ ಆವೇಶ ತುಂಬಿಕೊಂಡಿತ್ತೋ ಆಗ ಅವನು ಒಂದು ರೀತಿಯಲ್ಲಿ ವ್ಯಥಿತನಾಗಿದ್ದ. ಸ್ವಾಮಿಯಾದ ದುರ್ಯೋಧನನ ಇಚ್ಛೆಯನ್ನು ಪರಿಪೂರ್ಣ ಗೊಳಿಸಲು ತಾನು ಅಸಮರ್ಥನಾಗುವೆನೆಂದೆನಿಸಿ ಆತ ಒಂದು ಕಡೆಗೆ ಕುಗ್ಗಿದ್ದ. ಆ ಸಮಯದಲ್ಲಿ, ಪ್ರತ್ಯಕ್ಷವಾಗಿ ದಾನಮಾಡುವಾಗ, ಅವನಿಗೇ ಅರಿವಾಗದಂತೆ, ಅವನ ಮನದಲ್ಲಿ ಒಂದು ಪ್ರತಿಕ್ರಿಯೆ ಮೂಡಿತು. ತಾನು ಸುಂದರನೆಂಬ ಭಾವನೆಯು ಕರ್ಣನ ಮನದಾಳದಲ್ಲಿ ನೆಲೆನಿಂತಿತ್ತು. ತನ್ನ ಕುಲದ ಕಾರಣ ದಿಂದಾಗಿ, ತನ್ನ ಸೌಂದರ್ಯಕ್ಕೆ ತನ್ನ ಬಲಕ್ಕೆ ಉಚಿತವಾದ ಭೋಗವು ತನಗೆ ದೊರೆಯಲಿಲ್ಲ; ಆದರೂ ತನ್ನ ಸೌಂದರ್ಯವು, ಬೇರೆ ಯಾವುದೇ ಪುರುಷನ ಸೌಂದರ್ಯಕ್ಕಿಂತ ಅಧಿಕವಾಗಿ, ನೋಡುವವರನ್ನು ಆಕರ್ಷಿಸುವುದೆಂಬುದನ್ನು ಅವನು ಅರಿತಿದ್ದ. "ನನ್ನ ಹುಟ್ಟು ದೈವಾಧೀನ. ಆದರೆ ಪೌರುಷವು ನನ್ನ ಕೈಯಲ್ಲಿದೆ; ಪರಾಕ್ರಮವು ನನ್ನ ಕೈಯಲ್ಲಿದೆ"–ಎಂದು ಹೇಳುತ್ತಿದ್ದ ಅವನು, ತನ್ನ ಅತಿಸುಂದರವೂ ಭವ್ಯವೂ ಆದ ವ್ಯಕ್ತಿತ್ವವನ್ನು ಮಾತ್ರ ತಪ್ಪಿಯೂ, ಎಲ್ಲಿಯೂ ಉಲ್ಲೇಖಿಸುವುದಿಲ್ಲ. ಆತ ಉಲ್ಲೇಖಿಸುವುದು ಕೇವಲ ಅವನ ಪ್ರಯತ್ನ ಗಳನ್ನಷ್ಟೇ; ಪುರುಷಾರ್ಥಭರಿತವೃತ್ತಿಯನ್ನಷ್ಟೇ. ಆದರೆ ತನ್ನ ನಿಸರ್ಗದತ್ತ ಸೌಂದರ್ಯದ ಅಭಿಮಾನ ಮತ್ತು ಅದರ ನಿಸರ್ಗದತ್ತ ಕೌತುಕ ಇವು, ನೋಡಿದವರ ಕಣ್ಣುಗಳಲ್ಲಿ ಮೂಡಿ ಹೋಗುತ್ತವೆಯೆಂಬುದರ ಅರಿವು ಅವನ ಮನಸ್ಸಿನಲ್ಲಿ ಎಷ್ಟೊಂದು ಆಳಕ್ಕೆ ಇಳಿದು ನಿಂತಿತ್ತೆಂದರೆ, ಅದನ್ನೂ ಪ್ರತ್ಯೇಕವಾಗಿ ಬಾಯಿಬಿಟ್ಟು ಹೇಳಬೇಕಾದಷ್ಟು ಬೇರೆಯಾಗಿ ಉಳಿದಿರಲಿಲ್ಲ.

ಆದೇ, ಯಾವಾಗ ಕಿವಿಗಳನ್ನು ತನ್ನ ಕೈಯಾರ ಕೊಯ್ದುಕೊಂಡನೋ ಆವಾಗ ಮಾತ್ರ, ಅಂದಿನ ತನಕ ತನಗಿದ್ದ ನಿಸರ್ಗದತ್ತ ಕೊಡುಗೆಯಿತ್ತೋ ಅದು ಹೊರಟುಹೋಯಿತೆಂಬುದರ ಅರಿವು ಅವನಲ್ಲಿ ಉಂಟಾಯಿತು. ಕುಂಡಲಗಳು ಹೋದದ್ದಕ್ಕಾಗಿ ಅವನು ಸ್ವಲ್ಪವೂ ಹಳಹಳಿಸಲಿಲ್ಲ. ಆದರೆ ಹುಟ್ಟಿನೊಂದಿಗೇ ಅವನಿಗೆ ದತ್ತವಾಗಿ ಬಂದಿದ್ದ ಆ ಒಂದು ಕೊಡುಗೆ ವಿಚ್ಛೇದವಾಯಿತೆಂಬುದು

ಮಾತ್ರ ಅವನ ಮನಸ್ಸಿಗೆ ತೀವ್ರವಾಗಿ ತಟ್ಟಿತು. ಅಭಾವಿತವಾಗಿಯೇ ಅತ, ಬೇಡಿಕೆಯನ್ನು ಮುಂದಿಟ್ಟ; ಯಾಚಕನೆಂದಲ್ಲ, ದೀನನಾಗಿಯಲ್ಲ. ಆದರೆ ಯಾವುದಾದರೊಂದು ಮೌಲಿಕವಾದದ್ದು, ಕೇವಲ ತನ್ನ ಹಕ್ಕಿನದು, ಕಳೆದು ಹೋದಾಗ, ಅದನ್ನು ಬೇಡುವುದು, ಯಾರಿಂದಲಾದರೂ ಬೇಡುವುದು ಮನುಷ್ಯನ ಸ್ವಾಭಾವಿಕ ಪ್ರತಿಕ್ರಿಯೆ. ಅದೇ ಅಹೇತುಕ ಕ್ರಿಯೆ ಕರ್ಣನದಾಗಿತ್ತು. ಇಂದ್ರ ಮತ್ತು ಕರ್ಣ ಇಬ್ಬರ ಮನದಲ್ಲಿಯೂ ಏಕಕಾಲದಲ್ಲಿ ಈ ಪ್ರತಿಕ್ರಿಯೆ ಮೂಡಿತು; ಇಬ್ಬರ ಮನಸ್ಸುಗಳೂ ಏಕಕಾಲಕ್ಕೆ ಹಳಹಳಿಸಿದವು. ಕರ್ಣನು ತನ್ನ ಬಗ್ಗೆ ಹೀಗೆ ಹಳಹಳಿಸಿದ್ದು ಇದೇ ಮೊದಲು. ತನ್ನ ಬಗ್ಗೆ ಅವನಿಗೆ ಕನಿಕರವೆನಿಸಿತು; ಆದರೆ ಇಲ್ಲಿ ಆಗ ಕ್ರೋಧವಿರಲಿಲ್ಲ; ಕ್ಷಾತ್ರತೇಜಸ್ಸನ್ನು ಮರೆಮಾಡುವುದಿರಲಿಲ್ಲ. ಕ್ಷಾತ್ರತೇಜದ ಉದಾರ ಆವಿಷ್ಕಾರದಲ್ಲಿ ತನ್ನ ಕುರೂಪತೆಯ ಅರಿವು, ಬೇರೆ ಯಾರಿಗಾದರೂ ಆಗಬಹುದಾದಂತೆಯೇ, ಅವನಿಗೂ ಆಯಿತು. ಇಂತಹ ಅಸಾಮಾನ್ಯ ಕ್ಷಣದಲ್ಲಿ, ಸಮರ್ಪಣೆಯ ಕ್ಷಣದಲ್ಲಿ ತನ್ನದಾದ ಶರೀರವೂ ಪೂರ್ಣ ಸೌಂದರ್ಯದಿಂದ ತುಂಬುತ್ತಿರುವಾಗಲೇ ಮೃತ್ಯುವೇದಿಕೆಯ ಮೇಲೆ ಬೀಳಬೇಕೆಂದು ಅವನಿಗೆನಿಸಿತೆ? ಇಲ್ಲವೆಂದೇ ನನಗೆನಿಸುತ್ತದೆ. ಸುರೂಪತೆಯ ಅಂತವು ಮೃತ್ಯುವಿಗಿಂತಲೂ ಭಯಾನಕವಾಗಿರುತ್ತದೆ. ಆ ಭಯಾನಕತೆಯು, ಕ್ಷಣಮಾತ್ರದ್ದಾದರೂ ಪ್ರತ್ಯಕ್ಷವಾದ, ಅನುಭವವನ್ನು ಅವನು ಪಡೆದ. ಮತ್ತು ಆ ಅನುಭವದಿಂದಲೇ, ರಸಭರಿತ ಜೀವನದೊಂದಿಗಿನ ಅವನ ಸಂಬಂಧವು ದೃಢವಾಯಿತು.

ಆ ಸಮರ್ಪಣೆಯ ಕ್ಷಣದಲ್ಲಿ ಕರ್ಣನ ಸಾವು ನಿಶ್ಚಿತವಾಯಿತು. ಆದರೆ ಈ ಪ್ರತಿಕ್ರಿಯೆಯು, ಅವನನ್ನು ಬದಿಗೆ ತಳ್ಳಿಯೋ ಎಂಬಂತೆ, ಅವನೊಳಗಿಂದ ಮಿಂಚಿನಂತೆ ಉದ್ಭವಿಸಿತು. ಕ್ಷಣಭಂಗುರವಾದ ತನ್ನ ದೇಹಸೌಷ್ಠವದ ಬಗೆಗಿನ ಮಮಕಾರವು, ಭೀತಿಯ ಆಘಾತವುಂಡು ಮತ್ತಷ್ಟು ಸಚೇತನವಾಯಿತು. ಅವನ ಎಲ್ಲ ಇಚ್ಛೆಗಳೂ ಪ್ರಕೃತಿಸಹಜವಾದವು. ತನ್ನ ಸೌಂದರ್ಯದ ಚಿಂತನೆಯಲ್ಲಿ–ಕ್ಷಣಮಾತ್ರವಾದರೇನಾಯಿತು–ನಾರ್ಸಿಸಸನಂತೆ ಅವನು ಮುಳುಗಿದ. ಆದರೆ ಅವನಂತೆ ಅದರಲ್ಲಿಯೇ ಸಿಲುಕಿ ಬೀಳಲಿಲ್ಲ. ಇದಕ್ಕೆ ಕಾರಣವೆಂದರೆ, ಕರ್ಣನು ಮೂಲತಃ ಸ್ವಾರ್ಥಿಯಾಗಿದ್ದರೂ ಅತಿಯಾಗಿ ಕರ್ತವ್ಯಬದ್ಧನಾಗಿದ್ದನೆಂಬುದು. ಬಾಲ್ಯದಿಂದಲೂ ಅವಮಾನಕ್ಕೊಳಗಾಗಿದ್ದ ಅವನು ಸಹಜವಾಗಿಯೇ ಪೌರುಷದ ಆರಾಧಕನಾಗಿದ್ದನು. ಜೀವನದ ಉಪಭೋಗ ಮತ್ತು ಜೀವನ ಸಮರ್ಪಣೆ ಈ ಎರಡೂ ವಿರೋಧಿತುದಿಗಳನ್ನು ಅವನು

ಪ್ರತಿಕ್ಷಣದಲ್ಲೂ ಅನುಭವಿಸಿ ಆಯುಷ್ಯದಲ್ಲಿ ಹೊಯ್ದಿದ್ದನು. ಭೋಗಗಳನ್ನು ಆತ ದುರಾಸೆಯಿಂದ ಭೋಗಿಸಲಿಲ್ಲ. ದ್ರೌಪದಿಯ ಪತಿಯಾಗಲು ಅವನು ಯೋಗ್ಯನಾಗಿದ್ದನು. ಕೃಷ್ಣನು ಅವನಿಗೆ ಅವನ ಜನ್ಮವೃತ್ತಾಂತವನ್ನು ಹೇಳಿದ ನಲ್ಲದೆ, "ನೀನು ಪಾಂಡವರನ್ನು ಸೇರು; ದ್ರೌಪದಿಯು ನಿನ್ನನ್ನು ಪತಿಯೆಂದು ಸ್ವೀಕರಿಸುವಳು"- ಎಂದು ಆಶ್ವಾಸನೆಯನ್ನೂ ಕೊಟ್ಟನು. ಆದರೂ ಕರ್ಣನ ಮನಸ್ಸು ವಿಚಲಿತವಾಗಲಿಲ್ಲ.

ದ್ರೌಪದಿಯೇನು ಅವನಿಗೆ ಬೇಡವಾಗಿದ್ದಳೆ? ಯಾವ ದುಷ್ಪ್ರಾಪ್ಯ ಹೆಣ್ಣಿನ ಮನಸ್ಸನ್ನಾದರೂ ಆಕರ್ಷಿಸಿಕೊಳ್ಳಲು ಸಮರ್ಥನಾದ ಈ ಕರ್ಣನು ಎಷ್ಟು ಸ್ವಾಭಿಮಾನಿಯಾಗಿದ್ದನೆಂದರೆ, ಈ ಸ್ವಾಭಿಮಾನದೊಂದಿಗೆ ಬರುವ ಲೀನತೆ ಯನ್ನು ಅವನು ಸಹಜವಾಗಿ ಧರಿಸಿದ. ರಾವಣನಂತೆ, ಅವನು ತನ್ನ ಮನಸ್ಸನ್ನು ದ್ರೌಪದಿಯ ಸುತ್ತ ಸುಳಿದಾಡಲು ಬಿಡಲಿಲ್ಲ. ಹೆಚ್ಚೇನು? ದ್ರೌಪದಿಯನ್ನು ಅವನು ತುಚ್ಛಳನ್ನಾಗಿಯೇ ಎಣಿಸಿದನು. ಮತ್ತು, ರಾಧೆಯು ಆಯ್ಕೆ ಮಾಡಿದ ಹೆಣ್ಣುಗಳೊಂದಿಗೆ, ಸೂತಕನ್ಯೆಯರೊಂದಿಗೆ ಅವನು ಸುಖವಾಗಿ ಸಂಸಾರ ಮಾಡಿದ. ತನ್ನ ಮಕ್ಕಳ ಮೇಲೆ ಅಪಾರ ಪ್ರೇಮವನ್ನು ತೋರಿಸಿದ. ಕ್ಷತ್ರಿಯ ಕನ್ಯೆಯರ ಅಭಿಲಾಷೆಯನ್ನು ಆತ ಸಹಜವಾಗಿ ಗೆದ್ದ, ರಾಜನಾದ ನಂತರವೂ ಗೆದ್ದ. ಅವನು ಭೋಗಗಳ ಐಶ್ವರ್ಯವನ್ನು ಮನಗಂಡ, ಆದರೆ ಅದಕ್ಕೆ ದಾಸನಾಗಲಿಲ್ಲ. ಮಾನದಿಂದ ಏನು ದೊರೆಯಿತೋ, ಪ್ರೇಮದಿಂದ ಏನು ದೊರೆಯಿತೋ ಅದನ್ನು ಆತ ಸ್ವೀಕರಿಸಿದ. ದುರ್ಯೋಧನನು ಕೊಟ್ಟ ರಾಜಪದ ವನ್ನು ಆತ ಪರಿಗ್ರಹಿಸಿದ. ದುರ್ಯೋಧನನ ಕರುಣಾವೃತ್ತಿಯನ್ನು ಅವನು ಉಪೇಕ್ಷಿಸಲಿಲ್ಲ. ಕರ್ಣನಿಲ್ಲದಿದ್ದಲ್ಲಿ, ದುರ್ಯೋಧನನಲ್ಲಿಯ ಮೈತ್ರೀಭಾವವು ಎಂದೂ ಹೀಗೆ ವಿಕಸಿಸುತ್ತಿರಲಿಲ್ಲ. ಒಳಿತು-ಕೆಡುಕು, ನ್ಯಾಯ-ಅನ್ಯಾಯ ಇವನ್ನು ಪ್ರಸಂಗ ಬಂದಾಗ ಉಪೇಕ್ಷಿಸಿ, ಕರ್ಣನು, ಕೃತಜ್ಞತೆಯ ಈ ಅಂಕುರವನ್ನು ಬೆಳೆಯಿಸಿದನು. ಕರ್ಣನು ಒಳಗಿಂದೊಳಗೇ ಬೇಯುತ್ತಿದ್ದನು. ಜನ್ಮದ ಕಾಳಿಮೆಯಿಂದಾಗಿ ಗತಹೀನನಾದ ಕಾರಣದಿಂದ ಉರಿಯುತ್ತಿದ್ದನು. ಆ ಜ್ವಾಲೆಯು ಅವನ ರಸಿಕತೆ ಕಾಮುಕತೆಗಳನ್ನೆಲ್ಲ ನುಂಗಿಬಿಟ್ಟಿತ್ತು. ಒಂದೇ ಒಂದು ನಾಜೂಕಾದ, ಅತಿ ಆಂತರಿಕವಾದ, ಮೊಳಕೆ ಉಳಿದಿತ್ತು ಮತ್ತು ಅದು ಎಂದೂ ಸುಡುವುದಿಲ್ಲವೆಂದೇ ಉಳಿದಿತ್ತು. ಆ ಮೊಳಕೆ ಎಂದರೆ, ತನ್ನ ಸೌಂದರ್ಯದ ಸುಖದಾಯಕ ಅರಿವು. ಕರ್ಣನ ಸ್ವರೂಪವು, ಕುಂಡಲಗಳು ಹೋದ ಬಳಿಕವೂ, ಇಂದ್ರನ ವರದಿಂದಾದರೇನಂತೆ, ಹಿಂದಿನಂತೆಯೇ ಸುಂದರವೂ ಮೋಹಕವೂ

ಆಗಿ ಉಳಿಯಿತು. ಅವನಲ್ಲಿದ್ದ, ತನ್ನ ಸೌಂದರ್ಯವನ್ನು ಕುರಿತಾದ ಕಾತರತೆಯಲ್ಲಿ ಅತ್ಯಮೂಲ್ಯವಾದ ನೈತಿಕಸೌಂದರ್ಯದಿಂದ ಕೂಡಿದ ಮತ್ತೊಂದು ಕಾತರತೆಯನ್ನು, ಪರಮಕರುಣಾಕರವಾದ ಲಜ್ಜೆಯ ಭಾವನೆಯನ್ನು, ವ್ಯಾಸರು ಕಿಂಚಿತ್ ಭಾಸವಾಗುವ ರೀತಿಯಲ್ಲೇ ಅಡಗಿಸಿಟ್ಟಿದ್ದಾರೆ. ತನ್ನ ಕುರೂಪತೆಯನ್ನು ಕಂಡಲ್ಲಿ ತನ್ನ ಮಿತ್ರರಿಗೆ ವ್ಯಥೆಯಾದೀತು; ತನ್ನ ಶತ್ರುಗಳಿಗೆ, ಸೋದರರಿಗೆ, ಈ ಕುರೂಪತೆ ಕಂಡಲ್ಲಿ ಅವರು ತಿರಸ್ಕಾರದಿಂದಲೋ ಕರುಣೆಯಿಂದಲೋ, ತನ್ನೊಡನೆ ಸರಿಯಾಗಿ ಯುದ್ಧಮಾಡಲಾರರು; ತಾನು ಮಾಡಿದ ಗುಪ್ತದಾನವು ವಿಫಲವಾದೀತು–ಎಂಬ ಹೆದರಿಕೆಯಿಂದಲೇ ಎಂಬಂತೆ ಅವನು ಇಂದ್ರನಿಂದ ಪೂರ್ಣಸೌಂದರ್ಯದ ವರವನ್ನು ಬೇಡಿದನು; ಅಧೀರತೆಯಿಂದ ಬೇಡಿದನು; ಬಾಲಿಶಭಾವದಿಂದ ಬೇಡಿದನು. ಕರ್ಣನ ಮನಸ್ಸಿನ ಎಲ್ಲ ಬಿಗಿಕಟ್ಟುಗಳೂ ಆ ಕ್ರಿಯೆಯಲ್ಲಿ ಹೇಗೆ ಸಡಿಲಿಹೋಗಿವೆ! ಈ ಭಾವನೆಯಲ್ಲಿ ಯಾರ ಸಾವು ಸುಂದರವಾಗಿರುತ್ತದೋ ಅವನದೇ ಮನಸ್ಸಿನ ಬಿಗಿಯಾದ ಕಟ್ಟುನಿಟ್ಟುಗಳೆಲ್ಲ, ಕೊನೆಯ ಗಳಿಗೆಗೆ ಹೀಗೆ ಚೈತನ್ಯಪೂರ್ಣವಾಗಿ, ಆದರೆ ತೀರ ಸಡಿಲವಾಗಿ ಬಿದ್ದಿರುತ್ತವೆ. ಅಲ್ಲಿಂದಲೇ ಅವನ ಬದುಕು, ಹಿಂದೆಮುಂದೆ, ಹೀಗೊಂದು ರೀತಿ ಕೊನರುತ್ತಿರುತ್ತದೆ. ಕರ್ಣನ ಬದುಕಿನ ಹಸುರು ಚಿಗುರು ಈ ಸೌಂದರ್ಯ ಪಿಪಾಸೆಯ ಕ್ಷಣಕ್ಕೆ ಹೊಸಹೊಸದಾಗಿ ಮೂಡಿತು.

ಈ ಅರಿವಿನೊಳಗಿನಿಂದಲೇ, ಕರ್ಣನಿಗೆ, ತನ್ನ ವ್ಯಕ್ತಿತ್ವವನ್ನು ಸಮಗ್ರವಾಗಿ ದಿಟ್ಟಿಸುವುದು ಸಾಧ್ಯವಾಯಿತು; ಮತ್ತು ಎಲ್ಲವನ್ನೂ ಮುಗಿಸಿ ಮುಕ್ತನಾಗುವ ಶಕ್ತಿ ಬಂತು. ಅವನ ವ್ಯಕ್ತಿತ್ವವು ಅವನ ಇಡೀ ದೇಹಾಕೃತಿಯನ್ನು ವ್ಯಾಪಿಸಿ ನಿಂತಿದೆ. ಅವನ ಆಕೃತಿಯು, ಮಹಾಭಾರತದಲ್ಲಿಯ ಅತ್ಯಂತ ಸುಸ್ಪಷ್ಟವೂ ಎಲ್ಲಕ್ಕಿಂತ ಲಲಿತವೂ ಆದ ಆಕೃತಿಯಾಗಿದೆ. ಮಹಾಭಾರತದಲ್ಲಿಯ ವ್ಯಕ್ತಿಗಳ ಚಿತ್ರಗಳನ್ನು ಮನಸ್ಸಿನಲ್ಲಿಯೇ ರೇಖಿಸುವುದಾದರೆ, ದ್ರೌಪದಿ, ಕರ್ಣ, ಭೀಮ ಮತ್ತು ಕಿಂಚಿತ್ತಾಗಿ ಅರ್ಜುನ – ಈ ಪಾತ್ರಗಳಷ್ಟೆ ಕೈಗೆ ಸಿಗುತ್ತವೆ. ಆದರೆ ಒಂದು ಅಂಗುಲ ಕೂಡ ದೇಹರೇಖೆಯನ್ನು ಕಳೆದುಕೊಳ್ಳದ ಪರಿಪೂರ್ಣ ಆಕಾರ ಕರ್ಣನದೇ. ಪೌರುಷವು ಅವನ ಅಂಗಾಂಗಳಿಂದ ಹರಿಯುತ್ತದೆ. ನದಿಯ ಪ್ರವಾಹದ ನೀರು ಅದರ ದಂಡೆಗಳನ್ನು ಲೆಕ್ಕಿಸದೆ ನುಗ್ಗಿ ಹರಿಯುತ್ತದಲ್ಲವೆ, ಹಾಗೆಯೇ ಅವನ ಮುಖಚರ್ಯೆಯು ಅನೇಕ ಪ್ರಸಂಗಗಳಲ್ಲಿ ಅವನ ನರನಾಡಿಗಳೊಂದಿಗೆ, ಪ್ರತಿಯೊಂದು ಭಾವಾಂದೋಲನದಿಂದ ಕದಡಿ ಎದ್ದದ್ದು ನನಗೆ ಸ್ಪಷ್ಟವಾಗಿ ಕಾಣುತ್ತದೆ. ದ್ರೌಪದಿಯ ರೂಪವನ್ನು ನೆನೆಯುವುದೆಂದರೆ

ಮೊದಲು ಕಣ್ಣೆದುರಿಗೆ ಬರುವ ಚಿತ್ರ, ನ್ಯಾಯವನ್ನು ಬೇಡುವ ಕ್ರುದ್ಧ ಭಾಮಿನಿಯದು. ಭೀಮನು ಕೂಡ, ಕೇವಲ ಸ್ಫುರಣದಿಂದ ಹೋರಾಡುವ ಯೋಧನಾಗಿ ಕಾಣುತ್ತಾನೆ; ಅರ್ಜುನನು ಯಾವಾಗಲೂ, ನನಗೆ, ಅಧೋಮುಖಿಯಾಗಿ ಕಾಣುತ್ತಾನೆ; ಹಾಗಲ್ಲದಿದ್ದಾಗ ಮಗ್ಗುಲಾಗಿ ನಿಂತು ಇಲ್ಲವೇ ಬೆನ್ನಕಡೆಯಿಂದ ಕಂಡು ಯಾವುದಾದರೂ ಒಂದು ಕೆಲಸದಲ್ಲಿ ತೊಡಗಿದವನಾಗಿ ತೋರುತ್ತಾನೆ. ಆದರೆ ಕರ್ಣನದು ಹಾಗಲ್ಲ. ಕ್ರಿಯೆ ಎಂಬುದು ಅವನ ಮಟ್ಟಿಗೆ ಎರಡನೆಯ ದರ್ಜೆಯ ಸಂಗತಿ. ದ್ರೌಪದಿಯ ವಸ್ತ್ರಾಪಹರಣದ ಸಂದರ್ಭದಲ್ಲಿ ದುರ್ಯೋಧನನಿಗೆ ನಿರ್ಲಜ್ಜೆಯಿಂದ ಉತ್ತೇಜನ ನೀಡುವ ಕ್ರಿಯೆಯೇ ಇರಲಿ, ಕುಂಡಲಗಳನ್ನು ದಾನಮಾಡುವುದೇ ಇರಲಿ, ಇಲ್ಲವಾದರೆ ಘನಘೋರ ಯುದ್ಧವೇ ಇರಲಿ, ನಿಜವಾದ ಕರ್ಣನು ಆ ಕೃತ್ಯದಿಂದ ಮನಸಾ ದೂರವೇ ಇರುತ್ತಾನೆ. ಅವನನ್ನು ಸುಡುತ್ತಿರುವ ವ್ಯಥೆಯು ಅವನ ಮತ್ತು ಇತರರ ನಡುವೆ ಯಾವಾಗಲೂ ಅಂತರವನ್ನುಂಟುಮಾಡುತ್ತದೆ. ಆ ಮೂಲಕ ಪ್ರತಿಯೊಂದು ಪ್ರಸಂಗದಲ್ಲಿ ಅವನ ಹಾವಭಾವಗಳು ಇತರರವಕ್ಕಿಂತ ಬೇರೆಯಾಗಿದ್ದು ಎದ್ದುಕಾಣುತ್ತವೆ. ಅವನ ವರ್ತನೆಯು ದುಷ್ಟವಿರಲಿ, ಉದಾರವಿರಲಿ, ಅವನ ರೂಪ ಮಾತ್ರ ಯಾವಾಗಲೂ ವಿಲೋಭನೀಯವೆನಿಸುತ್ತದೆ. ಅವನ ಶವ ಕೂಡ ಸುಂದರವಾಗಿರುತ್ತದೆ.

ಕರ್ಣನು ಯಾವಾಗಲೂ ಏಕಾಕಿ, ಯಾವಾಗಲೂ, ತನಗೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನದಿಂದ ಪಕ್ಕಕ್ಕೆ ನೂಕಲ್ಪಟ್ಟವನಂತೆ ಇರುತ್ತಾನೆ. ಭಾರತೀಯ ಸಮಾಜದ ಜಾತಿಗಳ ಬೇಲಿಯು ಎಷ್ಟು ಭದ್ರವಾದುದೆಂದರೆ, ಅದನ್ನು ದಾಟಿ ಹೋಗುವುದೇ ಅಶಕ್ಯ. ಜಾತಿಬಾಹಿರನು ಎಷ್ಟೇ ದೊಡ್ಡವನಿರಲಿ ಅವನ ಬದುಕು ನಿರ್ಮಾಲ್ಯದಂತೆಯೇ. ಈ ನಿರ್ದಯ ಪಾರಂಪರಿಕ ನೀತಿಯ ಮೇಲೆ ಯಾರೂ ಆಕ್ಷೇಪವೆತ್ತುತ್ತಿರಲಿಲ್ಲ. ಜಾತಿಧರ್ಮವು ವ್ಯಕ್ತಿಯ ಹಿರಿಮೆಯನ್ನು ಲೆಕ್ಕಿಸುತ್ತಿರಲಿಲ್ಲ. ಕರ್ಣ ಏಕಲವ್ಯರ ಹಿರಿಮೆಯನ್ನು ಅರಿತಿದ್ದೂ ವ್ಯಾಸರಿಗೆ ಅವರ ಜಾತಿಮರ್ಯಾದೆಯ ಹೊರಗೆ ದೊಡ್ಡಸ್ತಿಕೆಯನ್ನಾಗಲಿ ಕೌಶಲವನ್ನಾಗಲಿ ಬಿಡುವುದು ಮನಸ್ಸಿಗೆ ಬರಲಿಲ್ಲ. ಸಾಮಾಜಿಕ ಕಟ್ಟುಕಟ್ಟಳೆಗಳು ಎಷ್ಟರ ಮಟ್ಟಿಗೆ ಅನುಲ್ಲಂಘನೀಯವಾಗಿರುತ್ತಿದ್ದವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ವ್ಯಕ್ತಿಗಳು ದೊಡ್ಡವರಾಗಿರುತ್ತಾರೆ; ಪರಮತತ್ತ್ವಜ್ಞಾನಿಗಳಾಗಿರುತ್ತಾರೆ. ಬ್ರಾಹ್ಮಣನಿಗಿಂತ ಧರ್ಮವ್ಯಾಧನು ವ್ಯುತ್ಪನ್ನನಿರಬಲ್ಲ. ಆದರೆ ಆತ ತನ್ನ ಪೂರ್ವ ಪರಂಪರೆಯ ಕರ್ಮವನ್ನೇ ಮಾಡಬೇಕು. ಈ ಉಚ್ಚ ನೀಚ ಭಾವನೆಯು

ವಿದುರನ ನ್ಯಾಯಬುದ್ಧಿಗೂ ಮಾರಕವಾಗಿ ಪರಿಣಮಿಸಿತು. ವ್ಯಕ್ತಿಯ ಒಳಿತು ಕೆಡುಕುಗಳ ಸಂದರ್ಭದಲ್ಲಿ ಆತ, ಯೋಗ್ಯವೆಂದು ಕಂಡದ್ದನ್ನು ಆಡಿದನು. ಆದರೆ ಎಲ್ಲಿ ಏಕಲವ್ಯನ ಅಥವಾ ಕರ್ಣನ ರೂಪದಲ್ಲಿ ಅಧರ್ಮಸಂತತಿಯ ಅಥವಾ ಹೀನ ಜಾತೀಯತೆಯ ಸಮಸ್ಯೆಯು ಎದುರು ನಿಂತಿತ್ತೋ, ಅಲ್ಲಿ ಅವನು, ಅದನ್ನು ಪಕ್ಕಕ್ಕೆ ಸರಿಸಿಯೇ ಇರಬೇಕಾಯಿತು. ಜಾತೀಯತೆಯ ವಿಷಮ ನೀತಿಯು ಬೌದ್ಧಿಕ ಅಥವಾ ಆತ್ಮಿಕ ಸಮತೆಗೆ ಅಡ್ಡ ಬರುತ್ತದೆಂಬ ಈ ತಿಳಿವಳಿಕೆಯು ಆ ಕಾಲದಲ್ಲಿರಲಿಲ್ಲ. ಆದರೆ ಏಕಲವ್ಯ-ಕರ್ಣ ಇಂಥವರ ರೂಪದಲ್ಲಿ ಒಂದು ಅನಾಮಿಕ ಕಟುಸತ್ಯವು ಮಾತ್ರ ಎಲ್ಲರಿಗೂ ಅನುಭವಿಸಲು ದೊರಕಿತು. ಪೂರ್ವಕರ್ಮದ ಮೂಲಕ ಈ ಲೋಕದಲ್ಲಿ ಜನ್ಮ ಸಿಕ್ಕುತ್ತದೆ. ಇಂತಹ ತಿಳುವಳಿಕೆಯ ಮೇರೆಗೆ ಯಾರ ಪಾಲಿಗೆ ಹೀನಜನ್ಮ ಬರುವುದೋ ಅವರು ತೆಪ್ಪಗೆ ದಿನ ದೂಡುವರು. ಆದರೆ ಈ ಕರ್ಮವಾದದ ಉದ್ದಗಲವಾದ ವಿಶಾಲವಾದ ತತ್ವಜ್ಞಾನವೂ ಕರ್ಣನ ಅತಿ ಘನವಾದ ವ್ಯಕ್ತಿತ್ವವನ್ನು ಸ್ಪರ್ಶಿಸಲಾರದಾಯಿತು. ದ್ರೌಪದಿಯ ಪೂರ್ವಜನ್ಮವನ್ನು, ಆಕೆ ಐವರು ಗಂಡಂದಿರನ್ನು ವರಿಸಿದೊಡನೆಯೇ, ವ್ಯಾಸರು ಪ್ರಕಟಮಾಡಬೇಕಾಯಿತು. ಆದರೆ ಹುಟ್ಟಿದೊಡನೆಯೇ ತಾಯಿಯು ಒಗೆದ ಕರ್ಣನ ಪೂರ್ವ ಜನ್ಮ ವೃತ್ತಾಂತವನ್ನು ಹೇಳಲು ಮಾತ್ರ ವ್ಯಾಸರು ಸಮರ್ಥರಾಗಲಿಲ್ಲ. ಸಮಗ್ರ ಮಹಾಭಾರತದಲ್ಲಿ ನಿಯತಿಯು ಸಂಪೂರ್ಣವಾಗಿ ಸುತ್ತಿಕೊಂಡ ವ್ಯಕ್ತಿಯು ಯಾರಾದರೂ ಇದ್ದರೆ ಅದು ಕರ್ಣನೇ. ಆದರೆ ಕರ್ಮದ ವಿಶಾಲತತ್ವಜ್ಞಾನವು ಅದರ ಪ್ರತ್ಯಕ್ಷ ಕೃತಿಯ ಮುಂದೆ ಹಾಗೂ ಸ್ವಾಭಿಮಾನೀ ಸಹಿಷ್ಣುತೆಯ ಮುಂದೆ ಕಡಿಮೆ ಬಿತ್ತು. ಭಗವದ್ಗೀತೆಯ ಇಡಿಯ ಕರ್ಮಯೋಗವು ಒಂದೆಡೆಗೆ ಹಾಗೂ ಯಾವ ತತ್ವಜ್ಞಾನವನ್ನೂ ಹೇಳದೆ, ಕೇವಲ ಪೌರುಷದ ಸೆರಗು ಹಿಡಿದು ಪಟ್ಟುಬಿಡದೆ ಸೆಟೆದು ನಿಲ್ಲುವ ಕರ್ಣನ ವ್ಯಕ್ತಿತ್ವವು ಇನ್ನೊಂದೆಡೆಗೆ. ಜೀವಂತನಾಗಿದ್ದಾಗಲೇ ಕರ್ಣನು ಅನಂತ ಮರಣಗಳನ್ನು ಅನುಭವಿಸಿದನು.

ವೀರೋಚಿತ ಪ್ರೀತಿಲಾಭದ ಹಾನಿಯನ್ನು ಕರ್ಣನು ದ್ರೌಪದೀ ಸ್ವಯಂವರದ ವೇಳೆಗೆ ನುಂಗಿದನು. ಅವನು ಎದ್ದ. ಆದರೆ ಗೆಲ್ಲುವುದು ಅವನಿಗೆ ಅಶಕ್ಯವಿದ್ದಿಲ್ಲ. ಸ್ವತಃ ಸೂರ್ಯನೇ ಆಹ್ಲಾದಗೊಂಡು ಮೇಲಿನಿಂದ ಅವನತ್ತ ಕೃಪೆಯಿಂದ ನೋಡುತ್ತಿದ್ದನು. ಆದರೆ "ನಾನು ಸೂತಪುತ್ರನನ್ನು ವರಿಸಲಾರೆ"ನೆಂಬ ದ್ರೌಪದಿಯ ಮಾತನ್ನು ಕೇಳಿದೊಡನೆ ಕರ್ಣನು ಸುಮ್ಮನೆ ಬಿಲ್ಲನ್ನು ಬಿಸುಟು ಬಿಟ್ಟನು. ಸೂರ್ಯನತ್ತ ನೋಡಿದನು. ಕ್ರೋಧದಿಂದ ಉರಿಯುತ್ತಿದ್ದರೂ

ಅವನತ್ತ ನೋಡಿ ನಕ್ಕನು. ತನ್ನ ಜನ್ಮದಾತನನ್ನು ಗುರುತಿಸಿ ಪೂರ್ತಿ ತಿಳಿದು ನಕ್ಕನು. ಈ ನಗುವು ಕ್ರೋಧಕ್ಕಿಂತ ಹೆಚ್ಚು ತೀವ್ರವಾಗಿತ್ತು. ಸರ್ವಸ್ವವನ್ನೂ ದಾನಮಾಡಿ, ಅವಮಾನ ಸಹಿಸುತ್ತ, ಬುದ್ಧಾ ಕುಬ್ಜನಾಗಿ ಬದುಕುವುದಿತ್ತು. ಕ್ಷುದ್ರತ್ವದ ಸೋಗನ್ನು ಚಾಲೂ ಇಡಬೇಕಾಗಿತ್ತು. ಮುಂದೆ ದ್ರೌಪದಿಯನ್ನು ಸಭೆಗೆ ಎಳೆತಂದಾಗ ಅವನು ನಕ್ಕ. ಆ ನಗುವು ದ್ರೌಪದಿಯ ಮನಸ್ಸಿನಿಂದ ಎಂದೂ ಅಳಿಸಿಹೋಗಲಿಲ್ಲ. ಆದರೆ ಆ ನಗುವು, ತನ್ನ ಸ್ವಯಂವರದ ಸಂದರ್ಭದ ವರ್ತನೆಗೆ ಮತ್ತು ಮಯಸಭೆಯಲ್ಲಿ ದುರ್ಯೋಧನನನ್ನು ನೋಡಿ ತಾನು ನಕ್ಕಿದ್ದಕ್ಕೆ ಅಷ್ಟೇ ಮರ್ಮಭೇದಕವಾದ ಪ್ರತ್ಯುತ್ತರವಾಗಿದೆಯೆಂಬುದು ಅವಳಿಗೆ ಹೇಗೆ ತಿಳಿಯಲಿಲ್ಲವೋ ಯಾರಿಗೆ ಗೊತ್ತು. ತಿಳಿದಿದ್ದರೆ ಕೃಷ್ಣನ ಮುಂದೆ ಅದನ್ನು ಕುರಿತು ಅವಳು ಅಷ್ಟೊಂದು ವ್ಯಾಖ್ಯಾನಮಾಡುತ್ತಿರಲಿಲ್ಲ. ದ್ರೌಪದಿಯನ್ನುದ್ದೇಶಿಸಿ ಸಭೆಯಲ್ಲಿ ಕರ್ಣನು ಏನೆಂದನೋ ಅದನ್ನು ಅವನು ವೀರನೆಂದು ಆಡಲಿಲ್ಲ, ಕ್ಷತ್ರಿಯನೆಂದು ಆಡಲಿಲ್ಲ, ರಾಜನೆಂದು ಆಡಲಿಲ್ಲ. ಸೂತಪುತ್ರನಾದ ರಾಧೇಯನು 'ದಾಸಿ'ಯನ್ನುದ್ದೇಶಿಸಿ ಆಡಿದನು. ತನ್ನ ಸ್ಥಿತಿಯನ್ನು ಕುರಿತು ಅವನು ಹಳಹಳಿ ಕಾಣಿಸಲಿಲ್ಲ. ಆದರೆ ಆ ಮಾತುಗಳು ಮಾತ್ರ ದ್ರೌಪದಿಯ ನಿರ್ಭರ್ತ್ಸನೆಗಿಂತ ಅವನ ಸ್ವಕೀಯ ಭಗ್ನಮನೋವೃತ್ತಿಗೆ ಹೆಚ್ಚು ದ್ಯೋತಕವಾಗಿತ್ತು.

ಕರ್ಣನ ನೈಸರ್ಗಿಕ ಪ್ರವೃತ್ತಿಗಳು, ಉದಾತ್ತಭಾವನೆಗಳು ಬಹಳ ಆಳವಾದವು. ಆದರೆ ಈ ಪ್ರೇರಣೆಗಳಿಗೆ ಸಾಲುವಷ್ಟು ಸಂಸ್ಕಾರಗಳು ಅವನ ದುರ್ದೈವದಿಂದಾಗಿ ಅವನಿಗೆ ದೊರೆತಿರಲಿಲ್ಲ. ಏಕಲವ್ಯನ ಉತ್ತರಕಥೆಯನ್ನು ವ್ಯಾಸರು ನಿರೂಪಿಸಿಲ್ಲ. ಆದರೆ ಕರ್ಣನ ಉತ್ತರವೃತ್ತಾಂತವನ್ನು ಮಾತ್ರ ಪೂರ್ವವೃತ್ತಾಂತಕ್ಕಿಂತಲೂ ನವಿರಾಗಿ ನಿರೂಪಿಸಿದ್ದಾರೆ. ಆದರೆ ಆ ವ್ಯಕ್ತಿ ಚಿತ್ರಣಕ್ಕೆ ಕೃತ್ರಿಮತೆಯ ಬಾಧೆಯು ಎಲ್ಲಿಯೂ ಸೋಕದಂತೆ ನೋಡಿ ಕೊಂಡಿದ್ದಾರೆ. ಕರ್ಣನ ಪರಮಭೂಷಣವೆಂದರೆ ಅವನ ಔದಾರ್ಯ ಹಾಗೂ ನಿರುಪಮ ಸೌಂದರ್ಯ. ಪಾಂಡವರ ಬಗ್ಗೆ ಮನದೊಳಗೆ ದ್ವೇಷಾಗ್ನಿ ಉರಿಯು ತ್ತಿದ್ದರೂ ಕುಂತಿಗೆ ಅವನು ನೀಡಿದ ವಚನವೆಂದರೆ ಅವಳ ಉಡಿಯಲ್ಲಿ ಅವನು ಹಾಕಿದ ತನ್ನ ಸಾವು. ಯಾವ ಅವನ ಜೀವನವನ್ನು ಅವಳು ಈ ಹಿಂದೆ ಬಿಸುಡಿಬಿಟ್ಟಿದ್ದಳೋ ಅದೇ ಜೀವನಕ್ಕೆ ಮರಣದ ಆಕಾರವನ್ನು ಕೊಟ್ಟು ಅವನು ಅದನ್ನು ಅವಳತ್ತ ಮತ್ತೆ ಬಿಸುಡಿಬಿಟ್ಟನು. "ಈ ನಿನ್ನ ತುಚ್ಛದೇಹವು ನಿನಗೇ ಪ್ರತ್ಯರ್ಪಣ" ಎಂದಂತಿತ್ತು ಅದು. ಕುಂಡಲಗಳ ದಾನದಲ್ಲಿ ತಾನೆ ಬೇರೆ ಏನಿತ್ತು?

ಆದರೆ, ಯುದ್ಧಕೌಶಲ, ವಿಲಕ್ಷಣ ಪ್ರಗಲ್ಭ ವ್ಯಕ್ತಿತ್ವ ಮತ್ತು ಶೂರೋಚಿತ ಧೈರ್ಯ ಅವನಲ್ಲಿ ಇದ್ದರೂ, ಹಲವು ಬಾರಿ, ಅವನ ವ್ಯಕ್ತಿತ್ವವು ಸಂಸ್ಕಾರಹೀನವೆನಿಸುತ್ತದೆ. ದ್ರೌಪದಿಯನ್ನು ಕುರಿತು ಸಭೆಯಲ್ಲಿ "ಹಸು, ಹಸು" ಎಂದು ಕೂಗುವುದು; "ನಿನ್ನ ಐವರು ಗಂಡಂದಿರೂ ಹೋದರು, ಈಗ ಈ ಕೌರವರ ಬಳಿಯೇ ನೀನು ದಾಸಿಯಾಗಿರು" ಎನ್ನುವುದು; ಯುದ್ಧ ಸಮಯದಲ್ಲಿ ಭೀಷ್ಮರನ್ನು "ಮೂರ್ಖ, ತಿಂಡಿಪೋತ, ಹೇಡಿ" ಎನ್ನುವುದು; ದ್ಯೂತದ ಮಸಲತ್ತಿನಲ್ಲಿ ಶಕುನಿಯನ್ನು ಎತ್ತಿಹಿಡಿಯುವುದು; ಪಾಂಡವರು ಕಾಡಿನಲ್ಲಿ ಒಂಟಿಯಾಗಿದ್ದಾಗ ಅವರ ಮೇಲೆ ಮುತ್ತಿಗೆ ಹಾಕಲು ಸಲಹೆ ನೀಡುವುದು ಈ ಸಂಗತಿಗಳು ಗ್ರಾಮ್ಯಸಂಸ್ಕಾರದ ಸೂಚಕಗಳು. ಪಾಂಡವರು ಕೂಡ ಕಾಲಕಾಲಕ್ಕೆ ಈ ಸಂಗತಿಗಳನ್ನು ನೇರವಾಗಿ ಎತ್ತಿ ಆಡಿದ್ದಾರೆ. ಯುದ್ಧದಲ್ಲಿ ಭೀಮನನ್ನು ಕುರಿತು ಕರ್ಣನು ಆಡಿದ ಮಾತುಗಳು ಕ್ಷತ್ರಿಯಧರ್ಮಕ್ಕೆ ಉಚಿತವಾದುವಲ್ಲವೆನ್ನುತ್ತಾನೆ ಅರ್ಜುನ. ಇಷ್ಟೇ ಅಲ್ಲ ಅವನು ಕರ್ಣನನ್ನು 'ಪ್ರಾಕೃತ', 'ಮೂಢ' ಎಂದು ಜರೆಯುತ್ತಾನೆ ಕೂಡ. ಕಲಹಸಮಯದಲ್ಲಿ ಇತ್ತಂಡದಿಂದಲೂ ನಿಜವೇ ಹೊರಬರುತ್ತದೆ; ಆದರೆ ಅದು ಕರ್ಕಶವಾಗಿರುತ್ತದೆ, ಅವಾಸ್ತವವಾಗಿರುತ್ತದೆ. ಕೃಷ್ಣ, ಕರ್ಣ, ಅರ್ಜುನ ಯಾರೂ ಇದಕ್ಕೆ ಹೊರತಲ್ಲ. ಆದರೂ ಕರ್ಣನ 'ಪ್ರಾಕೃತ'ವೃತ್ತಿಯ ಉಲ್ಲೇಖವನ್ನು, ಸಹಜವಾಗಿಯೇ, ಮುಚ್ಚಿಡಲು ಬರುವುದಿಲ್ಲ. ರಾಜಪುತ್ರನೆಂದು ಕರ್ಣನಿಗೆ ಯಾರಾದರೂ ಕೌತುಕದಿಂದ ಕೊಂಡಾಟವನ್ನು ಕಲಿಸಿದ್ದುಂಟೋ? ಸಭೆಯಲ್ಲಿ ಹೇಗೆ ನಡೆದುಕೊಳ್ಳಬೇಕು, ರಾಜನೀತಿಯ ಇಮ್ಮೊಗದ ಧೋರಣೆಯನ್ನು ನಯವಾಗಿ ಹೇಗೆ ಸಂಭಾಳಿಸಬೇಕು ಎಂಬುದನ್ನಾಗಲೀ ವ್ಯವಹಾರದಲ್ಲೂ ಮೃದುಮಾತಿನಲ್ಲೂ ಕಟುವಾಗಿ ಚುಚ್ಚುವ ರೀತಿಯಲ್ಲಿ ಮಾತಾಡುವ ದೊಡ್ಡಜನಗಳ ತಂತ್ರವನ್ನಾಗಲಿ ಅವನಿಗೆ ಯಾರಾದರೂ ಕಲಿಸಿದರೆ? ಅವನು ಕಲಿತದ್ದೆಲ್ಲ ತನ್ನಷ್ಟಕ್ಕೇ. ಜನ್ಮತಃ ಬಹಳ ಶ್ರೇಷ್ಠನಾಗಿದ್ದುದರಿಂದ ಅವನು ಹಿಂದುಳಿಯಲಿಲ್ಲ–ಅಷ್ಟೆ. 'ಸೂತ ಪುತ್ರ'ನೆಂಬ ನಿಂದೆ ಹಗಲೂ ರಾತ್ರಿ ಅವನನ್ನು ಎಲ್ಲ ಕಡೆಯಿಂದಲೂ ತಿಂದುಹಾಕುತ್ತಿತ್ತು. ಮಡಿದ ಮೇಲಷ್ಟೇ ಅವನು ಪಾರ್ಥನಾದುದು; ಕ್ಷತ್ರಿಯ ನಾದುದು. ಕ್ಷತ್ರಿಯತ್ವದ ಸಂಸ್ಕಾರಗಳಿಗೆ ತಾನು ಎರವಾದೆನೆಂಬ ಶಲ್ಯವು ಅವನನ್ನು ಇತರ ದುಃಖಗಳಿಗಿಂತ ಹೆಚ್ಚಾಗಿ ತಿವಿಯುತ್ತ ಬಂತು. ಏಕೆಂದರೆ,

ವೀರಾವೇಶವನ್ನು ಹತ್ತಿಕ್ಕಿ ಕೇವಲ ಸೂತಪುತ್ರನೆಂದು ಬದುಕುವುದು ಸರ್ವಥಾ ಅಶಕ್ಯವಿತ್ತು. ಭಾರತಯುದ್ಧವು, ಕರ್ಣನ ಪಾಲಿಗೆ ಮಿಗಿಲಾದ ದೈವಿಕ ವರವಾಗಿ ಪರಿಣಮಿಸಿತು.

ಸೂತಪುತ್ರನೆಂಬ ತುಚ್ಛಬಿರುದನ್ನು ಕರ್ಣನು ಅದೆಷ್ಟು ಸಲ ಕೇಳಬೇಕಾಗಿ ಬಂತೋ ಬಲ್ಲವರಾರು? ಅದನ್ನು ಅತ ಕೆಲವೊಮ್ಮೆ ಸುಮ್ಮನೆ ನುಂಗಿ ಕೊಳ್ಳುತ್ತಿದ್ದ. ಕೆಲವೊಮ್ಮೆ ಅವುಡುಗಚ್ಚಿ ನುಂಗಿಕೊಳ್ಳುತ್ತಿದ್ದ. ಆದರೆ ಅವನ ಮರ್ಮದ ಮೇಲೆ ಯಾರಾದರೂ ಅತಿ ದೊಡ್ಡ ಪೆಟ್ಟುಕೊಟ್ಟಿದ್ದರೆ ಅದು ಭೀಷ್ಮನೇ. ಕರ್ಣನ ಯುದ್ಧಕೌಶಲದ ಕಲ್ಪನೆಯು, ರಂಗಭೂಮಿಯ ಪ್ರಸಂಗ ದಲ್ಲಿ ಕುಂತಿಗೆ ಬಹಳ ಚೆನ್ನಾಗಿ ಬಂದಿತ್ತು. ಈ ಹುಡುಗ, ಕೌರವರ ಕಡೆಗೆ ಹೋಗಿ, ತನ್ನ ಮಕ್ಕಳ ವೈರಿಯಾಗುವನೆಂದು ತಿಳಿದು ಅವಳು ವ್ಯಥೆಗೊಂಡಿದ್ದಳು. ಆದರೆ ಯುದ್ಧಕುಶಲ ಭೀಷ್ಮರಿಗೆ ಮಾತ್ರ ಈ ಸಂಗತಿ ಮನವರಿಕೆಯಾಗದು; ಇದೇ ಸೋಜಿಗ! ಯುದ್ಧವು ಆರಂಭವಾಗುವ ಸಮಯ; ಆಗ ಈ ಸೇನಾಪತಿ ಭೀಷ್ಮರು ಎಲ್ಲ ಯೋಧರ ಗುಣಗಳನ್ನೂ ವರ್ಣಿಸುತ್ತಿದ್ದರು. "ಇವನು ರಥಿ", "ಇವನು ಮಹಾರಥಿ" ಎಂದು ಮುಂತಾಗಿ ಹೇಳುತ್ತಾ, ಕರ್ಣನ ಸರದಿ ಬಂದಾಗ, ಎಲ್ಲರ ಎದುರಿನಲ್ಲಿಯೇ "ಈ ಕರ್ಣನು ಅರ್ಧರಥಿ" ಎಂದರು. ಸೂತಪುತ್ರನು ಮಹಾರಥಿಯಾಗಲಾರ. ಅಂಗದೇಶದ ರಾಜನನ್ನಾಗಿ ಮಾಡಿದರೂ ಸಾರಥಿಯ ಮಗನಾದವನು ಅರ್ಧರಥಕ್ಕಷ್ಟೇ ಭಾಗದಾರ. ಭೀಷ್ಮರ ಬಾಯಿಂದ ಗತಾನುಗತಿಕ ಜಾತೀಯ ಪರಂಪರೆಯು ಮಾತಾಡುತ್ತಿತ್ತು. ದ್ರೌಪದಿಯ ಮಾತನ್ನು ಸುಲಭವಾಗಿ ನುಂಗಬಹುದಾಗಿತ್ತು. ಆದರೆ ಈ ಮಾತುಗಳು ಮಾತ್ರ ಕರ್ಣನಿಗೆ ದುಸ್ಸಹವಾಗಿದ್ದವು. ಇಡೀ ಜೀವಮಾನ ದಲ್ಲಿಯೇ ಮೊಟ್ಟಮೊದಲ ಸಲ, ತನ್ನನ್ನು ಕುರಿತು ಯಾರಾದರೂ ಅವಮಾನಕರ ವಾಗಿ ಮಾತಾಡಿದರೆಂದು ಅವರನ್ನು ಕರ್ಣನು ಅಲ್ಲಿಂದಲ್ಲಿಯೇ ನಿಷೇಧಿಸಿದ್ದರೆ ಅದು ಆ ಹೊತ್ತಿನಲ್ಲಿಯೇ. ದುರ್ಯೋಧನನಿಗೆ ಕೂಡ ಈ ಮಾತು ಕೇಳಿ ಒಳಿತೆನಿಸಲಿಲ್ಲ. ಭೀಷ್ಮನ ವಿರುದ್ಧವಾಗಿ ಅವನು ಕರ್ಣನಿಗೆ ಉತ್ತೇಜನವಿತ್ತನು. ಕರ್ಣನ ಕ್ರೋಧದ ಉದ್ಗಾರಗಳು ಹಲವು ಮಹಾಭಾರತದಲ್ಲಿವೆ. ಹೆಚ್ಚೇನು? ಸಿಡಿದೆದ್ದು ರೇಗಿ ಚುಚ್ಚಿ ನುಡಿಯುವುದೇ ಅವನ ಸ್ವಭಾವ. ಮನಸ್ಸಿನಲ್ಲಿ ಪ್ರೇಮವಿದ್ದರೂ ಮನಸ್ಸಿನ ಕಟುತೆಯನ್ನು ಅಡಗಿಸುವುದು ಅವನಿಗೆ ಸ್ವಲ್ಪವೂ ಸಾಧ್ಯವಾಗಲಿಲ್ಲ. ಅಡಗಿಸುವುದು ಅಗತ್ಯವೆನಿಸಲೂ ಇಲ್ಲ. ಉಗ್ರತೆಯು ಪೌರುಷದ ಒಂದು ಮಹತ್ವದ ಅಂಗವೆಂದೇ ಅವನಿಗೆನ್ನಿಸಿರಬೇಕು. ಆದರೆ

ಅಂಗೈಯಲ್ಲಿ ಶಿರವಿಟ್ಟುಕೊಂಡು ಹೋರಾಡಲು ಸಿದ್ಧನಾದ ಅವನಿಗೆ, ಭೀಷ್ಮರು ಎಲ್ಲರೆದುರು ಅರ್ಧರಥಿಯೆಂಬಾಗ ಬಂದಷ್ಟು ಸಿಟ್ಟು ಬೇರಾವ ಪ್ರಸಂಗದಲ್ಲೂ ಬಂದಿರಲಿಲ್ಲ.

ಭೀಷ್ಮನಿಗೆ ಕರ್ಣನ ಮಾತುಗಳು ಉದ್ಧಟ ಹಾಗೂ ದರ್ಪಯುಕ್ತವೆಂದು ತೋರಿದರೂ, ಅವು ಸಂಪೂರ್ಣ ಸತ್ಯವಾದವು. ಅಂತಹವನ್ನು ಯಾರೂ ಯಾರಿಗೂ ಎಂದೂ ಆಡಿರಲಿಕ್ಕಿಲ್ಲ. ಆದರೆ ಅವನ್ನು ಆಡುವವನು ಕರ್ಣನೂ ಕೇಳುವವರು ಭೀಷ್ಮರೂ ಆಗಿದ್ದರು. ಆದ್ದರಿಂದಲೇ ಅವಕ್ಕೆ ವಿಶೇಷ ಮೌಲ್ಯವಿರುವುದು. ಕೃಷ್ಣನೊಂದಿಗೂ ಕುಂತಿಯೊಂದಿಗೂ ಮಾತಾಡುವಾಗ ತಾನು ಪಾಲಿಸಿದ ಸಂಯಮವನ್ನು ಕರ್ಣನು ಇಲ್ಲಿಯೂ ಪಾಲಿಸಿದನು. ಭೀಷ್ಮನ ಮರ್ಮಗಳನ್ನು ಆತ ಹೊರದೆಗೆಯಲಿಲ್ಲ. ತನ್ನ ಮನೋ ದೌರ್ಬಲ್ಯವನ್ನು ಪ್ರಕಟಪಡಿಸಲಿಲ್ಲ. ಆದ್ದರಿಂದಲೇ ಅವನ ಈ ಮಾತುಗಳು ಅತ್ಯಂತ ಪ್ರಖರವಾಗಿವೆ. ಕರ್ಣನು ಭೀಷ್ಮರಿಗೆ ಹೇಳುತ್ತಾನೆ, "ನೀವು ಜೀವಂತ ವಾಗಿರುವವರೆಗೆ ನಾನು ಯುದ್ಧ ಮಾಡುವುದಿಲ್ಲ. ನಿಮ್ಮ ಕೈಯಿಂದ ಪಾಂಡವರು ಸತ್ತರೆ, ನಾನು ದುರ್ಯೋಧನನ ಅನುಮತಿ ಪಡೆದು ಶಾಶ್ವತ ವನವಾಸವನ್ನು ಸ್ವೀಕರಿಸುವೆನು. ನೀವು ಪಾಂಡವರಿಂದ ಹತರಾದರೆ ಒಂದೇ ರಥದಿಂದ ಎಲ್ಲ ಮಹಾರಥಿಗಳನ್ನೂ ಸಂಹರಿಸುವೆನು" ಎಂದು. ಅಂತೆಯೇ ಮಾನಧನನಾದ ಅವನು ಹತ್ತು ದಿನ ಯುದ್ಧದಲ್ಲಿ ಭಾಗವಹಿಸಲಿಲ್ಲ. ಭೀಷ್ಮರು ಕೊನೆಗೆ, ಬಿದ್ದರು; ಆಗ ಮಾತ್ರ ಅವನು ಕರ್ತವ್ಯನಿಷ್ಠ ಯೋಧನಾದ. ಅವನೊಳಗಿನ ಉದ್ದಾಮವೂ ಉತ್‌ಸ್ಫೂರ್ತವೂ ಆದ ಕೊನೆಮಟ್ಟದ ಆವೇಶವು ಮಾಯವಾಯಿತು. ಅವನು ಮನುಷ್ಯನಾದನು. ಭೀಷ್ಮರ ಅನುಯಾಯಿಯಾದನು. ನಮ್ರ ಯೋಧನ ಭೂಮಿಕೆಯಲ್ಲಿ, ಗತಿಸಿದ ಸೇನಾಪತಿಯ ಬಗ್ಗೆ ದುಃಖಿಸಿದನು. ಅವನು ಯುದ್ಧದಲ್ಲಿ ಎರಡು ಸಲ ಕಣ್ಣೀರು ಕರೆದಿದ್ದಾನೆ; ಭೀಷ್ಮ ಸತ್ತಾಗ ಒಮ್ಮೆ, ತನ್ನ ಮಗ ಸತ್ತಾಗ ಇನ್ನೊಮ್ಮೆ. ಭೀಷ್ಮರು ಕೂಡ ಆ ಪ್ರಸಂಗದಲ್ಲಿ ಅವನ ಭಾವನೆ ಗಳನ್ನು ಹಾಗೂ ಶೌರ್ಯವನ್ನು ಗೌರವಿಸಿಯೇ ಅವನಿಗೆ ಹೋರಾಡಲು ಪ್ರೋತ್ಸಾಹ ನೀಡಿದರು.

ಇದು ಒಂದು ಸಣ್ಣ ಪ್ರಸಂಗ. ಆದರೆ ಇದರ ಸುತ್ತಲೂ ಅದೆಷ್ಟು ಜಟಿಲ ಭಾವನೆಗಳ ನಾಟ್ಯವನ್ನು ವ್ಯಾಸರು ಆಡಿಸಿರುತ್ತಾರೆ. ಇಲ್ಲಿ ಶಾಪದ ವೃತ್ತಾಂತ ವನ್ನು ಎಳೆದೆಳೆದು ಜಗ್ಗಿ ತಂದ ಕಾರಣವಿಲ್ಲ. ಎರಡು ಪ್ರಭಾವಶಾಲೀ

ಮನಸ್ಸುಗಳ ಸಂಘರ್ಷವಿದೆ. ಸಂಘರ್ಷದ ಸ್ವಾಭಾವಿಕ ಪರಿಣತಿಯಲ್ಲಿಯೇ ಈ ಪ್ರಸಂಗದ ಕಲಾಮೌಲ್ಯವು ಅಡಗಿದೆ. ಅಪರಿಮಿತ ಕ್ಷೋಭೆಯ ವಿಸರ್ಜನೆಯು ಕ್ಷಮಾಶೀಲ ಶೋಕದಲ್ಲಿಯೇ ಆಗುವುದು. ಕರ್ಣನ ಜೀವನದೊಂದಿಗೆ ಸುಸಂಗತವಾಗಿರುವ ಸತ್ಯವನ್ನು ತೀರ ಅರ್ಥಸ್ಫುಟವಾಗಿರುವಂತೆ ವ್ಯಾಸರು ಇಟ್ಟಿದ್ದಾರೆ. ಅವನಿಗೆ ತನ್ನ ಜನ್ಮವೃತ್ತಾಂತವು ಅನಪೇಕ್ಷಿತ ರೀತಿಯಲ್ಲಿ ಕೃಷ್ಣನಿಂದ ತಿಳಿಯಿತು. ತೀರ ಆಕಸ್ಮಿಕ ರೀತಿಯಲ್ಲಿ ಭೀಷ್ಮರು ಮಾಡಿದ ಅವಮಾನವನ್ನು ಅವನು ಅನುಭವಿಸಿದ. ಈ ಉತ್ತರೋತ್ತರ ಯುದ್ಧೋನ್ಮುಖವಾದ ಎತ್ತರಕ್ಕೇರುವ ಆಕಸ್ಮಿಕತೆಯ ಕೊನೆಯ ಬಿಂದುವೆಂದರೆ ಭೀಷ್ಮರಿಗೆ ಅವನು ಕೊಟ್ಟ ಪ್ರತ್ಯುತ್ತರ ಮತ್ತು ಅವನ ಆಕಸ್ಮಿಕ ಶಸ್ತ್ರಸನ್ಯಾಸ. ಈ ಬಿಂದುವಿಗೆ ತಿರುವು ಭಾವನೋತ್ಕಟ ಶೋಕ ನಿದರ್ಶನದಿಂದ ಆಗುವುದರಲ್ಲಿ ಸೋಜಿಗವಿಲ್ಲ. ಯೋಧನ ಆವೇಶವು ಏರಿಕೆಯಲ್ಲಿರುತ್ತದೆ. ಆದರೆ ಅವನ ಮನಸ್ಸು ಭಾವುಕವಿರುತ್ತದೆ, ಶ್ರದ್ಧಾಳುವಾಗಿರುತ್ತದೆ. ಯಾರ ಮೇಲೆ ಶ್ರದ್ಧೆಯಿಡಬೇಕೋ ಆ ಸೇನಾಪತಿಯೊಂದಿಗೇ ದುರ್ದೈವೀ ಕರ್ಣನ ಚಕಮಕಿ ಅಂತಹ ಸಮಯಕ್ಕೆ ನಡೆಯಬೇಕು, ಆ ಕ್ಷೋಭೆಯಿಂದ "ನೀನು ಇಲ್ಲವೆ ನಾನು" ಎಂಬಂಥ ಅವಸ್ಥೆಯು ಒದಗಬೇಕು – ಇದೂ ಕರುಣೆಯ ಒಂದು ಪರಿಹಾಸವೇ ಆಗಿದೆ. ಆದರೆ ಇಲ್ಲಿ ಕರ್ಣನನ್ನು ನಾವು, ಆತತಾಯಿ, ಅಸಂಸ್ಕೃತ ಎನ್ನಲು ಹಿಂಜರಿಯುವುದಿಲ್ಲ. ಹತ್ತು ದಿನಗಳವರೆಗೆ ಅವನು ಯುದ್ಧದಲ್ಲಿ ಭಾಗವಹಿಸದೆ ಹೋದುದರಿಂದ ಕೌರವರಿಗೆ ಬಹಿರಂಗವಾಗಿಯೇ ಬಹಳ ಹಾನಿ ಯುಂಟಾಯಿತು. ಇದೇನು ಅವನಿಗೆ ಗೊತ್ತಿರಲಿಲ್ಲವೇ? ಆದರೂ ಅವನು ಹಾಗೆಯೇ ಸುಮ್ಮನೆ ಕುಳಿತ. ಕುಂತಿಗೆ ಕೊಟ್ಟ ವಚನದ ಬೆಂಬಲವನ್ನು ಆತ ಪಡೆಯುತ್ತಿದ್ದನೇ? ಇತರ ಪಾಂಡವರನ್ನು ತಾನು ಕೊಲ್ಲುವುದಿಲ್ಲ; ಕೊಲ್ಲುವುದು ಕೇವಲ ಅರ್ಜುನನನ್ನು. ಹಾಗಾದರೆ ಭೀಷ್ಮರು ಅವರನ್ನು ಕೊಂದರೆ ದುರ್ಯೋಧನನಿಗೆ ಕಲ್ಯಾಣವೇ ಆಗುವುದು; ತಾನು ಕೊಟ್ಟ ಮಾತಿಗೆ ತಪ್ಪದಂತಾಗುವುದು – ಎಂದು ಅವನಿಗೆ ಅನಿಸಿತೆ? ತನ್ನ ಮಾತಿನಿಂದ ತಾನು ಯುದ್ಧದಿಂದ ನಿವೃತ್ತನಾದುದರಿಂದ, ಭೀಷ್ಮರಿಗೆ ಪರಾಕ್ರಮದ ಶಿಖರವನ್ನು ಮುಟ್ಟಬೇಕಾಗಿ ಬರುವುದು. ಈ ವೃತ್ತಿಯೂ, ಕರ್ಣನ ತ್ರಸ್ತ ಮನಸ್ಸಿನ ಹಿಂದೆ ಇರಲೇ ಇಲ್ಲ ಎಂದು ಹೇಳಲು ಬರುವುದಿಲ್ಲ.

ಈ ಯುದ್ಧದಲ್ಲಿ ಎರಡು ಪ್ರತಿಜ್ಞೆಗಳು ಹುಟ್ಟಿಕೊಂಡವು. ಎರಡರ ಸಂಬಂಧವೂ ಭೀಷ್ಮರೊಂದಿಗೇ ಬಂದದ್ದು. ಎರಡೂ ಶಸ್ತ್ರತ್ಯಾಗದವು. ಅರ್ಜುನನನ್ನು ಉಳಿಸುವುದಕ್ಕಾಗಿ ಕೃಷ್ಣನು ತನ್ನ ಪ್ರತಿಜ್ಞೆಯನ್ನು ಭೀಷ್ಮರ ಮಟ್ಟಿಗಾದರೂ ಮುರಿಯಬೇಕಾಯಿತು. ಕರ್ಣನ ಪ್ರತಿಜ್ಞೆಯು ಭೀಷ್ಮಾವಸಾನದ ವರೆಗಿನದಾದ್ದರಿಂದ ಆ ಪ್ರತಿಜ್ಞಾಪೂರಣವು ಅವನಿಂದ ನೆರವೇರಿತು. ಭೀಷ್ಮರ ಅವಸಾನದ ಅನಂತರ, ಸಂಪೂರ್ಣ ಯೋಧನ ಭೂಮಿಕೆಯಲ್ಲಿ ಅತ್ಯಂತ ಉನ್ನತಗೊಂಡ ಕರ್ಣನ ವ್ಯಕ್ತಿತ್ವವು ನಮಗೆ ಕಂಡುಬರುತ್ತದೆ. ವಾಡಿಕೆಯ ದರಬಾರೀ ವಾತಾವರಣದಲ್ಲಿ, ಸಾಮಾಜಿಕ ವ್ಯವಹಾರದಲ್ಲಿ ಅವನ ಆಚರಣೆಯು ತುಸು ಗ್ರಾಮ್ಯವೆನಿಸಿದರೂ ಅವನ ವ್ಯಕ್ತಿತ್ವದ ಗರ್ಭವು ಪ್ರಖರವಾದ ನೀತಿಮತ್ತೆಯಿಂದ ತುಂಬಿತ್ತು. ಯೋಧನ ಭೂಮಿಕೆಯೇ ಅವನ ನಿಜವಾದ ಭೂಮಿಕೆ. ಅದು ಅವನಿಗೆ ಪೂರ್ಣವಾಗಿ ದೊರೆತ ಮೇಲೆ, ಅವನು ಪ್ರತಿ ಪ್ರಸಂಗದಲ್ಲಿಯೂ, ಈ ನೀತಿಯ ರಕ್ಷಣೆಯನ್ನು ಎಷ್ಟರಮಟ್ಟಿಗೆ ಮಾಡುತ್ತಿದ್ದನೆಂಬುದು ಕಂಡುಬರುತ್ತದೆ. ಯುದ್ಧದಲ್ಲಿ ಅದನ್ನು ಅರ್ಜುನನು 'ಅಧರ್ಮ'ವೆಂದು ಕರೆದುದು ಕೇವಲ ಒಂದು ಕಠೋರ ವಚನ. ಇನ್ನೊಂದು ಕಟುವಚನದ ಉದಾಹರಣೆಯೆಂದರೆ, ಶಲ್ಯ ಕರ್ಣರು ಪರಸ್ಪರ ಆಡಿಕೊಂಡ ದುರುತ್ತರಗಳು. ಆದರೆ ಇಲ್ಲಿಯೂ ಶಲ್ಯನೇ ಕಹಿನುಡಿಗಳನ್ನಾಡಲು ಮೊದಲು ಮಾಡುತ್ತಾನೆ. ಕರ್ಣನ ಸಾರಥ್ಯವು ತನಗೆ ಅವಮಾನಕರವೆಂದು ಆತ ಭಾವಿಸುತ್ತಾನೆ. ಆ ಅವಮಾನದ ಪರಿಹಾರ – ಪ್ರತೀಕಾರಗಳನ್ನು, ಬಹಿರಂಗವಾಗಿಯೇ ಬೈಗುಳನುಡಿಗಳನ್ನಾಡುವುದರ ಮೂಲಕ ಮಾಡಿಕೊಂಡನು. ಆದ್ದರಿಂದ ಈ ದುರುತ್ತರಗಳಿಗಾಗಿ ಕರ್ಣನನ್ನು ದೋಷಿಯೆಂದು ಬಗೆಯುವಂತಿಲ್ಲ. ಅರ್ಜುನನು ಭೀಮನ ನಿಮಿತ್ತವಾಗಿ (ಭೀಮನ ಜೀವವನ್ನು ತೆಗೆದುಕೊಳ್ಳುವ ಯುಕ್ತಿಗಳನ್ನು ಚಿಕ್ಕಂದಿನಲ್ಲಿ ದುರ್ಯೋಧನನಿಗೆ ಸೂಚಿಸಿದ್ದಕ್ಕಾಗಿ) ಕರ್ಣನನ್ನು ಕುರಿತು ಬಿರುನುಡಿಗಳನ್ನಾಡಿದನು. ಆದರೆ ಮುಂದೆ ಕರ್ಣನನ್ನು ಕುರಿತು ಕೃಷ್ಣನು ತೀರಿಸಿಕೊಂಡ ಬಾಯಿಚಪಲಕ್ಕೆ ಮತ್ತು ರಥಚಕ್ರವು ಭೂಮಿಯಲ್ಲಿ ಹೂತುಹೋದಾಗ ಅಧರ್ಮದಿಂದ ಅವನನ್ನು ಕೊಲ್ಲಿಸಿದ್ದಕ್ಕೆ ಏನೆನ್ನಬೇಕು?

ಎಲ್ಲಿ ಕೃಷ್ಣ, ಅರ್ಜುನ, ಯುಧಿಷ್ಠಿರ ಮತ್ತು ಭೀಮರು ಇರುವರೋ ಅಲ್ಲಿಯೇ ಗೆಲುವೆಂಬುದು, ಪ್ರತಿಜ್ಞೆಯಲ್ಲಿ ಮತ್ತು ಅನಂತರದ ಶೋಕ ರೂಪಿಯಾದ ಪ್ರತಿಕ್ರಿಯೆಯಲ್ಲಿ, ಕರ್ಣನಿಗೆ ಹೊಳೆದೇ ಇತ್ತು. ಆ ಶೋಕ ದಲ್ಲಿಯೇ ಅವನು ಅದನ್ನು ಉಚ್ಚರಿಸಿದನು ಮತ್ತು ಅರ್ಜುನನನ್ನು ಕೊಲ್ಲುವ ಹೆಣಗಾಟದಲ್ಲಿಯೇ ತನ್ನೆಲ್ಲ ಬಲವನ್ನೂ ವೆಚ್ಚಮಾಡಿದನು. ಇದೇ ಶೋಕದಲ್ಲಿ ಅವನು ಮೈತ್ರೀಭಾವದ ಉಲ್ಲೇಖವನ್ನೂ ಮಾಡಿದ್ದಾನೆ. ತನ್ನ ಕರ್ತವ್ಯವನ್ನು ತಾನು ಮಾಡದಿದ್ದಗೆ ಮಿತ್ರಋಣವನ್ನು ತೀರಿಸುವ ತನ್ನ ಪರಮಶ್ರೇಷ್ಠ ಕರ್ತವ್ಯವು ಉಳಿದುಹೋದೀತೆಂಬುದೇ ಅವನಿಗೆ ಕಾಳಜಿಯಾಗಿತ್ತು.

ಸಾಣೆ ಹಿಡಿಯದ ವಜ್ರದಂತೆ ಕರ್ಣನ ವ್ಯಕ್ತಿತ್ವ. ಅದರ ಅಂತರ್ಯದಲ್ಲಿ ತೇಜೋಗರ್ಭವಿದೆ. ಹೊರಗೆ ಉರುಟುಮುರುಟಾಗಿದೆ. ಅವನ ತೇಜಸ್ಸು ಅವನ ಅಭಿಮಾನದಲ್ಲಿದೆ, ಮಾನಿತ್ವದಲ್ಲಿದೆ. ಸಹನಶೀಲತೆಯ ಪರಾಕಾಷ್ಠೆ ಅವನಲ್ಲಿ ಕಾಣುತ್ತದೆ. ಜೀರುಂಡೆ ಹುಳುವು ತೊಡೆಯನ್ನು ಕೊರೆಯಿತು. ಆದರೂ ತೊಡೆಯನ್ನು ಸಡಿಲಿಸಲಿಲ್ಲ. ಹಾ ಹೂ ಎನ್ನಲಿಲ್ಲ. ಆದರೆ, ದೈಹಿಕವಾಗಿ ಹೇಗೋ ಮಾನಸಿಕವಾಗಿ ಕೂಡ ಅವನಲ್ಲಿ ಸಹನೆಯಿತ್ತು; ಅಭಿಮಾನದ ಒಂದು ಸೌಮ್ಯ ಆವಿಷ್ಕಾರವಿತ್ತು. ಕರ್ಣನಿಗೆ ತಾನು ಯಾರೆಂಬ ವಿಚಾರ ಗೊತ್ತಿರಲಿಲ್ಲ ವೆಂದು ಹೇಳುವಂತಿಲ್ಲ. ಇಲ್ಲದಿದ್ದರೆ, ದ್ರೌಪದಿಯ ಸ್ವಯಂವರದಲ್ಲಿ ಸೂರ್ಯನ ಕಡೆ ನೋಡಿ ಅವನು ಖಿನ್ನ ನಗೆಯನ್ನು ಸೂಸುತ್ತಿರಲಿಲ್ಲ. ನೀನು ಕುಂತಿಯ ಮಗನೆಂದು ಕೃಷ್ಣನು ಹೇಳಿದ ಮೇಲೆ ಕೂಡ ಆತ ಕ್ರೋಧವನ್ನಾಗಲೀ ಆಶ್ಚರ್ಯ ವನ್ನಾಗಲೀ ವ್ಯಕ್ತಮಾಡಿದ್ದು ಕಾಣುವುದಿಲ್ಲ. ಈ ಸಂಗತಿಯು ತನಗೆ ಮೊದಲಿಂದಲೂ ಗೊತ್ತಿದೆಯೆಂಬ ರೀವಿಯಲ್ಲಿಯೇ ಆತ ಅತಿಶಯವಾದ ಶಾಂತಭಾವದಿಂದ ಕೃಷ್ಣನಿಗೆ ತನ್ನ ನಿರ್ಧಾರವನ್ನು ಹೇಳುತ್ತಾನೆ. 'ಸೂತಪುತ್ರ' ನೆಂಬ ಬಿರುದನ್ನೇ ಮೆರೆಯಿಸುವುದು ಅವನ ನಿರ್ಧಾರ. ತನ್ನ ಸಾಕು ತಂದೆತಾಯಿಗಳ ಬಗೆಗಿನ ಅವನ ಮಮತೆಯ ಆಳವನ್ನು ಕಂಡು ಕೃಷ್ಣ ನಿರುತ್ತರನಾದನು. ರಾಜ್ಯ, ಮಾನಸನ್ಮಾನ, ಸ್ತ್ರೀ ಮತ್ತು ಈವರೆಗೆ ವಂಚಿಸಿದ ಕ್ಷತ್ರಿಯತ್ವ ಇವುಗಳ ಪ್ರಕಟವಾದ ಪ್ರಾಪ್ತಿಯನ್ನು ಕರ್ಣನು ಒದ್ದು ನೂಕಿದನು. ಯಾವ ಮಣ್ಣಿನಲ್ಲಿ ತಾನು ಬೆಳೆದನೋ ಅದರ ನಿಷ್ಠೆಯನ್ನು ಕಾಪಾಡಿದನು. ಪ್ರಲೋಭನದಿಂದ ದೊರೆಯುವ ಯಶಸ್ಸನ್ನು ತುಚ್ಛವೆಂದು ಭಾವಿಸಿದನು. ಮುಂದೆ ಕುಂತಿಯೊಡನೆ ಮಾತಾಡುವಾಗ ಎಲ್ಲೂ ಅವಿವೇಕದ, ದುಡುಕಿನ ಮಾತನ್ನು ಆಡಲಿಲ್ಲ. "ನನ್ನನ್ನು ತ್ಯಜಿಸಿ ನೀನು ಒಳಿತು ಮಾಡಲಿಲ್ಲ" –

ಎಂದಷ್ಟೇ ಹೇಳಿದ. ಅರ್ಜುನನನ್ನು ಬಿಟ್ಟು ಕರ್ಣನ ಸಹಿತ ಅಥವಾ ಕರ್ಣನನ್ನು ಬಿಟ್ಟು ಅರ್ಜುನನ ಸಹಿತ ಐವರು ಮಕ್ಕಳು ನಿನ್ನವರಾಗಿ ಉಳಿಯುವರು – ಎಂದು ಅವಳಿಗೆ ಆಶ್ವಾಸನೆ ನೀಡಿದ. ಹೀಗೆಂದರೂ, ಮನದಾಳದಲ್ಲಿ ಅರ್ಜುನನ ಪ್ರಾಣಗಳನ್ನು ಅವಳಿಗೆ ಇತ್ತನು – ಕುಂಡಲಗಳ ದಾನದ ರೂಪದಲ್ಲಿ. ಇಷ್ಟೇ ಅಲ್ಲ, ತಾಯಿಯ ಗೌಪ್ಯವನ್ನು ಅವನು ಸಾಯುವ ತನಕವೂ ದೃಢವಾಗಿ ಕಾಪಾಡಿದನು. ಯಾವ ರೀತಿಯಲ್ಲಿಯೂ ಪಾಂಡವರಿಗೆ ಅದರ ಸುಳಿವು ಸಿಗಲು ಬಿಡಲಿಲ್ಲ. ಕ್ರೋಧದ ಸನ್ನಿವೇಶದಲ್ಲಿ ಕೂಡ, ಅವರ ತಾಯಿಯ ಈ ನ್ಯೂನತೆಯನ್ನು ಅವರಿಗೆ ತಿಳಿಯಗೊಡಲಿಲ್ಲ. ಬಹುಶಃ ಈ ಸತ್ಯವನ್ನು ಮುಚ್ಚಿಡುವ ಸಲುವಾಗಿಯೇ ಅವನು ಬಿರುನುಡಿಯ ಆಶ್ರಯ ಪಡೆದಿರ ಬಹುದು. ಕೃಷ್ಣನ ಭೇಟಿಯಲ್ಲಿಯೂ, ಕೊನೆಗೆ ಕೃಷ್ಣನ ಬಗ್ಗೆ ಆತ ಅತ್ಯಂತ ಮಮತೆಯನ್ನು ತೋರಿದನು. ಕೊನೆಗೆ ಅವನ ರಥದ ಚಕ್ರವನ್ನು ನೆಲವು ನುಂಗಿದಾಗ, ಅವನಿಗೆ ಅವಕಾಶ ನೀಡಲೊಪ್ಪದೆ ಕೃಷ್ಣನು, ಅರ್ಜುನನಿಗೆ ಅವನ ಮೇಲೆ ಆಕ್ರಮಣ ಮಾಡುವಂತೆ ಹೇಳಿದನು. ಆಗ ಕರ್ಣನು "ಇದು ಅಧರ್ಮ" ಎನ್ನುತ್ತಾನೆ. ಆಗ ಕೃಷ್ಣನು ಅವನಿಗೆ, ಅವನ ಹಿಂದಿನ ಎಲ್ಲ ದುರ್ವಚನಗಳ ಮತ್ತು ಕೃತ್ಯಗಳ, ದಾಖಲೆ ನೀಡಿ, "ಆಗ ಎಲ್ಲಿ ಹೋಗಿತ್ತು ನಿನ್ನ ಧರ್ಮ" ಎಂದು ಕೇಳುತ್ತಾನೆ. ಕರ್ಣನು ನಾಚಿಕೆಯಿಂದ ತಲೆ ತಗ್ಗಿಸುತ್ತಾನೆ; ಸಾವಿಗೆ ಇದಿರಾಗುತ್ತಾನೆ; ಶಲ್ಯನೊಂದಿಗೆ ಮಾಡಿದಂತೆ ವಾದ ಮಾಡುವುದಿಲ್ಲ. ಏಕೆಂದರೆ ಈಗ ಅವನ ಮನಸ್ಸಿನ ಕ್ಷಿತಿಜವು ವಿಸ್ತಾರಗೊಂಡಿತ್ತು. ಯುದ್ಧದ ಸಣ್ಣಪುಟ್ಟ ಜಯಾಪಜಯಗಳು ಶೋಕಗಳು ಅವನ ಎದೆಯನ್ನು ತಟ್ಟಿದ್ದವು. ಯುಧಿಷ್ಠಿರನನ್ನೂ ಇತರ ಪಾಂಡವರನ್ನೂ ಅವನು ಕೊಲ್ಲದೆ ಬಿಟ್ಟನು. ಈ ಸಂಗತಿಯು ಯುಧಿಷ್ಠಿರನ ಮನಸ್ಸಿಗೆ ನಾಟಿತ್ತು. ಕರ್ಣನಿಗೆ ಅಭಿಮನ್ಯು ಅರ್ಜುನ ಮತ್ತು ಪ್ರಸಂಗ ಬಂದಾಗ ಭೀಮ ಇವರ ಎದುರು ಸೋಲನ್ನು ಅನುಭವಿಸಬೇಕಾಗಿ ಬಂತು. ಒಮ್ಮೆ ಆತ ಪಲಾಯನ ಮಾಡಿದ. ಒಮ್ಮೆ ಯಂತೂ ಹಿನ್ನಡೆಯ ವೇಳೆಯಲ್ಲಿ ಸಂತಪ್ತನಾಗಿ ಅವನು ಹೇಳುತ್ತಾನೆ : "ಧರ್ಮವನ್ನು ಯಾರು ರಕ್ಷಿಸುತ್ತಾರೋ, ಅವರನ್ನು ಧರ್ಮವು ರಕ್ಷಿಸುತ್ತದೆ ಎಂದು ಹೇಳಲಾಗುತ್ತದೆ. ನಾನು ಯಾವಾಗಲೂ ಧರ್ಮದಂತೆ ನಡೆಯುತ್ತ ಬಂದಿದ್ದೇನೆ. ಆದರೂ ನನ್ನ ರಕ್ಷಣೆಗೆ ಧರ್ಮವೇಕೆ ಉಪಯೋಗಕ್ಕೆ ಬರುವುದಿಲ್ಲ? ಧರ್ಮವನ್ನು ಕುರಿತೇ ನನಗೆ ಶಂಕೆ ಬರುತ್ತದೆ " – ಎಂಬುದಾಗಿ. ಕರ್ಣನ

ಜೀವನವನ್ನು ಸಮಗ್ರವಾಗಿ ದರ್ಶಿಸಿದಾಗ ಈ ಉದ್ಗಾರಗಳನ್ನು ಮನವರಿಕೆ ಮಾಡಿಕೊಳ್ಳಲು ತಡವಾಗುವುದಿಲ್ಲ. ಆದರೆ ಹಳ್ಳದಿಣ್ಣೆಗಳ ಕಡೆಗೆ ಸೂಕ್ಷ್ಮವಾಗಿ ನೋಡಿದಾಗ ಕೃಷ್ಣನ ಚುಚ್ಚುಮಾತುಗಳೂ ನೆನಪಾಗುತ್ತವೆ.

ಕರ್ಣನು ಲಜ್ಜಾನ್ವಿತನಾದ ಆ ಕ್ಷಣವು ಮೌಲಿಕವಾದದ್ದು. ಆ ಕ್ಷಣದಲ್ಲಿಯೇ ಅವನ ಕರ್ತೃತ್ವದ ಸತ್ಯದರ್ಶನವು ಅವನಿಗಾಗುತ್ತದೆ. ತಿರುಗಿ, ಅಂತಿಮವಾಗಿ ಹೋರಾಡಲು ಸಿದ್ಧನಾಗುತ್ತಾನೆ. ಆದರೆ, ಪರಿಸ್ಥಿತಿ ಎಲ್ಲ ವಿಪರೀತ. ಕೌರವರು ಅವನನ್ನು ಏಕಾಕಿಯಾಗಿ ಬಿಟ್ಟಿದ್ದಾರೆ; ರಥವು ನೆಲದಲ್ಲಿ ಹೂತು ಹೋಗಿದೆ; ಮರ್ಮಭೇದಿಯಾದ ಸತ್ಯದಿಂದ ಮನಸ್ಸು, ಪೂರ್ತಿಯಾಗಿ ಮುರಿದುಬಿದ್ದಿದೆ. ಆದರೆ ಮಿತ್ರನ ಹಿತಕ್ಕಾಗಿಯೇ ಇದೆಲ್ಲವನ್ನೂ ತಾನು ಮಾಡಿದೆನೆಂಬ ಸಮಾಧಾನವನ್ನು ಎದೆಗವಚಿಕೊಂಡು ಅವನು ನಿಧನಹೊಂದುತ್ತಾನೆ.

ಕರ್ಣನು ಸತ್ತ; ಅವನ ಜೀವನಕ್ಕೆ ಸಹಸ್ರಶಃ ಮಾತು ಮೂಡಿತು. ಕುಂತಿಯು ಅವನ ಜನ್ಮರಹಸ್ಯವನ್ನು ಯುಧಿಷ್ಠಿರನಿಗೆ ತಿಳಿಸಿದಳು. ಎಂದೂ ಸಿಟ್ಟಿಗೇಳದ ಯುಧಿಷ್ಠಿರನು ಅಂದು ಅತಿಶಯ ತಪ್ತನಾದನು; ಕುಂತಿಯ ರೂಪದಲ್ಲಿ ಅಖಿಲ ಸ್ತ್ರೀಜಾತಿಗೇ ಶಾಪವಿತ್ತನು. "ಈ ಗೌಪ್ಯವನ್ನು ನೀನು ಮೊದಲಲ್ಲಿಯೇ ಹೇಳಿದ್ದರೆ ಈ ಎಲ್ಲ ಅನರ್ಥವೂ ತಪ್ಪುತ್ತಿತ್ತು"– ಎಂದನು. ಕರ್ಣನ ಇದಿರು ಯುಧಿಷ್ಠಿರನು ಯಾವಾಗಲೂ ಕುಬ್ಜನಾಗುತ್ತಿದ್ದನು. ಆದರೆ ಈ ಸಂಬಂಧ ತಿಳಿದ ಮೇಲೆ ಅವನ ಕ್ಷೋಭೆಗೆ ಪಾರಾವಾರವುಳಿಯಲಿಲ್ಲ. ವೈರ ಹೋಯಿತು; ಬಂಧುಹತ್ಯೆಯ ದುಃಖವು ಎದೆಯೇರಿ ಕುಳಿತಿತು. ಈ ಪ್ರತಿಕ್ರಿಯೆಯ ಮೂಲಕ ಕರ್ಣನನ್ನು ಕುರಿತಾದ ಮರಣೋತ್ತರ ಭಾವನೆಗಳಿಂದ ಅವನ ಬಗೆಗಿನ ಎಲ್ಲ ವರ್ತನೆಯ ಬಗೆಗೆ ಪಾಂಡವರಿಗೆ ಅನುತಾಪವಾಯಿತು. ಕರ್ಣನ ನಡತೆಯು ಕೆಲವು ಸಲ ಕ್ರೂರವೂ ಅನ್ಯಾಯದ್ದೂ ಆಗಿರುತ್ತಿತ್ತು. ಆದರೆ ಅವನೊಂದಿಗೆ ದೈವವೇ ಕ್ರೂರವಾಗಿ ಆಟವಾಡಿತು. ಅದಕ್ಕೆ ಎಣೆಯೇ ಇಲ್ಲವೆಂಬುದು ಅವರಿಗೆ ತಿಳಿದು ಬಂತು. ಕರ್ಣನು ಪ್ರಕಟವಾಗಿಯೇ ಕುಂತೀಪುತ್ರನೆಂದು ಬದುಕಬಹುದಾಗಿತ್ತು. ಹಾಗಾದರೆ, ಅವನಿಗೆ ದ್ರೌಪದಿಯು ಸಿಕ್ಕುತ್ತಿದ್ದಳು. ರಾಜ್ಯವೂ ಅವನದೇ ಆಗಿತ್ತು. ಅವನ ನಿಸರ್ಗದತ್ತವಾದ ಹಕ್ಕು ಕುಂತಿಯ ಗೌಪ್ಯವೃತ್ತಿಯ ಮೂಲಕ, ಪಾಂಡವರಿಗೆ ದೊರೆಯಿತು. ತನಗೆ ಗೊತ್ತಿಲ್ಲವಾದರೇನಾಯಿತು. ಅವನ ಜೀವನ ಸರ್ವಸ್ವವನ್ನೂ, ಅವನ ತಾಯಿ ಹಾಗೂ ಸೋದರರೇ ಅಪಹರಿಸಿದ್ದರು.

ಕರ್ಣನು ಎಲ್ಲವನ್ನೂ ಸಹಿಸುತ್ತಲೇ ನಡೆದನು. ಸರ್ವಸ್ವವನ್ನೂ ಬಹು ದರ್ಪದಿಂದ, ಪ್ರಕಟವಾಗಿಯೇ ಪಾಂಡವರಿಗೆ ದಾನಮಾಡಿ ಹೋದನು. ಪಾಂಡವರಾದರೂ ಅವನಿಗಾಗಿ ಏನು ಮಾಡಿದರು? ಬರಿಯ ಶ್ರಾದ್ಧವನ್ನಷ್ಟೇ!

ಮತ್ತು ಕುಂತಿ? ಚಿರತಾರುಣ್ಯದ ವರ ರೂಪದ ಶಾಪವನ್ನು ಪಡೆದ ಕುಂತಿ – ಅವಳ ವ್ಯಥೆಯೂ ಕರ್ಣನದರಂತೆಯೇ ಆಳವಾಗಿ ಹುದುಗಿದ್ದಾಗಿದೆ. ಅವಳೂ ಏಕಾಕಿ. ಅವಳ ಏಕಾಕಿತನದ ಭಗ್ನ ವಾರಸತ್ವವೂ ಕರ್ಣನ ಪಾಲಿಗೇ ಬಂದಿತು. ಅದೊಂದೇ ಅವರಿಬ್ಬರ ನಡುವಿನ ಕೊಂಡಿ. ಕುಂತಿಯು ಕೃಷ್ಣನಲ್ಲಿ ದುಃಖದ ವರದಾನವನ್ನು ಬೇಡುತ್ತಾಳೆ. ಕರ್ಣನ ಬದುಕನ್ನು ತಾನು ದುಃಖಪೂರ್ಣವಾಗಿಸಿದೆನೆಂಬ ಬಗ್ಗೆ ಪ್ರಾಯಶ್ಚಿತ್ತವನ್ನೇ ಅವಳು ಪಡೆಯುತ್ತಿದ್ದಳೇ? ಅವಳ ಮನಸ್ಸು ಮೊದಲಿಂದಲೂ ದುಃಖದಿಂದ ತುಂಬಿತ್ತು. ಆ ದುಃಖವನ್ನು ಆಕೆ, ಕೃಷ್ಣನ ಎದುರು ಮಾತ್ರ ತೋಡಿಕೊಳ್ಳುತ್ತಾಳೆ – ಅವನು ತನ್ನ ತವರಿನ ಸಹೃದಯ ಮನುಷ್ಯನೆಂಬುದಕ್ಕಾಗಿ. ಅವಳಲ್ಲಿ ಹುದುಗಿದ ಅಳಲು ಹೊರಬರುತ್ತದೆ. ಈ ಯಾದವರ ಕುಮಾರಿಯು ಕುಂತೀಭೋಜನಿಗೆ ದತ್ತಕವಾಗಿ ಹೋದಳು. ವಸ್ತುತಃ ಇಬ್ಬರು ಸಮರ್ಥರಾದ ಪಿತರಿದ್ದರೂ ಅವಳು ತಬ್ಬಲಿಯೇ ಆಗಿದ್ದಳು. ಅವಳು ಯಾದವರವಳಾಗಿಯೇ ಇದ್ದಿದ್ದರೆ, ಅವಳ ಮದುವೆ, ಸದ್ದಿಲ್ಲದೆ ಜರುಗುತ್ತಿತ್ತು; ಕರ್ಣನಂತಹ ಮಗುವನ್ನು ಅವಳು ತೊರೆಯಬೇಕಾಗಿಯೂ ಬರುತ್ತಿರಲಿಲ್ಲ. ಆದರೆ ತಂದೆಗೆ, ತನ್ನ ಮಗಳು ವೈಭವಶಾಲಿನಿಯಾದ ರಾಣಿಯಾಗಬೇಕೆಂದೆನಿಸಿತು; ಅವನು ಅವಳನ್ನು ಕುಂತೀಭೋಜನಿಗೆ ದತ್ತು ಕೊಟ್ಟನು. ಅಲ್ಲಿ, ದೊಡ್ಡ ಮನೆಯಲ್ಲಿ ದೊಡ್ಡ ಹೊಣೆಗಳು ಬಂದವು. ಅಜ್ಞಾನದಿಂದ ಕೂಡಿದ ಅಮಾಯಕ ವಯಸ್ಸಿನಲ್ಲಿ ದೂರ್ವಾಸರ ವಿಚಿತ್ರ ವರವು ಲಭಿಸಿತು. ಆ ಜಿಜ್ಞಾಸೆಯ ಹೊಟ್ಟೆಯಲ್ಲಿ ಸೂರ್ಯನ ಆವಾಹನೆ ಹುಟ್ಟಿತು. ಅನಂತರ ಗರ್ಭಧಾರಣೆ, ಮುಂದೆ ಪಾಂಡುವಿನೊಂದಿಗೆ ಮದುವೆ, ಅನಂತರ ಪಾಂಡವರ ಜನನ. ಅವರು ಹುಟ್ಟುವುದಕ್ಕೆ ಮುಂಚೆ, ಕುಂತಿಯು, ದೂರ್ವಾಸರು ತನಗೆ ವರವಿತ್ತ ಸಂಗತಿಯನ್ನು ಗಂಡನಿಗರುಹಿದಳು; ಆದರೆ ಕರ್ಣನ ಜನ್ಮದ ಕಥೆಯನ್ನು ಹೇಳಲಿಲ್ಲ. ಮಕ್ಕಳಿಗಾಗಿ ತಹತಹಿಸಿದ ಆ ರಾಜನು ಎಂದಾದರೊಮ್ಮೆ ಕರ್ಣನನ್ನು ಸ್ವೀಕರಿಸಬಹುದಾಗಿತ್ತು.

ಕರ್ಣನು ಮಡಿದ. ಆದರೆ, ಅವನಿಗೆ ಶ್ರಾದ್ಧ ನಡೆಯದೆಂಬ ವೇದನೆ ಕುಂತಿಯನ್ನು ಆವರಿಸಿತು. ಜಯಾಪಜಯಗಳೊಳಗಿನ ಈರ್ಷೆಯು ಹೋಗಿತ್ತು. ಅವಳೀಗ ಪಾಂಡವ ಮಾತೆಯಾಗಿದ್ದರೂ ಅವರ ಭೋಗದಲ್ಲಿ ಪಾಲುಗಾರ್ತಿಯಾಗಿದ್ದಿಲ್ಲ. ಈಗ, ಆಕೆ ಕೇವಲ ಕರ್ಣನ ತಾಯಿ. ಯಾರ ಕಲ್ಯಾಣಕ್ಕಾಗಿ ಕರ್ಣನು ತನ್ನ ಪ್ರಾಣವನ್ನು ಕಳೆದುಕೊಂಡನೋ, ಆ ಮುದಿ ಜೋಡಿಯ (ಧೃತರಾಷ್ಟ್ರ-ಗಾಂಧಾರಿಯರ) ಸಹವಾಸದಲ್ಲಿ ಅವಳು ಬದುಕಿನ ಕೊನೆಯನ್ನು ಕಾಣಬೇಕಾಗಿತ್ತು. ಕರ್ಣನ ಮರಣವು ಪ್ರೇಮದ ಪ್ರತೀಕವಾಗಬೇಕಾಗಿತ್ತು. ದ್ವೇಷ-ತಿಕ್ಕಾಟಗಳು ಮುಗಿದು ಎರಡೂ ಮನೆತನಗಳಲ್ಲಿ ಏಕಜೀವತ್ವವು ಕೂಡಿ ಬರಬೇಕಾಗಿತ್ತು. ಸಾವನ್ನು ಸಾಕ್ಷಿಯಾಗಿಟ್ಟುಕೊಂಡು ಕುಂತಿಯು, ಈ ವ್ರತಕ್ಕೆ ನಿರ್ಭಯ ಮನಸ್ಸಿನಿಂದ ಸಿದ್ಧಳಾದಳು. ಜೀವನದ ಕೊನೆಯ ಬಿಂದುವಿನ ತನಕವೂ ಅವಳು ಜಿದ್ದಿನಿಂದ ಬದುಕಿದಳು. ಅದರ ಲೋಭದಿಂದಲ್ಲ, ಆದರೆ, ದುಃಖದಿಂದ ಜಡವಾದ ಭಾರವನ್ನು ನಿರ್ವಹಿಸಿ ತನ್ನ ಪಾಪದ ಪರಿಮಾರ್ಜನೆ ಮಾಡಲೆಂದು. ಅವಳು ಪತಿಯೊಡನೆ ಸಮರಸಳಾಗಲಿಲ್ಲ. ಮಕ್ಕಳೊಂದಿಗೂ ಇಲ್ಲ; ಅವರ ರಕ್ಷಣೆ ಮಾಡಿದಳು. ಅವರಿಗೆ ಯೋಗ್ಯ ಸ್ಥಾನವು ಸಿಕ್ಕಬೇಕೆಂದು ಪ್ರೋತ್ಸಾಹ ನೀಡಿದಳು; ಆದರೆ ಮನಸ್ಸಿನಿಂದ ಅವಳು ಅವರ ವಶವಾಗಿರಲಿಲ್ಲ. ಆದರೆ, ಕರ್ಣನು ಹೋದ; ಅವನೊಂದಿಗೆ ಆಕೆ ಶಾಂತಚಿತ್ತದಿಂದ ಸಮರಸಳಾದಳು. ಜಾಗ್ರತದುಃಖದಿಂದ ಅವಳು ತನ್ನ ಜೀವನವನ್ನು ಅವನ ಜೀವನದ ಅಂತ್ಯದೊಂದಿಗೆ ಜೋಡಿಸಿಬಿಟ್ಟಳು. ಯಾವ ರಾಧೆಯು ಕರ್ಣನಿಗೆ ಪ್ರೀತಿಯಿತ್ತಳೋ, ಅವನನ್ನು ಪೋಷಿಸಿದಳೋ ಅವಳ ಆ ಮಟ್ಟಕ್ಕೆ ಪಾದವಿಡುವಷ್ಟು ತಪಸ್ಸನ್ನು ಕುಂತಿ ಮಾಡಿದಳು. ಕರ್ಣನ ಹಿಂದೆಯೇ ಬೇಗ ಬೇಗ ಹೋಗುವುದರಲ್ಲಿ ಆಕೆ ಸುಖ ಕಂಡಳು. ದ್ರೌಪದಿ, ಪಾಂಡವರು ಮತ್ತು ಕುಂತಿ ಇವರ ನಡುವೆ ಕರ್ಣನು ಮತ್ತೆ ಜೀವಂತನಾದನು; ಸಾವಿನಿಂದ ಪುನರ್ಜನ್ಮ ಪಡೆದನು. ಮೃತಾವಸ್ಥೆಯಲ್ಲೂ ಅವನು ಸುಂದರನಾಗಿ ಕಾಣುತ್ತಿದ್ದನೆಂದು ವ್ಯಾಸರು ಹೇಳುತ್ತಾರೆ. ಈ ಸೌಂದರ್ಯವು ಆ ಸೌಂದರ್ಯಪ್ರೇಮಿ ಜೀವಕ್ಕೆ ಸಿಕ್ಕಬೇಕು ಮತ್ತು ಇನ್ನಾರಿಗೂ ಸಿಗದಿರಬೇಕು – ಇದರಲ್ಲಿಯೇ ಕರ್ಣನ ನಿರಂತರ ವರ್ಧನಶೀಲ ಜೀವನದ ಸಾರವಿದೆ. ಪ್ರತಿಯೊಂದು ಯುಗದಲ್ಲಿ, ಪ್ರತಿಯೊಬ್ಬ ವ್ಯಕ್ತಿಯಲ್ಲಿ, ಪ್ರತಿಯೊಂದು ದುಃಖ ನಿರಾಶೆಯ ಕ್ಷಣದಲ್ಲಿ, ಸುಖದ ಲಾಲಸೆಯಲ್ಲಿ, ಪರಾಕ್ರಮದ ದುರ್ದಮ್ಯ ಆವೇಶದಲ್ಲಿ ಸ್ನೇಹದ ಆವಿಷ್ಕಾರದಲ್ಲಿ ಕರ್ಣನು ಅಲ್ಲಲ್ಲಿ ಪ್ರಕಟನಾಗುತ್ತಾನೆ. ಆದರೆ ಅದು ಕ್ಷಣಮಾತ್ರವೇ. ಸಾಂತ್ವನ ನೀಡುತ್ತಾನೆ.

ಹೊರಟು ಹೋಗುತ್ತಾನೆ. ಎಲ್ಲೂ ಆತ ಹೆಚ್ಚು ಹೊತ್ತು ನಿಲ್ಲುವುದಿಲ್ಲ. ಅವನ ಮೇಲೆ ಅಧಿಕಾರ ನಡೆಸಲು ಯಾರಿಗೂ ಸಾಧ್ಯವಿಲ್ಲ. ಅವನು ಯಾರವನೂ ಅಲ್ಲ; ಏಕಾಕಿ; ಕಬ್ಬಿನ ಹೊಡೆಯಂತೆ ನೇರವಾಗಿ ಮೇಲಕ್ಕೆ ಹೋದವನು. ಆದರೆ ಸಮಸ್ತ ವೇದನೆಯ, ಅಭಿಮಾನದ, ಪರಾಕ್ರಮದ ಮತ್ತು ಪ್ರಾಮಾಣಿಕ ನಿಷ್ಠೆಯ ಪ್ರತೀಕವು ಮಾತ್ರ ಕರ್ಣನೊಬ್ಬನೇ ಎಂಬುದರಲ್ಲಿ ಸಂಶಯವಿಲ್ಲ.



# ಅಪ್ಸರಲೋಕದಿಂದ ವಾಸ್ತವದೆಡೆಗೆ

ಅರ್ಜುನನ ವ್ಯಕ್ತಿತ್ವವು ಎರಡು ಭಾಗವಾಗಿದೆ. ಸ್ವಪ್ನ ಸಂಭ್ರಮದಲ್ಲಿ ಸುಳಿದಾಡುವ ನವಯುವಕ, ವನವಾಸಿಯಾದ ರಾಜಕುಮಾರ ಮತ್ತು ವಾಸ್ತವದ ದರ್ಶನದಿಂದ ಸ್ತಿಮಿತನಾದ ಪ್ರೌಢಪುರುಷ - ಹೀಗೆ ಅವನ ಜೀವನವು ಎರಡು ರೀತಿಯದಾಗಿದೆ. ಈ ಎರಡು ಭಾಗಗಳ ಜೋಡಣೆಯ ಸಂಧಿರೇಖೆಯು ಸ್ಪಷ್ಟವಾಗಿ ಕಾಣುತ್ತದೆ. ಈ ಸಂಧಿ ಎಂದರೆ ಮಹಾಭಾರತ ಯುದ್ಧ. ವಾಸ್ತವವಾಗಿ ಅರ್ಜುನನು ಧನುರ್ಧಾರಿ. ಧನುರ್ಧಾರಿಯ ಅಸ್ತಿತ್ವವು ಆರಂಭದಿಂದ ಕೊನೆಯ ವರೆಗೂ ಯುದ್ಧದ ಮೇಲೇ ಅವಲಂಬಿತವಾಗಿರುತ್ತದೆ. ಅರ್ಜುನ ಕೂಡ ಈ ಭೂಮಿಕೆಯನ್ನು, ಚಿಕ್ಕಂದಿನಿಂದಲೂ, ತಪ್ಪದೆ ಕಾಪಾಡಿ ಕೊಂಡು ಬಂದವನು. ಆದರೆ ಕುರುಯುದ್ಧವು ಹಿಂದಿನ ಮತ್ತು ಮುಂದಿನ ಎಲ್ಲ

ಯುದ್ಧಗಳಿಗಿಂತ ಭಿನ್ನವಾಗಿತ್ತು. ಅಲ್ಲಿ ಗೆಲ್ಲುವುದು ಅಗತ್ಯವಾಗಿತ್ತು. ಆದರೂ ಸೋಲುಗೆಲುವುಗಳೆರಡಕ್ಕೂ ಬೇರೆಯೇ ರೂಪ ಬಂದಿತ್ತು. ಅವೆರಡೂ ಕೂಡಿ ಒಂದು ರಸಾಯನವೇ ಸಿದ್ಧವಾಗಿತ್ತು. ಆ ಯುದ್ಧದ ಈ ಪರಿಪಾಠವು ಎಲ್ಲ ಯೋಧರಿಗೂ ಹೊಸತಾಗಿತ್ತು. ವಿಶೇಷತಃ ಗೆದ್ದವರಿಗೆ, ಗೆಲುವಿನ ಸವಿ ಇಳಿದುಹೋಗಿತ್ತು; ಸೋಲಿನ ರುಚಿ ಮಿಗಿಲಾಗಿತ್ತು. ಕ್ಷತ್ರಿಯನಿಗೆ ಯುದ್ಧದ ಅಂತಿಮಗತಿಯ ತತ್ತ್ವಜ್ಞಾನದ ಕಹಿಮದ್ದು ಚಿಕ್ಕಂದಿನಿಂದಲೆ ಸಿಕ್ಕಿರುತ್ತದೆ. ಆದರೂ, ತಿಳಿದ ಎಲ್ಲ ತತ್ತ್ವಜ್ಞಾನಗಳನ್ನೂ ನಾಮಾವಶೇಷ ಮಾಡುವ ಹಾಗೂ ಅವಕ್ಕಿಂತ ಆಚೆಯ, ಹೊಸದೇ ಆದ ಒಂದು ಸತ್ಯವು ಪಾಂಡವರಿಗೆ ಎದುರಾಯಿತು. ಅದು ಅವರಿಗೆ ಪೂರ್ತಿ ತಿಳಿಯಲೂ ಇಲ್ಲ; ಏಕೆಂದರೆ ಇಲ್ಲಿಯ ಸತ್ಯವು ಕೇವಲ ಕಾಲ್ಪನಿಕವಾಗಿ ಕಂಠಪಾಠಮಾಡಿದ ಒಂದು ಸತ್ಯವಾಗಿರಲಿಲ್ಲ. ಅದು ವಾಸ್ತವದೊಂದಿಗೆ ಐಕ್ಯವಾಗಿತ್ತು. ವಾಸ್ತವದೊಂದಿಗೆ ಸಮರೂಪ ಹೊಂದಿದ ಈ ಪ್ರಖರ ಸತ್ಯವು ಇದಿರು ಬಂದೊಡನೆ ಅದನ್ನು ಒಳಪಡಿಸಿ ಕೊಳ್ಳುವುದಕ್ಕೆ ಪಾಂಡವರ ಮೊದಲಿನ ಎಲ್ಲ ಅನುಭವಗಳೂ ಮೊಟಕೆನಿಸಿದವು. ಕೃಷ್ಣ ಕೂಡ ಈ ಸತ್ಯವನ್ನು ವಿವರಿಸಲು ನಿರಾಕರಿಸಿದ. ಈ ಸತ್ಯಕ್ಕೆ ಮೂಢತೆಯ ಆವರಣವಿರುವುದೇ ಲೇಸೆಂದು ಅವನಿಗೆ ಅನಿಸಿರಬಹುದೇ? ಅದ್ಭುತದೊಂದಿಗೆ ವಾಸ್ತವದ ಸಂಯೋಗವಾಗಿ ಹೀಗೆ ಉಂಟಾದ ಈ ಸತ್ಯಕ್ಕೆ ಹೆಸರು ಕೊಡುವುದಿರಲಿ, ಅದನ್ನು ಮುಟ್ಟುವುದು ಕೂಡ ಪಾಂಡವರಿಗೆ ಕಠಿಣ ವಾಯಿತು. ಇತ್ತ ಅದು ಬಂದು ಅವರನ್ನೇ ತಾಕಿತ್ತು. ಹಗೆತನದ ಗೋಡೆಯಿರುವ ವರೆಗೆ, ಸತ್ಯದ ಹೆಸರಿನಿಂದ ಅದರ ಮೇಲೆ ಪ್ರಹಾರಮಾಡಿ ಸ್ವಮನಸ್ಸಿನ ತಾಜಾತನ ಸಾಬೀತಾಗಿ ಇಡುವುದು ಪಾಂಡವರಿಗೆ ಶಕ್ಯವಾಯಿತು. ಆದರೆ ಆ ಗೋಡೆಯು ಕುಸಿದೊಡನೆ ದ್ವೈತದಿಂದಾಗಿ ಅಸತ್ಯಕ್ಕೆ ಬಂದ ಸ್ಥೂಲರೂಪ, ಪರಿಚಿತ ಆಕಾರ, ಕಲ್ಪನೆಯಿಂದ ಅದರ ಮೇಲೆ ಏರಿದ ಬಣ್ಣದ ಪುಟಗಳು – ಇವೆಲ್ಲ ಹೇಳ ಹೆಸರಿಲ್ಲದಂತೆ ಅಡಗಿದವು; ಬಣ್ಣ ಬಣ್ಣದ ಮೋಡಗಳು ಕತ್ತಲೆಯಲ್ಲಿ ಕರಗಿದಂತೆ ಆಯಿತು. ಈ ಅನಾಮಿಕ ಅವಸ್ಥೆಯ ಆಘಾತವು ಯುಧಿಷ್ಠಿರನ ಮೇಲೆ ಬಹಳವಾಯಿತು; ಅನಂತರವೇ ಅರ್ಜುನನಿಗಾದುದು. ಆದರೆ ಅವರಿಬ್ಬರ ಪ್ರತಿಕ್ರಿಯೆಗಳು ಮಾತ್ರ ಭಿನ್ನ ಪ್ರಕಾರದವಾಗಿವೆ.

ಅವರೀರ್ವರ ವ್ಯಕ್ತಿತ್ವದಲ್ಲಿಯ ಭಿನ್ನತೆ ಇಲ್ಲಿಯೇ ಹೆಚ್ಚು ಅರಿವಾಗುತ್ತದೆ. ಅವರ ನಡುವಿನ ಪ್ರೇಮಬಂಧನವು ಕ್ಷಣಕಾಲ ಮರೆಯಾಗುತ್ತದೆ; ಅವರ ಮನಸ್ಸಿನ ಸುಪ್ತ ಏಕಾಕಿತನವು ಅವರ ವ್ಯಕ್ತಿತ್ವಕ್ಕೆ ಅನುಗುಣವಾಗಿ ವ್ಯಕ್ತವಾಗುತ್ತದೆ. ವ್ಯತ್ಯಾಸ ಇಷ್ಟೇ. ಯುಧಿಷ್ಠಿರನ ವ್ಯಕ್ತಿತ್ವದಲ್ಲಿ ಈ ಸಂಧಿರೇಖೆ ಕಾಣುವುದಿಲ್ಲ. ಅವನ ಭಾವನೆಗಳ ಸ್ವರೂಪವು ಹಿಂದಿನಂತೆಯೇ ಉಳಿಯಿತು. ಸದಾ ಏರಿಳಿತಗಳಿಂದ ಕೂಡಿದ ಕಡಲಲೆಗಳಂತೆ ಅವನ ವ್ಯಕ್ತಿತ್ವ. ಆದ್ದರಿಂದಲೇ ಅವನ ದನಿ ಬದಲಾಗುವುದಿಲ್ಲ. ಆದರೆ, ಅರ್ಜುನನದು ಹಾಗಲ್ಲ. ಆದ್ದರಿಂದಲೇ ಈ ಸಂಧಿರೇಖೆ ಅವನಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಭೀಮನು ಕೂಡ ಏಕಪ್ರಕಾರದ ಮನಸ್ಸಿನವನಾಗಿ ಉಳಿದ. ಆದರೂ, ಭೀಮಯುಧಿಷ್ಠಿರರ ಮಾನಸಿಕ ಏಕ ಪ್ರಕಾರತೆಯು ಒಂದೇ ರೀತಿಯದಾಗಿರಲಿಲ್ಲ. ಯುಧಿಷ್ಠಿರನ ಧಾರಣೆ ತೀವ್ರ ವಾಗಿತ್ತು. ಆದ್ದರಿಂದ ಅವನ ಏಕಪ್ರಕಾರತೆಗೆ ಶ್ರೇಷ್ಠ ಮೌಲ್ಯವಿದೆ. ಭೀಮನದು ಬಾಲಿಶವಾಗಿತ್ತು. ಅಂತೆಯೇ ಅದಕ್ಕೆ ಮೌಲ್ಯ ಬರಲೇ ಇಲ್ಲ. ಅರ್ಜುನನ ವಿಷಯದಲ್ಲಿ ಮಾತ್ರ ಆ ಏಕಪ್ರಕಾರತೆಗೆ ಬಂದ ಬಾಧೆಯು ಹೆಚ್ಚು ಎನಿಸುತ್ತದೆ. ಆತ ಯುಧಿಷ್ಠಿರನಂತಿರಲಿಲ್ಲ. ಆದರೂ ಅವನ ಮನಸ್ಸು ಯುಧಿಷ್ಠಿರನದ ರೊಂದಿಗೆ ಸಮಾಂತರವಾಗಿತ್ತು. ಆತ ಭೀಮನಂತೆಯೂ ಇರಲಿಲ್ಲ. ಆದರೂ ಭೀಮನನ್ನು ಯುಧಿಷ್ಠಿರನಿಗಿಂತ ಹೆಚ್ಚು ಚೆನ್ನಾಗಿ ಅರಿಯುತ್ತಿದ್ದ. ಅವನೊಂದಿಗೆ ಸಮರಸವಾಗಿರಬಲ್ಲವನಾಗಿದ್ದ. ಏಕೆ? ಏಕೆಂದರೆ ಅರ್ಜುನನು ಅಪ್ಸರೆಯರ, ದೇವಕನ್ಯೆಯರ ಕಥೆಯ ಆದರ್ಶನಾಯಕ. ಹಾಗೆ ಆದರ್ಶನಾಯಕನಾದ್ದರಿಂದ ಅವನು, ಮನಸ್ಸಿನ ದೃಷ್ಟಿಯಿಂದ ಯುಧಿಷ್ಠಿರನಿಗೆ ಹತ್ತಿರದವನಾಗಿದ್ದ; ಬಲದ ಭೂಮಿಕೆಯಲ್ಲಿ ಭೀಮನಿಗೆ ಹತ್ತಿರದವನಾಗಿದ್ದ. ಅದ್ಭುತದ ವಲಯದಲ್ಲಿ ಜೀವನವಿಡೀ ಸುಳಿದಾಡಿದ ನಾಯಕ ಅವನೇ. ಆ ಅದ್ಭುತದ ಉಪನಾಯಕ ಭೀಮ. ಆ ಅದ್ಭುತಕ್ಕೆ ಕಾಲಕಾಲಕ್ಕೆಗೊಬ್ಬರ, ನೀರು ಹಾಕುವವನು, ಕೆಲವೊಮ್ಮೆ ವಾಸ್ತವದ ದರ್ಶನ ಮಾಡಿಸಿ ಅದ್ಭುತದ ಎಲ್ಲ ಇಂದ್ರಜಾಲವನ್ನೂ ನಷ್ಟಗೊಳಿಸುವವನು ಯುಧಿಷ್ಠಿರ.

ಅದ್ಭುತ ಕಥೆಯ ನಾಯಕನಾದ ಅರ್ಜುನನು ಬೇರೆಯ ನಾಯಕ ರಂತೆಯೇ ಒಂದೇ ಆಕಾರದ, ಒಂದೇ ಬಗೆಯ ಘಟನೆಗಳ ಮಂಡಲದಲ್ಲಿ ಸುಳಿದಾಡುತ್ತಿರುತ್ತಾನೆ. ಇತರ ಯಾವುದೇ ಕಥೆಯಂತೆ ಅವನ ಕಥೆಯನ್ನು ಕೂಡ, ಅತಿ ಸರಳಗೊಳಿಸಲು ಬರುತ್ತದೆ. ಒಬ್ಬ ರಾಜಪುತ್ರ, ವನವಾಸೀ

ವಿಧವೆಯ ಬಡಮಗ. ಮೂವರು ಸೋದರರಲ್ಲಿ ಎಲ್ಲರಿಗಿಂತ ಕಿರಿಯ. ರಾಜ್ಯವನ್ನು ದೊಡ್ಡಪ್ಪ ಕಿತ್ತುಕೊಂಡಿದ್ದು, ಅದನ್ನು ಮರಳಿ ಪಡೆಯಬೇಕೆಂಬುದು ಹಿರಿಯಣ್ಣನ ಇಚ್ಛೆ. ಇವನು ಗುರುವಿನ ಬಳಿಗೆ ಹೋಗುತ್ತಾನೆ, ವೀರನಾಗುತ್ತಾನೆ. ದೊಡ್ಡಪ್ಪನಿಗೂ ಅವನ ಮಕ್ಕಳಿಗೂ ಇದು ಸಹನವಾಗುವುದಿಲ್ಲ. ಅವರು ಇವನನ್ನು ಅಡವಿಗಟ್ಟುವರು. ನಾಯಕನು ಅರಗಿನ ಮನೆಯಿಂದ ಪಾರಾಗುವನು. ಖಾಂಡವವನದಲ್ಲಿ ಅದ್ಭುತ ಚಮತ್ಕಾರ ನಡೆಸುವನು. ಒಬ್ಬರ ನಂತರ ಒಬ್ಬರಂತೆ ರಾಜಕನ್ಯೆಯರನ್ನು ವರಿಸುತ್ತಾನೆ. ದೇಶವಿದೇಶಗಳಲ್ಲಿ ತಿರುಗಿ, ಪರಾಕ್ರಮ, ತಪಸ್ಸು, ಸಿದ್ಧಿಗಳನ್ನು ಗಳಿಸುತ್ತಾನೆ. ರಾಜಸೂಯ ಯಾಗದಲ್ಲಿ ಪರಾಕ್ರಮ ತೋರಿಸುತ್ತಾನೆ. ಅದ್ಭುತ ಕಥೆಯೊಳಗಿನ ನಾಯಕನ ಸಾಧ್ಯವು ದುರಾರಾಧ್ಯವಿದ್ದರೂ ಅದು, ನಿಶ್ಚಿತ ಅವಧಿಯಲ್ಲಿ ನಿಶ್ಚಿತಮಾರ್ಗದಿಂದ ಪ್ರಾಪ್ತವಾಗುವುದಿರುತ್ತದೆ. ಅದೇ ನಿಶ್ಚಿತ ರೀತಿಯಿಂದ, ಸೋದರರೊಂದಿಗೆ ರಾಜಕನ್ಯೆಯ ಸ್ವಯಂವರಕ್ಕೆ ಹೋಗಿ ಅವಳನ್ನು ಗೆಲ್ಲುತ್ತಾನೆ. ನಾಗಕನ್ಯೆ ಉಲೂಪಿ, ಚಿತ್ರಾಂಗದೆಯರನ್ನು ಪಡೆಯುತ್ತಾನೆ. ಕಿರಾತನೊಂದಿಗೆ ಕಾದಾಡುತ್ತಾನೆ. ಅವನಿಂದ ವರವನ್ನು ಪಡೆಯುತ್ತಾನೆ. ಮಯಸಭೆಯ ಅತ್ಯದ್ಭುತ ಭವನದಲ್ಲಿ ಸೋದರರೊಂದಿಗೆ ಕೆಲವು ದಿನ ಉಳಿಯುತ್ತಾನೆ. ಸೋದರ ಸಮೇತನಾಗಿ, ರಾಜರೊಡನೆ ಯುದ್ಧಮಾಡಿ ಅಪಾರ ಧನಸಂಪತ್ತನ್ನು ಗೆದ್ದು ತರುತ್ತಾನೆ. ಕಾಮ–ಅರ್ಥಗಳಲ್ಲಿ ಪೂರ್ಣ ಸಾಫಲ್ಯವನ್ನು ಪಡೆಯುತ್ತಾನೆ. ತಪಸ್ಸಿನಲ್ಲಿಯೂ ಆತ ಹಿಂದೆ ಬೀಳುವುದಿಲ್ಲ. ಇಂದ್ರಸಭೆಗೆ ಹೋಗುತ್ತಾನೆ – ಭಾರತೀಯ ಅದ್ಭುತ ಕಥೆಗಳ ಅನೇಕ ನಾಯಕರು ಹೋಗುವಂತೆಯೇ. ಇಂದ್ರಲೋಕದ ಅಪ್ಸರೆಯು ಆ ನಾಯಕರ ಮೇಲೆ ಹೇಗೆಯೋ ಹಾಗೆಯೇ ಅವನ ಮೇಲೆಯೂ ಮೋಹ ತಾಳುತ್ತಾಳೆ. ಊರ್ವಶಿಗೆ ಅರ್ಜುನನು ನಕಾರದ ಉತ್ತರವೀಯುತ್ತಾನೆ. ಇಂಥ ನಕಾರದೊಳಗಿಂದ ಉಂಟಾಗುವ ಶಾಪದ ದಿವ್ಯಕಥೆಯೊಳಗಿನ ವಲಯವೂ ಅವನ ಸುತ್ತ ತಿರುಗುತ್ತದೆ. ಒಬ್ಬ ನಾಗನೂ ಅವನೊಂದಿಗೆ ವೈರ ತಾಳಿದ್ದಾನೆ. ಅರ್ಜುನನ ಬಾಣವು ಒಮ್ಮೆ ಹುತ್ತದಲ್ಲಿ ಹೊಕ್ಕು ಅವನಿಗೆ ನಾಟಿತು. ಆ ವೈರವನ್ನು ತೀರಿಸಿಕೊಳ್ಳಲು ಆ ನಾಗನು ಕರ್ಣನ ಕೈಯ ಬಾಣವಾದನು. ದಿವ್ಯಕಥೆಯೊಳಗಿನ ತಪಸ್ವಿಯಾದ ವೈರಿಯಂತೆ ಕರ್ಣನೂ ನೇಮನಿಷ್ಠನು. ಒಂದು ಬಾಣವನ್ನು ಆತ ಮರಳಿ ಬಿಡುವುದಿಲ್ಲ. ಆದ್ದರಿಂದ ಅರ್ಜುನನ ಮೇಲಿನ, ನಾಗನ ವೈರವು ವ್ಯರ್ಥವಾಗಿ ಹೋಗುವುದು; ಮತ್ತು ಕರ್ಣನ ಮೇಲೆಯೇ ತಿರುಗುವುದು. ಗೋಗ್ರಹಣದ ಸಂಕಟ ನಿವಾರಣೆಯಾದ ಮೂಲಕ ವಿರಾಟರಾಯನು ಉತ್ತರೆಯನ್ನು ಅರ್ಜುನನಿಗೆ

ಕೊಡಲು ಅಣಿಯಾಗುತ್ತಾನೆ. ಅರ್ಜುನ ಅವಳನ್ನು ಹೆಂಡತಿಯಾಗಿ ಸ್ವೀಕರಿಸು ವುದಿಲ್ಲ, ಸೋದರಿಯಾಗಿ ಸ್ವೀಕರಿಸುತ್ತಾನೆ. ಅವನಿಗೆ ತನ್ನ ವಯಸ್ಸು ನೆನಪಾಗುತ್ತದೆ; ಅದೇ ಗಳಿಗೆಗೆ ಅವನಿಗೆ, ವಾಸ್ತವದೊಂದಿಗೆ ಜೋಡಿಸುವ ಬಲಿಷ್ಠ ಎಳೆಯನ್ನು ವ್ಯಾಸರು ಸಿದ್ಧಮಾಡುತ್ತಾರೆ. ಊರ್ವಶಿಗೆ ಒಲ್ಲೆ ಎನ್ನುವಾಗಲೇ ಅವಳ ಮತ್ತು ತನ್ನ ಅಪ್ತ ಸಂಬಂಧ ಅಜ್ಜಿ ಮೊಮ್ಮಗನಂತೆ ಎಂದು ಅರ್ಜುನನ ಮನದಲ್ಲಿ ಬರುತ್ತದೆ. ಇಲ್ಲಿಯೇ ಯುಧಿಷ್ಠಿರನ ಈ ಸೋದರನು ಆದರ್ಶಭೂಮಿಕೆಯಲ್ಲಿ ವ್ಯವಹರಿಸುತ್ತಾನೆ. ಯುಧಿಷ್ಠಿರನು ವರ್ತಿಸ ಬಹುದಾದಂತೆ ವರ್ತಿಸುತ್ತಾನೆ. ವಾಸ್ತವ-ಆದರ್ಶಗಳ ಅರಿವಿನ ಬೀಜವನ್ನು ವ್ಯಾಸರು ಪ್ರಥಮತಃ ಇಲ್ಲಿಯೇ ನೆಡುತ್ತಾರೆ; ಪರಮಾವಧಿಯ ಕೌಶಲದಿಂದ ಅಪ್ಸರ ಕಥೆಯ ತಂತುವನ್ನು ವಿಲಕ್ಷಣ ಚೈತನ್ಯದಿಂದ ತುಂಬುತ್ತಾರೆ. ಈ ಚೈತನ್ಯವನ್ನು ಅವರು ಕಾಲ್ಪನಿಕ ಸ್ಫುರಣದಿಂದ ನಿರ್ಮಿಸಿದ್ದಲ್ಲ. ಪಾರಂಪರಿಕ ದಿವ್ಯಕಥೆಗಳಲ್ಲಿ ಈ ಸ್ಫುರಣವಿರುತ್ತದೆ. ಆದರೆ ಆ ಮೂಲಕ ಆ ಕಥೆ ಯಾಂತ್ರಿಕ ವಾಗುತ್ತದೆ. ಈ ಯಶಸ್ವಿಯಾದ ತಂತ್ರವನ್ನು ಬಳಸುವಾಗ ವ್ಯಾಸರು ಆ ಯಶಸ್ಸಿನಲ್ಲಿಯ ದೌರ್ಬಲ್ಯವನ್ನು ಗುರುತಿಸಿದ್ದು ಕಾಣುತ್ತದೆ. ಆದ್ದರಿಂದಲೇ ಈ ತಂತ್ರಕ್ಕೆ ಅವರು ಬೇರೆಯೇ ತಿರುವು ಕೊಟ್ಟು, ಅದರ ಢಾಳವಾದ ಬಣ್ಣವನ್ನು ಸೌಮ್ಯವಾಗಿಸಿದ್ದಾರೆ. ಅದರೊಳಗಿನ ನಾಯಕನ ಒಂಟಿ ಅಲೆದಾಟಕ್ಕೆ ಹಿರಿಯಣ್ಣನ ಹಾಗೂ ದ್ರೌಪದಿಯ ಗಡುಸಾದ ನಿಯಂತ್ರಣವನ್ನು ಹಾಕಿದರು. ಮತ್ತು ಯುದ್ಧದ ಗೆಲುವಿನಲ್ಲಿ ಕಥೆಯ ಕೊನೆಯನ್ನು ಮಾಡಲಿಲ್ಲ. ಆದರೆ ಇದನ್ನು ಮಾಡುವಾಗ ದಿವ್ಯಕಥೆಯ ನವಿರಾದ ಓರಣವನ್ನು ಅವರು ಕೆಡಲು ಬಿಡಲಿಲ್ಲ. ಅರ್ಜುನನು ದಿವ್ಯಾಸ್ತ್ರಪ್ರಾಪ್ತಿಗಾಗಿ ಕಾಮ್ಯಕವನವನ್ನು ಬಿಟ್ಟು ಒಬ್ಬನೆ ಮಹಾವನಕ್ಕೆ ಹೋದನು. ಆಗ ಎಲ್ಲ ಸೋದರರಿಗೆ ಆ ಸುಂದರ ಬನವು ಶೂನ್ಯವಾಗಿ ತೋರಹತ್ತಿತು. ಆದರೆ, ಅವನ ಪ್ರೀತಿಯ ರಾಣಿ ದ್ರೌಪದಿಗೆ ಅನಿಸಿದ್ದೇನು? "ಗಿಡಗಳು ಹೂತು ಅರಳಿದ್ದರೂ ಈ ವನವು ನನಗೆ ಬರನೆಲದ ಬಯಲಾಗಿ ಕಾಣುತ್ತದೆ" – ಎನ್ನುತ್ತಾಳೆ ಅವಳು. ಸೋದರರಿಗೆ ಅವನ ಬಿಲ್ಲಿನ ಠೇಂಕಾರ ಕೇಳಿಬರದೆ ಬಿಕೋ ಎನಿಸುತ್ತಿದ್ದರೆ, ಅವಳಿಗೆ ಆ ವನದ ಚೆಲುವಿನ ಪ್ರಾಣವೇ ಕಳೆದುಹೋಯಿತೆಂದೆನಿಸುತ್ತದೆ. ಆಮೇಲೆ, ಅಪ್ಸರ ಕಥೆಗಳಲ್ಲಿ ಕಾಣೆಯಾದ ನಾಯಕನ ಶೋಧಕ್ಕಾಗಿ ಅವನ ಬಂಧುಗಳೂ ನಾಯಿಕೆಯೂ ಹೋಗುವಂತೆ, ನಾಲ್ವರು ಪಾಂಡವರೂ ದ್ರೌಪದಿಯೂ ಅರ್ಜುನನನ್ನು

ಹುಡುಕಲು ಬನಬೆಟ್ಟಗಳನ್ನೆಲ್ಲ ಸುತ್ತುತ್ತ ಅಲೆಯುತ್ತಾರೆ. ಹೀಗೆ ಅಪ್ಸರ ಕಥೆಯ ನಾಜೂಕಾದ ಆಯ್ದ ಕಲಾಗುಣಗಳೆನ್ನೆತ್ತಿಕೊಂಡು ವ್ಯಾಸರು ತಮ್ಮ ಕಥಾವಸ್ತು ವನ್ನು–ಅಪ್ಸರ ಕಥೆಯ (Fairytale) ಕಷ್ಟದಿಂದ ದೂರವಿಟ್ಟಿದ್ದಾರೆ.

ಈ ಅಪ್ಸರ ಕಥೆಯ ಅಂತ್ಯವನ್ನು ಕೂಡ ವ್ಯಾಸರು ಅತಿಶಯ ಸ್ವಾರಸ್ಯದಿಂದ ಮೂಡಿಸಿದ್ದಾರೆ. ಕನಸಿನೊಳಗೆ ಒಂದು ಸುಂದರ ಕನಸು ಬೀಳುವಂತೆ ಗೀತೆಯ ಕಥನ ಮತ್ತು ವಿಶ್ವರೂಪದರ್ಶನ ಇವು ಅರ್ಜುನನ ನವಯುವಕ ಸ್ವಪ್ನಾಳು ವೃತ್ತಿಗೆ ಕಲಶವಿಟ್ಟಂತೆ. ಅನಂತರ ಕ್ರಿಯೆ ಮತ್ತು ಪ್ರತಿಕ್ರಿಯೆ, ಒಳ್ಳೆಯ ಮತ್ತು ಕೆಟ್ಟ, ಅಪ್ಸರ ಕಥೆಗಳ ನಾಯಕನಿಗೂ ಅತೀಂದ್ರಿಯ ಶಕ್ತಿಯ ಸಲಹೆಗಾರ ನೊಬ್ಬನಿರುತ್ತಾನೆ. ಅದೇ ಭಾರವನ್ನು ಇಲ್ಲಿ ಕೃಷ್ಣನು ಹೊತ್ತಿದ್ದಾನೆ. ಅರ್ಜುನ ನಿಂದ ತನ್ನನ್ನು ದೂರಮಾಡುವಾಗ, ಪರಮೋಚ್ಚ ಪ್ರಸಾದದ ಈ ಕ್ಷಣವನ್ನು ಅವನು ಅರ್ಜುನನಿಗೆ ಅನುಭವಿಸಲು ಕೊಟ್ಟನು. ಇಲ್ಲಿಯೇ ಜೀವನಮರಣದ ಲಾಕ್ಷಣಿಕ ಅರ್ಥದ ಸ್ಪಷ್ಟೀಕರಣವನ್ನು ಮುಂದೆ ಮಾಡಿ ಕೃಷ್ಣನು ಅರ್ಜುನನ ಜೀವನದ ದಿವ್ಯಕಥೆಯ ಆ ತೆಳುಪಟಲವನ್ನು ಭೇದಿಸಿ ಹಾಕುವನು. ಆದರೆ, ಎಷ್ಟು ಮೆಲ್ಲಗೆಂದರೆ, ಅದು ಹೋಗುತ್ತಿದೆಯೆಂಬುದು ನಮಗೆ ತಿಳಿಯುವುದೂ ಇಲ್ಲ. ದೊಡ್ಡ ಭ್ರಮೆಯನ್ನು ಹಾಕಿ ಅವನು ಚಿಕ್ಕ ಚಿಕ್ಕ ಭ್ರಮಾಜಾಲಿಗೆಗಳನ್ನೂ ಸ್ವಪ್ನದೃಶ್ಯಗಳನ್ನೂ ಇಲ್ಲವಾಗಿಸಿದನು. ದ್ರೌಪದಿ, ಉಲೂಪಿ, ಚಿತ್ರಾಂಗದೆಯರು ಈಗ ನಾಯಿಕೆಯರಾಗಿ ಉಳಿದಿಲ್ಲ. ಅವರು ಉಳಿದದ್ದು ಪ್ರೌಢಮಾತೆಯರಾಗಿ. ಅರ್ಜುನ ಗೆಲ್ಲಬೇಕಾಗಿದ್ದುದು ಬರಿಯ ರಾಜ್ಯವನ್ನು. ಆದರೆ ಆ ಗೆಲುವಿ ನೊಳಗಿನ ಉನ್ಮಾದವು ಈಗ ಸೋರಿಬಿದ್ದಿತ್ತು. ಇಲ್ಲಿಂದ ಮುಂದೆ ಆತ ಹೊಸ ಬದುಕು ಬಾಳುವುದಿತ್ತು ಕಳೆದು ಹೋದ ಬದುಕಿನ ನೆನಹುಗಳನ್ನು ಮತ್ತೆ ಮತ್ತೆ ಮೆಲುಕು ಹಾಕುವುದಿತ್ತು ಮನಸ್ಸಿನಲ್ಲಿ. ಅರ್ಜುನನು ತತ್ವಜ್ಞಾನದಿಂದ ಎಚ್ಚರಾದನು. ಯುದ್ಧದಲ್ಲಿ ಮಗನನ್ನು ಕಳೆದುಕೊಂಡ ದುಃಖಿಯಾದ ತಂದೆ ಯಾದನು. ಪುಣ್ಯಕ್ಕೂ ಹಕ್ಕುದಾರನಾದನು; ಭಕ್ತನಾದನು ಮತ್ತು ಅಷ್ಟೇ ಪ್ರೌಢಸಂಭಾವಿತನೂ ರಿಕ್ತನೂ ಆದನು.

ಎಲ್ಲಿ ಅಪ್ಸರ ಕಥೆಯ ನಾಯಕನ ಕಥೆಯು ಮುಗಿಯುತ್ತದೆಯೋ ಅಲ್ಲಿ ಖಾಲಿಯಾದ, ಟೊಳ್ಳಾದ, ಪ್ರೌಢ ಸಂಭಾವಿತನ ಒಣ ಕಥೆಯು ಆರಂಭ ವಾಗುತ್ತದೆ. ಇಲ್ಲಿಯೇ ಪಾರಂಪರಿಕ ಕಾವ್ಯಮಯತೆ ಮುಗಿದು ವಾಸ್ತವದ ಪ್ರಾಂತದಲ್ಲಿ ಕಾಲಿಟ್ಟ ಮೇಲೆ ವ್ಯಾಸರ ಪ್ರಗಲ್ಭ ಮತ್ತು ಸಂಯತವಾದ

ಕಾವ್ಯಮಯತೆಯು ಪ್ರತೀತಿಗೆ ಬರುತ್ತದೆ. ಅವರ ಈ ಪ್ರತಿಭೆಯ ಸಾಕ್ಷಾತ್ಕಾರವು ಅದ್ಭುತ ಮತ್ತು ವಾಸ್ತವಗಳ ಅತ್ಯಂತ ಸ್ವಾಭಾವಿಕವಾದ ಜೋಡಣೆ ಮಾಡುವ ಕೆಲವು ಪ್ರಸಂಗಗಳಲ್ಲಿ ಕಂಡುಬರುತ್ತದೆ. ಅಪ್ಸರ ಕಥೆಯ ನಾಯಕನಿಗೆ ಗುರುವಿರುತ್ತಾನೆ. ಅರ್ಜುನನಿಗೆ ಗುರುಗಳು ಇಬ್ಬರು; ಕೃಷ್ಣ ಮತ್ತು ಒಮ್ಮೊಮ್ಮೆ ಯುಧಿಷ್ಠಿರ. ಅರ್ಜುನನು ಇಂದ್ರಸಭೆಗೆ ಹೋದದ್ದು ಯುಧಿಷ್ಠಿರನ ಪ್ರೇರಣೆ ಯಿಂದಲೇ. ಅಲ್ಲಿಗೆ ಹೋಗಲು ಅವನಿಗೆ ಶಕ್ತಿಯು ಬಂದದ್ದು, ವ್ಯಾಸರು ತನಗೆ ಕಲಿಸಿದ್ದ ಅಮೂಲ್ಯ ಪ್ರತಿಸ್ಮೃತಿ ವಿದ್ಯೆಯನ್ನು ಯುಧಿಷ್ಠಿರನು ಅವನಿಗೆ ಕೊಟ್ಟಿದ್ದರಿಂದಲೇ. ಆ ವಿದ್ಯೆಯಿಂದಾಗಿಯೇ, ಅರ್ಜುನನು ಇಂದ್ರಸಭೆ ಯಲ್ಲಿದ್ದಾಗಲೂ, ತಾನು ಅಲ್ಲಿಗೆ ಹೋದುದರ ಮೂಲಕಾರಣವನ್ನು ಮರೆಯ ಲಿಲ್ಲ; ಊರ್ವಶಿಯ ಪ್ರಲೋಭನೆಗೂ ಅವನು ಒಳಗಾಗಲಿಲ್ಲ. ಅವಳ ಸೌಂದರ್ಯ ನೃತ್ಯ ಏನೆಲ್ಲ ನೋಡಿಯೂ ಅವನಿಗೆ ಅದನ್ನು ಗುರುತಿಸಲು ಬರಲಿಲ್ಲ. ಅವಳು ಅವನಿಗೆ ಪೂರ್ವಜನ ಲಿಂಗಾತೀತ ಸ್ವರೂಪದಲ್ಲಿಯೇ ಕಂಡುಬಂದಳು. ಏಕೆಂದರೆ ಇಂದ್ರಲೋಕದಲ್ಲಿಯೂ ದಿವ್ಯಭೋಗದಲ್ಲಿ ಆತ ಮುಳುಗಲಿಲ್ಲ. ಅಲ್ಲಿ ಅವನಿಗೆ ಸುಖವಿರಲಿಲ್ಲ. ದ್ರೌಪದಿಯಲ್ಲಿ ಅವನ ಮನಸ್ಸು ತೊಡಗಿತ್ತು. ಅವಳ ದುಃಖವನ್ನು ನೆನೆದು ಅಸ್ವಸ್ಥನಾಗಿದ್ದನು; ಕೇವಲ ತಪಸ್ವಿಯಾಗಿದ್ದನು. ದ್ರೌಪದಿ ಕೂಡ, ಅವನಿಗೆ ಬೇರೆ ಯಾವ ಹೆಣ್ಣನೊಂದಿಗೂ ಸಂಬಂಧವಿಟ್ಟುಕೊಳ್ಳಬೇಡವೆಂದು ಹೇಳಿರಲಿಲ್ಲವಷ್ಟೆ? ಆದರೆ ಕುಟುಂಬ ವತ್ಸಲನಾದ ಅರ್ಜುನ ತನ್ನ ಹೆಂಡತಿಯನ್ನು ಮರೆಯಲಿಲ್ಲ. ಯುಧಿಷ್ಠಿರನ ಬಗೆಗೆ ಸೂಕ್ಷ್ಮಕಟುಭಾವನೆ ಅವನನ್ನು ತಿವಿಯುತ್ತಿತ್ತು. ಒಂದೆಡೆಗೆ ಸೆಳೆತ ಇನ್ನೊಂದೆಡೆಗೆ ತಿರಸ್ಕಾರ. ಈ ಅಸ್ವಸ್ಥಮನಸ್ಥಿತಿಯೇ ಅಪ್ಸರ ಕಥೆಯ ವಾತಾವರಣ ಭಂಗವಾಗಲು ಕೊಡದೆ ಅರ್ಜುನನಿಗೆ ವಾಸ್ತವದಿಂದ ವಿಮುಖನಾಗಲು ಬಿಡಲಿಲ್ಲ. ಅಪ್ಸರ ಕಥೆ ಮತ್ತು ವಾಸ್ತವಗಳ ನಡುವಿನ ಬಿಗಿತವನ್ನು ಅನೇಕ ಪ್ರಸಂಗಗಳಲ್ಲಿ ಬಹಳ ಕೌಶಲದಿಂದ ಬಳಸಿದ್ದು ಕಂಡುಬರುತ್ತದೆ. ಕೆಲವೊಮ್ಮೆ ಆ ಬಿಗಿತ, ತೀರ ಕೆಳಪಾತಳಿಯ ಮೇಲೆ ಒಯ್ದು, ತೀರ ಸಡಿಲಗೊಳಿಸಿದ್ದು ಕಾಣುತ್ತದೆ. ಇನ್ನು ಕೆಲವೊಮ್ಮೆ ಬಹಳ ಜಗ್ಗಿ ಕಥಾನಕದಲ್ಲಿ ಅವರು ತಿರುವು ಉಂಟುಮಾಡಬಲ್ಲರು. ಇಷ್ಟೇ ಅಲ್ಲ. ನಾಯಕನ ಪ್ರತಿಕ್ರಿಯೆಗಳನ್ನು ಬಹಳ ತೀವ್ರಗೊಳಿಸುವರು. ಯಕ್ಷಪ್ರಶ್ನೆಗಳ ಸಂದರ್ಭದಲ್ಲಿ ವಸ್ತುತಃ ಅರ್ಜುನನೇ ನಾಯಕನ ಕೆಲಸ ನಿರ್ವಹಿಸತಕ್ಕವನು. ಆದರೆ ಅಲ್ಲಿ ಯುಧಿಷ್ಠಿರನು ನಾಯಕನಾಗಿ ಸೋದರರನ್ನು ಜೀವಂತಗೊಳಿಸುವನು. ಇಲ್ಲಿ ಈ ಬಿಗಿತ, ತೀರ ಮಂದವಾಗಿದೆ.

ಭಾರತಯುದ್ಧ ಪ್ರಾರಂಭವಾಯಿತು. ದುರ್ಯೋಧನನ ಮನಸ್ಸಿನಲ್ಲಿ ಜಯದ ಬಗೆಗೆ ಅಳುಕು ಇದ್ದುದರಿಂದ ಆತ ಯುಧಿಷ್ಠಿರನೊಂದಿಗೆ ತಿರುಗೊಮ್ಮೆ ಜೂಜಾಡಿ ಅವನನ್ನು ಗೆಲ್ಲುವ ಬಯಕೆ ತಾಳಿದನು. ಯಾವಾಗ ದ್ರೋಣರು, ಯುಧಿಷ್ಠಿರನನ್ನು ಜೀವಂತವಾಗಿ ಹಿಡಿದು ದುರ್ಯೋಧನನಿಗೆ ಒಪ್ಪಿಸುವ ಪ್ರತಿಜ್ಞೆಯನ್ನು ಮಾಡುತ್ತಾರೋ ಆಗ ಯುಧಿಷ್ಠಿರನು ಅರ್ಜುನನ್ನು ಕುರಿತು "ಅರ್ಜುನಾ, ಈ ಪ್ರತಿಜ್ಞೆ ಫಲಿಸಿದರೆ ನೀನು ನನ್ನ ಹಿಂದೆ ಯುದ್ಧವನ್ನು ಮುಂದುವರಿಸು" ಎನ್ನುತ್ತಾನೆ. ಆಗ ಅರ್ಜುನನು ಅಪ್ಸರ ಕಥೆಯ ನಾಯಕನ ಆವೇಶದ ಅಮಲಿನಲ್ಲಿದ್ದನು; "ನಾನು ದ್ರೋಣರ ಮೇಲೆ ಶಸ್ತ್ರವೆತ್ತುವುದಿಲ್ಲ; ನಿನ್ನನ್ನು ಹಿಡಿಯಲು ಅವಕಾಶ ಕೊಡುವುದಿಲ್ಲ. ನಾನು ಜೀವಂತವಿರುವವರೆಗೆ ನಿನ್ನನ್ನು ಯಾರೂ ಹಿಡಿಯಲಾರರು" ಎಂದು ಉತ್ತರಿಸುತ್ತಾನೆ. ಈ ಸನ್ನಿವೇಶದಲ್ಲಿ ಅರ್ಜುನನಿಗೆ ತನ್ನ ಸತ್ಯವೃತ್ತಿಯ ಅಮಲೇರಿತ್ತು. ಆತ ಮತ್ತೆ ಹೇಳುತ್ತಾನೆ : "ನಾನು ಎಂದೂ ಸುಳ್ಳು ಆಡಿದ್ದು ನನಗೆ ನೆನಪಿಲ್ಲ. ನನಗೆ ಸೋಲಾದದ್ದೂ ನನಗೆ ನೆನಪಾಗುವುದಿಲ್ಲ. ಸುಳ್ಳು ಆಚರಣೆಯನ್ನು ನಾನೆಂದೂ ಮಾಡಿಲ್ಲ; ಅಂದಾಗ ನೀನು ಹೆದರಬೇಡ" ಎಂಬುದಾಗಿ. ಯಕ್ಷಪ್ರಶ್ನೆಯ ಸಮಯಕ್ಕೆ ಇಂಥ ಭೂಮಿಕೆಗೆ ಸರಿವಿರುದ್ಧ ಭೂಮಿಕೆಯಿತ್ತು. ಇಲ್ಲಿ ಈ ಸಹೋದರರ ಭೂಮಿಕೆಗಳು ಅದಲುಬದಲಾಗಿವೆ. ಇಲ್ಲಿಂದಲೆ ಅರ್ಜುನನ ಗುರುತ್ವವು ಏಕಮೇವ ಕೃಷ್ಣನ ಕಡೆಗೆ ಹೋಗುತ್ತದೆ.

ಈ ಹೆದರಿಕೆಯಿಂದಲೇ ಯುಧಿಷ್ಠಿರನು ಯುದ್ಧದಲ್ಲಿ ಅಸ್ಥಿರನಾದನು. ಒಮ್ಮೆ ಪಲಾಯನ ಮಾಡಬೇಕಾಯಿತು. ಒಮ್ಮೆ ಕರ್ಣನು ಬಿಟ್ಟುಕೊಟ್ಟನೆಂಬ ಅವಮಾನವನ್ನು ನುಂಗಬೇಕಾಯಿತು. ಅರ್ಜುನನು ಅವನನ್ನು ಉಳಿಸಿದನು. ಆದರೆ ಅವನ ಜೀವವನ್ನು ಉಳಿಸುತ್ತಿರುವಾಗಲೇ ಅಭಿಮನ್ಯು ಬಲಿಯಾದನು. ಯುಧಿಷ್ಠಿರನ ಮೋರೆ ಕರಿಕಪ್ಪಿಟ್ಟಿತು. ಅರ್ಜುನನಿಗೆ ಮುಖ ತೋರಿಸುವುದು ಹೇಗೆಂಬ ಚಿಂತೆ ಅವನದಾಯಿತು. ಈ ಸಂದರ್ಭದಲ್ಲಿ ಜಯದ್ರಥನನ್ನು ವಧಿಸುವ ಪ್ರತಿಜ್ಞೆಯನ್ನು ಅರ್ಜುನ ಮಾಡಿದ. "ನನ್ನ ಶಸ್ತ್ರಗಳನ್ನು ಕಡೆಗಣಿಸಬೇಡಿ; ನನ್ನ ಧನುಸ್ಸನ್ನು ಕಡೆಗಣಿಸಬೇಡಿ; ನನ್ನ ಭುಜಬಲವನ್ನು ಕಡಿಮೆಯೆಂದು ಭಾವಿಸಬೇಡಿ; ಈ ಧನಂಜಯನನ್ನು ಕಡಿಮೆಯೆಂದು ತಿಳಿಯಬೇಡಿರಿ" – ಎಂದು ತನ್ನ ಶೋಕವನ್ನು ಸಾವರಿಸಿಕೊಂಡು ಆವೇಶ ತಂದುಕೊಂಡ. "ಅಭಿಮನ್ಯು ಬಿದ್ದರೆ ನಾನು ಪ್ರಾಣವಿಟ್ಟುಕೊಳ್ಳಲಾರೆ"ನೆಂಬ ಮುಂಚಿನ ಮಾತನ್ನು ನುಂಗಿ ಮನಸ್ಸನ್ನು ಕಠಿಣಮಾಡಿಕೊಂಡನು. ಮತ್ತೆ

ವೀರನಾದನು. ಅಪ್ಸರ ಕಥೆಯ ನಾಯಕ ಅಲ್ಪಕಾಲವೇ ಆಗಿದ್ದನು. ಕೃಷ್ಣನನ್ನು ಸಂಗಡ ಕರೆದುಕೊಂಡು ಹಿಮಾಲಯದಲ್ಲಿ ಹೋಗಿ ಪಾಶುಪತಾಸ್ತ್ರವನ್ನು ಪಡೆದುಕೊಂಡನು.

ಜಯದ್ರಥವಧೆಯಿಂದ ಮುಂದೆ, ಕೃಷ್ಣನ ಹೇಳಿಕೆಯಂತೆ ಅನೇಕ ಒಳಿತು ಕೆಡುಕು ಧೋರಣೆಗಳನ್ನು ಅರ್ಜುನನು "ಯುದ್ಧನೀತಿ"ಯ ಹೆಸರಿನಡಿಗೆ ದಕ್ಕಿಸಿಕೊಳ್ಳಬೇಕಾಯಿತು. ಕೌರವರ ಧೋರಣೆ ಯುದ್ಧನೀತಿಯು ಅತಿ ಸ್ವಚ್ಛವಿರಬೇಕೆಂದಿದ್ದರೆ ಕೃಷ್ಣಾರ್ಜುನರ ಧೋರಣೆಯು ಸರ್ವಸಾಧಾರಣವಾದ ದೈನಂದಿನ ನೀತಿ; ಶುದ್ಧ, ಆದರೆ ಯುದ್ಧಕಾಲದ ನೀತಿಯು ಆಯಾ ಪ್ರಸಂಗಕ್ಕೆ ಅನುರೂಪವಾಗಿ ಇರುತ್ತಿತ್ತು. ಉಭಯ ಪಕ್ಷದ ನೀತಿ ವಿಷಯದ ಧೋರಣೆಗಳೂ ಹೀಗೆ ಒಂದನ್ನೊಂದು ಭೇದಿಸಿದ ಮೂಲಕ ಒಂದು ವಿಲಕ್ಷಣ ಪೊಳ್ಳು ಉಂಟಾಗುತ್ತದೆ ಮತ್ತು ಅದು ಎಲ್ಲ ರೂಢ ಮತ್ತು ರೂಢವಲ್ಲದ ಘಟನೆಗಳನ್ನು ಒಂದೇ ಪಾತಳಿಗೆ ತಂದು ಬಿಡುತ್ತದೆ. ದಿವ್ಯವೂ ಪಾರ್ಥಿವವೂ ಒಂದಾಗುತ್ತದೆ. ಸತ್ಯ ಮತ್ತು ಅಸತ್ಯ, ಹಗ್ಗದ ತುಂಡಿನೊಳಗಿನ ಹುರಿಗೊಂಡ ಎಳೆಗಳಂತೆ ಒಂದನ್ನೊಂದು ಸುತ್ತಿ ಹಿಳಿಲಾಗುತ್ತದೆ. ವೀರತ್ವ ಹಾಗೂ ಭೀರುತ್ವ ಒಂದೇ ವ್ಯಕ್ತಿಯಲ್ಲಿ ಒಂದರ ಹಿಂದೊಂದು ತೋರುತ್ತದೆ. ದಾರುಣ ದುಃಖವನ್ನು ಭೀಷಣ ಆನಂದವನ್ನು ವಿಂಗಡಿಸಲು ಬರುವುದಿಲ್ಲ. ವೈರ ಮೈತ್ರಿಗಳ ಮಿತಿ ಮರ್ಯಾದೆಗಳು ಮುರಿಯುತ್ತವೆ. ಎಲ್ಲರೂ ಒಂದೇ ತೂಕ ಅಳತೆಯವರಾಗುತ್ತಾರೆ. ಕೃಷ್ಣನು ವಾಸ್ತವಿಕವಾಗಿ ದೇವರ ಅವತಾರ. ಆದರೆ ಅವನ ವಿಭೂತಿಮತ್ತ್ವವೂ ಈ ಪೊಳ್ಳಿನಿಂದ ಪೂರ್ತಿ ಹರಣಗೊಂಡಿದೆ. ಉತ್ತರೆಯ ಶಿಶುವನ್ನು ಜೀವಂತವಿಡಲು ಅಶ್ವತ್ಥಾಮನನ್ನು ಬದುಕಿನಿಂದಲೇ ಅಟ್ಟಿ ಓಡಿಸುವುದಕ್ಕೆ ಭೀಷ್ಮನಿಗೆ ಅಂತಿಮ ಕ್ಷಣದಲ್ಲಿ ತನಗೆ ಸಗುಣ ಬ್ರಹ್ಮ ಕಂಡಿತೆಂಬ ಸಮಾಧಾನ ನೀಡುವುದಕ್ಕೆ ನಡುನಡುವೆ ವಿಭೂತಿಮತ್ತ್ವದ ಪ್ರಸಂಗಗಳು ಬಂದಿರಬಹುದು. ಆದರೂ ಕೃಷ್ಣನ ವ್ಯಕ್ತಿತ್ವವು ಎಲ್ಲಿಯೂ ಮನುಷ್ಯತ್ವದ, ಮಾನವೀಯತೆಯ, ಸೀಮೆಯನ್ನು ದಾಟಿ ಹೋಗುವುದಿಲ್ಲ. ಇತರರಂತೆ ಅವನೂ ದೈವಾಧೀನನೇ ಆಗಿ ಉಳಿದನು. ಇತರರ ಚಟುವಟಿಕೆಗಳಲ್ಲಿ ಪೂರ್ತಿ ತೊಡಗಿಕೊಂಡು ಸಿಲುಕಿ ಹೋದನು. ಗುರುವಿನ ಭೂಮಿಕೆಯನ್ನು ಧರಿಸಲು ಅವನು ಭಾರಿ ಬೆಲೆಯನ್ನು ತೆರಬೇಕಾಯಿತು. ತಾನಿತ್ತ ಒಳ್ಳೆಯ, ಕೆಟ್ಟ, ಸಲಹೆಗಳ ಬಗ್ಗೆ ಬಹುದೊಡ್ಡ ದಂಡವನ್ನು ಅವನು ತಾನಾಗಿಯೇ ಸ್ವೀಕರಿಸಿದನು.

ಮಕ್ಕಳು ಮರಿ ಸಂಪತ್ತು ಕೀರ್ತಿ ಎಲ್ಲವನ್ನೂ ಅವನು ಬೇರೆಯವರ ಶಾಪದ ರೂಪದಲ್ಲಿ ಭೋಗಿಸಿದನು. ಪಾಂಡವರಿಗಿಂತ ಉಧ್ವಸ್ತವಾದ ತನ್ನ ಮನೆಯನ್ನು ಆತ ಕಂಡನು. ಧೃತರಾಷ್ಟ್ರನಿಗೆ ನೋಡಬೇಕಾಗಿ ಬಂದ ಸಂಹಾರಕ್ಕಿಂತ ದುರ್ಧರವಾದ ದುಃಖ, ವಸುದೇವನ ಪಾಲಿಗೆ ಬಂತು. ಕೌರವರು ಯುದ್ಧದಲ್ಲಿ ಸತ್ತರು; ಪಾಂಡವರ ಈ ಶ್ರೇಯಸ್ಸು ಕಡಿಮೆಯಿರಲಿಲ್ಲ. ಆ ಶ್ರೇಯಸ್ಸೂ ಯಾದವರ ಪಾಲಿಗೆ ಬರಲಿಲ್ಲ. ಕ್ಷುದ್ರ ಗೃಹಕಲಹ, ಜಂಬಗಾರಿಕೆ ಇವು ಗಳಲ್ಲಿಯೇ ಅವರು ಸತ್ತರು. ಗೌಜುಗದ್ದಲವಿಲ್ಲದೆ ವಿಸರ್ಜನೆಯ ಭೂಮಿಕೆ ಯನ್ನು ಕೃಷ್ಣ ಸ್ವೀಕರಿಸಿದ. ಕೌರವರ ಮರಣದ ಪ್ರತೀಕ ಗದೆ; ಅದೇ ಯಾದವರ ಮರಣದ ಪ್ರತೀಕ ಒನಕೆ. ಈ ಪ್ರತೀಕದಲ್ಲಿಯೇ ಯಾದವರ ಶೋಕ ಕಥೆಯ ಸಾರವಿದೆ. ಸರಿ. ಇಷ್ಟೇ ಆಗಿದ್ದರೂ ಲೇಸಾಗಿತ್ತು. ಆದರೆ ಕೃಷ್ಣನ ಹೆಂಡಂದಿರನ್ನೂ ಸೆಳೆದೊಯ್ಯಲಾಯಿತು. ಅವರನ್ನು ಬಿಡುಗಡೆ ಮಾಡುವುದರಲ್ಲಿ, ಅರ್ಜುನನ ವೀರಶ್ರೀ ಕೊನೆಗೊಂಡಿತು. ಅಪ್ಸರ ಕಥೆಯ ರಾಜಕುಮಾರನ ಜೀವವು ಇಲ್ಲಿಯೇ ಖಾಯಂ, ಹೋಗಿರುತ್ತದೆ. ವಾಡಿಕೆಯ ಅಪ್ಸರ ಕಥೆಯಲ್ಲಿ ನಾಯಕನು ಗೌರವ ಶಿಖರದ ಮೇಲಿರುವಾಗ ಕಥೆ ಕೊನೆಗೊಳ್ಳುತ್ತದೆ, ನಾಯಕನಿಗೆ ಚಿರಜೀವನ ಲಭಿಸುತ್ತದೆ. ಆದರೆ ಈ ಅಭಿನವವಾದ ವ್ಯಾಸ ಕಥೆಯಲ್ಲಿ ಮಾತ್ರ ಅರ್ಜುನನು ಚಿಕ್ಕ ಪುಟ್ಟ ಸಾವುಗಳನ್ನು ಸಾಯುತ್ತ, ಕೊನೆಗೆ ಈ ರೀತಿಯಲ್ಲಿ ಜೀವಂತ ಸ್ಥಿತಿಯ ದೊಡ್ಡ ಮರಣದಲ್ಲಿ ಶಾಶ್ವತವಾಗಿ ಹೂತು ಹೋಗುತ್ತಾನೆ. ಸ್ವರ್ಗಾರೋಹಣ ಮಾಡುವುದು ಕೇವಲ ಅವನ ಛಾಯೆ; ಯುಧಿಷ್ಠಿರನ ಸೋದರನ ಛಾಯೆ; ದ್ರೌಪದಿಯ ಪತಿಯ ಛಾಯೆ. ಅವನ ಸ್ವಂತದ ಛಾಯೆಯು ಯುದ್ಧದಲ್ಲಿ ನಿಧಾನವಾಗಿ ಸವೆಯಹತ್ತಿತು; ಕೃಷ್ಣನ ನಿಧನದಲ್ಲಿ ಶಾಶ್ವತವಾಗಿ ಕರಗಿ ಇಂಗಿಹೋಯಿತು. ಅರ್ಜುನನ ವೀರತ್ವದ ಝುರಿ, ಹೇಗೆ ಕೃಷ್ಣನೋ, ಹಾಗೆಯೇ ಅರ್ಜುನನ ದೋಷಗಳಲ್ಲಿಯೂ ಅಕ್ಷರಶಃ ಪಾಲುಗಾರ ಕೃಷ್ಣನೇ. "ನನಗೆ ಮಕ್ಕಳು ಮರಿ ಹೆಂಡಿರು ರಾಜ್ಯ ಇವುಗಳಿಗಿಂತ, ಇಷ್ಟೇ ಏನು ನನ್ನ ಪ್ರಾಣಗಳಿಗಿಂತಲೂ ಅರ್ಜುನನು ಪ್ರಿಯನು" – ಎಂಬ ಕೃಷ್ಣನ ಉದ್ಗಾರವನ್ನು ವ್ಯಾಸರು ಅತಿ ಸೂಚ್ಯವಾಗಿ ಬಳಸಿಕೊಂಡಿದ್ದಾರೆ. ಕೃಷ್ಣನ ಪ್ರಾಣ ಅರ್ಜುನ ಅರ್ಜುನನ ಪ್ರಾಣ ಕೃಷ್ಣ ಎಂಬ ವಚನಕ್ಕನುಸಾರವಾಗಿ ಇಬ್ಬರನ್ನೂ ಒಂದೇ ಉದಾರ ವಿಧಿ ನಿಯತಿಗೆ ಕಟ್ಟಿಟ್ಟು ವ್ಯಾಸರು ಮಾನವತೆಯ ಮೌಲ್ಯಗಳನ್ನು ಕಲೆಯ ಪರಮೋನ್ನತ ಪಾತಳಿಯ ಮೇಲೆ ಶಾಶ್ವತವಾಗಿ ಒಯ್ದು ಇಟ್ಟಿದ್ದಾರೆ. ದುಃಖಾಂತಿಕ ನೀತಿ, ಬೋಧೆ, ಕಲೆ, ನಾಟ್ಯ, ಇತಿಹಾಸ ನಿರೂಪಣೆ ಇವೆಲ್ಲವನ್ನೂ

ಮೃತ್ಯುವಿನ ವಿರಾಟ ಪಾರ್ಶ್ವಭೂಮಿಯ ಇದಿರು ಕೇವಲ ಮಾನವೀ ಆವಿಷ್ಕಾರದಲ್ಲಿ ಜೀವೈಕ್ಯವನ್ನು ಸಾಧಿಸಿ ಎರಕಹೊಯ್ದಿದ್ದಾರೆ. ಗಳಿಗೆಗಳಿಗೆಗೂ ಜೀವನ ಮತ್ತು ಮರಣಗಳ ನಡುವಿನ ಎಳೆತ ಬಿಗಿತಗಳನ್ನು ಅವರು ಒಂದೇ ಗತಿಯಲ್ಲಿ ಕಾಯಂ ಇಟ್ಟಿದ್ದಾರೆ. ಗರ್ಭದಲ್ಲಿಯ ಜೀವದಿಂದ ಹಿಡಿದು ಭೀಷ್ಮ ರಂಥ ಹಣ್ಣು ಮುದುಕರವರೆಗೆ ಎಲ್ಲರನ್ನೂ ಅವರು ಒಂದೇ ಆವರಣದಲ್ಲಿ ಸುತ್ತಿದ್ದಾರೆ. ದುಷ್ಟ-ಶಿಷ್ಟ, ಚಿಕ್ಕ-ದೊಡ್ಡ - ಈ ಎಲ್ಲ ವಿವಿಧ ಭಾವನೆಗಳ ಸುಳಿಗಳಲ್ಲಿ ಸಿಲುಕಿ ಒಂದೇ ಅಂತಮಯ ಅಜ್ಞಾತ ಸೃಷ್ಟಿಯನ್ನು ಪ್ರವೇಶಿಸಿ ನೋಡನೋಡುತ್ತ ಕಣ್ಮರೆಯಾಗುತ್ತವೆ; ಹಿಂದುಳಿಯುವುದೇನು? ಅವರ ಕೃತ್ಯಗಳ ದೀರ್ಘಕಾಲ ಹಿಂದುಳಿಯಬಹುದಾದ ಜೀವದ ಅಂಟು ನಂಟುಳ್ಳ ಮಣ್ಣಿನ ಮೇಲಿನ ಚಿತ್ರ ವಿಚಿತ್ರ ಆಕೃತಿ; ಮತ್ತು ಆ ಆಕೃತಿಗಳು ಚಕ್ರವ್ಯೂಹದಂತೆ ಸತ್ತವರ ನಿಯತಿಯೊಳಗಿಂದ ಉತ್ಪನ್ನವಾದವು. ಜೀವವುಳ್ಳವರು ತಡ ವರಿಸುತ್ತಾ ಆ ಆಕೃತಿಗಳೊಳಗೇ ಸಿಲುಕಿ ಉಳಿದರು. ಸತ್ತ ಮೇಲೇನೋ ಮುಕ್ತರಾದರು. ಆದರೆ ಅಂಥವರ ಬದ್ಧತೆಯ ಶಾಶ್ವತತೆಯ ಪ್ರತೀಕವೆಂದರೆ ಅಶ್ವತ್ಥಾಮ; ಅವನ ಮೃತ್ಯುಹೀನತೆಗೆ ಪರಿಹಾರವೇ ಇಲ್ಲ.

ಈ ಮೃತ್ಯುವಿನ ಅವಾಢವ್ಯ ಚಕ್ರವ್ಯೂಹದ ಪ್ರಣೇತ, ವೀರ ನಾಯಕ ಅರ್ಜುನ ಮತ್ತು ಅವನ ಗುರು ಕೃಷ್ಣ. ಎಲ್ಲರಿಗಿಂತ ಮುಂಚೆ ಅರ್ಜುನನಿಗೇ ಅದರ ಪ್ರತಿಕ್ರಿಯೆಯ ಝಳ ತಾಗುತ್ತದೆ. ಪ್ರೌಢ ಅರ್ಜುನನು ಕರ್ಣನ ಅಜೇಯ ಬಲವನ್ನು ಕಂಡು ಕಸಿವಿಸಿಗೊಳ್ಳುತ್ತಾನೆ. ಎಲ್ಲ ಪಾಂಡವರೂ ಕಸಿವಿಸಿ ಗೊಳ್ಳುತ್ತಾರೆ. ಆದರೆ ಆಗ ಎಲ್ಲರ ಟೀಕೆಯ ಪ್ರಹಾರವನ್ನೂ ಅರ್ಜುನನೊಬ್ಬನೇ ಸಹಿಸಬೇಕಾಗುತ್ತದೆ. ಇಲ್ಲಿಂದ ಪಾಂಡವರ ಅಂತರ್ಗತಕ್ಷೋಭೆಯ ಹೊಸ ನಾಟ್ಯ ತೆರೆದು ಆವಿಷ್ಕಾರದಲ್ಲಿ ಪ್ರಕಟವಾಗುತ್ತದೆ. ಅರ್ಜುನನ ಅಳಿದುಳಿದ ದೇವಪುತ್ರತ್ವವನ್ನು ವ್ಯಾಸರು ಪರಪರ ಹರಿದು ಚೆಲ್ಲುತ್ತಾರೆ; ಅವನನ್ನು ಕ್ಷುದ್ರ ಮನುಷ್ಯನನ್ನಾಗಿ ಮಾಡುತ್ತಾರೆ. ಯುದ್ಧದೊಳಗಿನ ಅನೀತಿಮಯ ಧೋರಣೆಯ ಅರುಚಿಯೂ ಮೊದಲಿಗೆ ಅವನಿಗೇ ಬಂದಿತು. ಇಲ್ಲಿಂದಲೇ ಸೋದರರ ನಡುವೆ ಸಂಘರ್ಷ ಉದ್ಭವಿಸುತ್ತದೆ. ಯುಧಿಷ್ಠಿರನು ದ್ರೋಣರ ಸಂಬಂಧದಲ್ಲಿ ಸುಳ್ಳು ನುಡಿದುದರ ಬಗ್ಗೆ ಅರ್ಜುನನಿಗೆ ಕೋಪ ಬಂತು. ಹಿಂದೆ, ವನದಲ್ಲಿದ್ದಾಗ ಭೀಮನೊಡಗೂಡಿ ಅವನೂ ಯುಧಿಷ್ಠಿರನ ಮೇಲೆ ಆರೋಪದ ಹೊರೆ ಹೊರಿಸಿದ್ದ. ಆದರೆ, ಈ ಆರೋಪವು ಅದಕ್ಕಿಂತ ಗಂಭೀರವಾಗಿತ್ತು. ಭೀಮನು ಯುಧಿಷ್ಠಿರನನ್ನು ಕುರಿತು ಚುಚ್ಚಿ ಮಾತಾಡುವವನೇ ಆಗಿದ್ದನು.

ಆದರೆ ಇಲ್ಲಿ ಮಾತ್ರ ಕೌರವರ ವೈರ ಅವನ ಅಸ್ಥಿಮಾಂಸಗಳಲ್ಲಿ ಎಷ್ಟು ಅಡಗಿಕೊಂಡಿತ್ತು ಎಂದರೆ, ಅವರನ್ನು ಏನು ಮಾಡಿದರೂ ಅದು ಕಡಿಮೆಯೇ ಎಂಬುದು ಅವನ ಮನೋವೃತ್ತಿಯಾಗಿತ್ತು. ಆಗ ಅವನು ಯುಧಿಷ್ಠಿರನ ಪಕ್ಷ ವನ್ನು ಎತ್ತಿಹಿಡಿದನು. ದ್ಯೂತದ ಹಾಗೂ ದ್ರೌಪದಿಯ ಅವಮಾನದ ನೆನಪನ್ನು ಅರ್ಜುನನಿಗೆ ತಂದುಕೊಟ್ಟನು.

ಕರ್ಣನ ಪರಾಕ್ರಮ ಬೆಳೆಯುತ್ತಿತ್ತು. ಅದರ ಭಯದಿಂದ ಪಾಂಡವರು ತ್ರಸ್ತರಾಗಿದ್ದರು. ಆ ವೇಳೆಗೆ ಭೀಮನು ಅರ್ಜುನನಿಗೆ "ನೀನು ನಮ್ಮ ಗಾಯಕ್ಕೆ ಉಪ್ಪು ಏಕೆ ತಿಕ್ಕುವೆ? ನಿನಗೆ ಗೊತ್ತಿಲ್ಲ, ಭೀತಿಯಿಂದ ನಾವೆಷ್ಟು ಕಂಗಾಲಾಗಿ ದ್ದೇವೆಂದು" ಎಂಬುದಾಗಿ ಹೇಳುವುದರಲ್ಲಿ ಏನೂ ಸೋಜಿಗವಿಲ್ಲ. ಆದರೆ ಈ ಪ್ರಕರಣವು ಇಷ್ಟಕ್ಕೇ ನಿಲ್ಲುವುದಿಲ್ಲ. ಸಾತ್ಯಕಿಯು ಧೃಷ್ಟದ್ಯುಮ್ನನಿಗೆ, "ದ್ರೋಣನು ಬ್ರಾಹ್ಮಣ; ಕಪಟದಿಂದ ನೀನು ಅವನನ್ನು ಹೇಗೆ ಕೊಂದೆ" ಎನ್ನುತ್ತಾನೆ; ಅರ್ಜುನನ ಆಕ್ಷೇಪವನ್ನು ಎತ್ತಿಹಿಡಿಯುತ್ತಾನೆ. ಅದಕ್ಕೆ ಧೃಷ್ಟದ್ಯುಮ್ನನು ಸಾತ್ಯಕಿಗೆ, "ಭೂರಿಶ್ರವನು ಯಜ್ಞಕರ್ಮದಲ್ಲಿ ನಿಮಗ್ನ ನಾಗಿದ್ದಾಗ, ಅಸಹಾಯಕನಾಗಿದ್ದಾಗ, ನೀನು ಅವನನ್ನು ಹೇಗೆ ವಧಿಸಿದೆ" ಎಂದು ಕೇಳುತ್ತಾನೆ. ಇಬ್ಬರಿಗೂ ಬಡಿದಾಟ ಮೊದಲಾಗುತ್ತದೆ. ಭೀಮ ಸಹದೇವರು ಬಿಡಿಸುತ್ತಾರೆ.

ಈ ವಿಷಾದದ ಕಿಡಿಯು ಹೊತ್ತಿ ಉರಿಯುತ್ತಲೆ ಉಳಿಯುತ್ತದೆ. ಆದರೆ ಪಾಂಡವರ ಪರಸ್ಪರ ಪ್ರೇಮವು ಈ ಭೇದಗಳಿಗಿಂತ ದೊಡ್ಡದಾಗಿದ್ದ ಕಾರಣ, ಮತ್ತು ಕೃಷ್ಣನಂಥ ಸಖನು ಆ ಕುಟುಂಬದ ಒಗ್ಗಟ್ಟು ಶಾಶ್ವತವಾಗಿ ಉಳಿಯಬೇಕೆಂದು ಹೆಣಗುತ್ತಿದ್ದ ಕಾರಣ ಆ ಕುಟುಂಬದ ಸ್ವಾಸ್ಥ್ಯದ ಮಗ್ಗುಲು ಗಳು ಮುರಿದು ಹೋಗಲಿಲ್ಲ. ಅದರಲ್ಲಿಯೂ ಯುಧಿಷ್ಠಿರನ ಸುಜ್ಞಾನೀ ತತ್ತ್ವದ ಎಚ್ಚರ ಎಂದೂ ನಷ್ಟವಾಗಲಿಲ್ಲ. ಆತ ಎಲ್ಲಿಯೂ ಅಭಿಮಾನವು ಅಡ್ಡ ಬರಲು ಬಿಡಲಿಲ್ಲ. ಆದ್ದರಿಂದ ಯುಧಿಷ್ಠಿರನೂ ಅರ್ಜುನನೂ ಕೊನೆಯತನಕವೂ ಒಟ್ಟಾಗಿ ಉಳಿದರು.

ಅರ್ಜುನನ ಪೂರ್ವವಯಸ್ಸಿನ, ಅಪ್ಸರ ಕಥೆಯ ಥಾಳ ಬಣ್ಣದ ವ್ಯಕ್ತಿತ್ವವನ್ನು ವ್ಯಾಸರು ಬಹಳ ಚೊಟಿಯಿಂದ ಈ ಉತ್ತರ ಭಾಗದಲ್ಲಿ ತೊಡೆದು ಹಾಕಿದ್ದಾರೆ. ಹೆಚ್ಚೇನು? ಕೃಷ್ಣ ಮತ್ತು ಅರ್ಜುನರ ಗೀತೆಯ ಸಂದರ್ಭದ ಆದರ್ಶ ದೇವ-ಭಕ್ತರೆಂಬ ಭೂಮಿಕೆಯನ್ನು ಅವರು, ಹಳದಾದ ರಂಗವಲ್ಲಿಯನ್ನು

ಒರೆಸಿ ಹಾಕುವಂತೆ ಸಂಪೂರ್ಣವಾಗಿ ಅಳಿಸಿ ಬಿಟ್ಟಿದ್ದಾರೆ. ಯುದ್ಧದ ಅನಂತರ ಅಶ್ವಮೇಧ ಯಜ್ಞವಾಯಿತು. ಆ ಕಾಲಕ್ಕೆ ಅರ್ಜುನನು ಅನೇಕ ರಾಜರನ್ನು ಗೆದ್ದು ಬಹಳ ದ್ರವ್ಯವನ್ನು ಸಂಗ್ರಹಿಸಿದನು. ಆ ವೇಳೆಗೆ "ಯುದ್ಧದಲ್ಲಿ ಯಾವುದೇ ರಾಜನನ್ನು ಕೊಲ್ಲುವುದಿಲ್ಲ; ಕೇವಲ ಗೆದ್ದು ಬಿಟ್ಟು ಕೊಡುವುದು" ಎಂಬ ಯುಧಿಷ್ಠಿರನ ಆಜ್ಞೆಯನ್ನು ಆತ ಚಾಚೂ ತಪ್ಪದೆ ಪಾಲಿಸಿದನು. ಆದರೆ ಬಭ್ರುವಾಹನನು ತನ್ನ ತಂದೆಗೆ ರಾಜ್ಯವನ್ನರ್ಪಿಸಲು ನಿರಾಕರಿಸಿದನು. ಅದು ಅರ್ಜುನನಿಗೆ ಅಪಮಾನಾಸ್ಪದವೆನಿಸಿತು. ಗೆದ್ದುಕೊಳ್ಳದ ರಾಜ್ಯವನ್ನು ತಾನು ತೆಗೆದುಕೊಳ್ಳುವುದಿಲ್ಲವೆಂದು ಅವನು ಬಭ್ರುವಾಹನನನ್ನು ಯುದ್ಧಕ್ಕೆ ಆಹ್ವಾನಿಸುತ್ತಾನೆ. ತಂದೆ ಮಕ್ಕಳಿಬ್ಬರೂ ಗಾಯಗೊಂಡು ಬೀಳುತ್ತಾರೆ. ಕೊನೆಗೆ ಉಲೂಪಿಯ ಸಂಜೀವಿನೀ ವಿದ್ಯೆಯಿಂದ ಅರ್ಜುನ ಏಳುತ್ತಾನೆ. ಇಲ್ಲಿ ಅವನ ಜಯಿಷ್ಣುವೃತ್ತಿಯನ್ನು ವ್ಯಾಸರು ಹೇಗೋ ಸಾವರಿಸಿ ಇಟ್ಟಿದ್ದಾರೆ. ಆದರೆ ಈ ವೀರತೆಯ ತಂತುವಿನ ಮತ್ತು ಅರ್ಜುನನ ಜಿಜ್ಞಾಸುವೃತ್ತಿಯ, ಕೊನೆಯನ್ನು ವ್ಯಾಸರು ಅತ್ಯಂತ ವಿದಾರಕ ರೀತಿಯಲ್ಲಿ ಮಾಡಿದ್ದಾರೆ. ಅಶ್ವಮೇಧಯಾಗದ ವೇಳೆಗೆ, ಸಭೆಯಲ್ಲಿ ಕೃಷ್ಣಾರ್ಜುನರು ಹತ್ತಿರವೇ ಕುಳಿತಿದ್ದರು. ಆಗ ಕೃಷ್ಣನಿಗೆ ಅರ್ಜುನ ಹೇಳಿದ: "ಕೃಷ್ಣಾ, ನೀನು ನನಗೆ ಗೀತೆಯನ್ನು ಹೇಳಿದೆಯೇನೋ ನಿಜ. ಆದರೆ ನನ್ನ ಮನಸ್ಸು ಸ್ವಸ್ಥವಿಲ್ಲವಾದ್ದರಿಂದ ಅದು ನನಗೆ ತಿಳಿಯಲಿಲ್ಲ ಮತ್ತು ಏನು ತಿಳಿದಿತ್ತೋ ಅದನ್ನೆಲ್ಲ ನಾನು ಮರೆತುಬಿಟ್ಟಿದ್ದೇನೆ. ಆದ್ದರಿಂದ ಈಗ ಅದೆಲ್ಲವನ್ನೂ ಮತ್ತೊಮ್ಮೆ ಹೇಳು ನೋಡೋಣ" ಎಂದು.

ಇದನ್ನು ಕೇಳಿ ಕೃಷ್ಣನು ಸಿಟ್ಟಾದ. ರೇಗಿಕೊಂಡು, "ನಾನು ನಿನಗೆ ಇಷ್ಟು ಜೀವ ಹರಿದುಕೊಂಡು ಹೇಳಿದ್ದನ್ನು ನೀನು ಮರೆತೆ. ಇದೇನೂ ನಿನಗೆ ಒಪ್ಪುವುದಿಲ್ಲ. ಆದರೆ ನಿನಗೆ ಏನು ಹೇಳಿದ್ದೆನೆಂದು ನನಗೂ ನೆನಪಾಗುವುದಿಲ್ಲ. ಆದರೂ ನಿನಗೆ ಏನಾದರೂ ಬೇಕಿದ್ದರೆ ಒಂದು ಸಂಗತಿ ನೆನಪಾಯಿತು. ಅದನ್ನು ಹೇಳುತ್ತೇನೆ ನೋಡು, ನಿನಗೇನು ಸಿಗುವುದೋ ಎಂದು" ಎಂದ.

ಅನುಗೀತೆಯ ಈ ಪ್ರಸ್ತಾವನೆ ಅತ್ಯಂತ ವಾಕ್ಚಾತುರ್ಯದಿಂದ ಕೂಡಿದೆ. ಅತಿರಿಕ್ತ, ಅನುಚಿತ ಸ್ಥಳದ, ತತ್ತ್ವಜ್ಞಾನದ ಶೋಕಾಂತಿಕೆಯು ಹೀಗೆ ಮತ್ತೆಲ್ಲೂ ಸಿಕ್ಕುವುದಿಲ್ಲ. ಮನುಷ್ಯನು ಬುದ್ಧಿವಂತ; ಭಾವನಾಮಯನಾಗಿರುತ್ತಾನೆ. ಜೀವನಾನುಭವವನ್ನು ಪಡೆಯುವವನಾಗಿರುತ್ತಾನೆ. ಸತ್ಯದ ಬಗೆಗೆ ಅವನಿಗೆ ಅಪಾರ ಪಿಪಾಸೆ. ಸುಖದ ಸುಖಮಯತೆ ಏತರಲ್ಲಿದೆಯೆಂಬ ಜಿಜ್ಞಾಸೆ

ಅವನಲ್ಲಿದೆ. ದುಃಖದ ಮೂಲವನ್ನು ಶೋಧಿಸಿ, ಅದು ಅಮೃತತತ್ತ್ವಕ್ಕೆ ಮುಟ್ಟು ವುದೇ ಎಂಬುದನ್ನು ನೋಡಬೇಕಾಗಿದೆ. ಅನಂತಕಾಲದಲ್ಲಿ ಅವನಿಗೆ ತನ್ನ ಮೂಲವು ಕಾಣುತ್ತದೆ. ಸನಾತನ ಮಾನವತೆಯೊಂದಿಗೆ ಜೀವವು ಸಂಬದ್ಧ ವಾಗಿದೆಯೆಂಬ ಅರಿವು ಅವನಲ್ಲಿ ಜಾಗೃತವಾಗಿದೆ. ಆದಾಗ್ಯೂ ಇವೆಲ್ಲದರ ಸಮರ್ಪಕವಾದ ಉತ್ತರ ದೊರೆಯುವುದು ಅವನಿಗೆ ಕಠಿಣವಾಗಿ ಬಿಡುತ್ತದೆ. ಸರ್ವಂಕಷ ಸತ್ಯಕ್ಕೆ ಅವನು ಕೈ ಹಾಕುವನು. ಆದರೆ ಅವನ ಕೈಗೆ ಸತ್ಯದ ಬರಿಯ ಒಂದು ಕಣವು ಎಟಕುತ್ತದೆ. ಅದೇ ಅವನ ತತ್ತ್ವಜ್ಞಾನ. ಪ್ರತಿಯೊಬ್ಬನ ತತ್ತ್ವಜ್ಞಾನವೂ ಕೇವಲ ಅವನವನ ಮನಸ್ಸಿನ ಆಕಾರದಷ್ಟೇ ಇರುತ್ತದೆ. ಮನಸ್ಸಿನ ರೂಪು ರಂಗಿನಂತೆಯೇ ಅದು ಹುಟ್ಟುತ್ತದೆ ಮತ್ತು ಅಷ್ಟೇ ತಾಳಿ ಉಳಿಯುತ್ತದೆ. ಮಿಕ್ಕದ್ದು ಹರಿದು ಕೊಚ್ಚಿಹೋಗುತ್ತದೆ. ಅರ್ಜುನ ಇದನ್ನು ಕಲಿತನೆ?

ಅಪ್ಸರ ಕಥೆಯ ವಲಯದಲ್ಲಿ ಅರ್ಜುನನು ಪ್ರಮುಖನಾಗಿದ್ದರೂ ಅವನಿಗೆ ಭೀಮನ ನೆಲೆಯಿತ್ತು. ಭೀಮನು ಎರಡನೆಯ ದರ್ಜೆಯ ಅಪ್ಸರ ಕಥಾನಾಯಕ. ಒಂದೇ ಮೂಸೆಯ ಎರಡು ವ್ಯಕ್ತಿರೇಖೆಗಳನ್ನು ವ್ಯಾಸರು ಒಂದೆಡೆಗೆ ಏಕೆ ತಂದರೆಂಬ ಭ್ರಮೆ ಮೊದಲ ನೋಟಕ್ಕೆ ಆಗಬೇಕು; ಅಷ್ಟು ಅವರ ಪರಾಕ್ರಮದ ಕ್ಷೇತ್ರವು ಒಂದೇ ಬಗೆಯದಾಗಿದೆ. ಆದರೆ ವ್ಯಾಸರ ಪ್ರತಿಭೆಯು ವಿರಾಡ್ರೂಪದ್ದು. ಆದರೂ ದುಂದುಗಾರಿಕೆಯದಲ್ಲ. ಸಾವಿರಾರು ಮಂದಿಯ ದಿಗ್ದರ್ಶನವನ್ನು ಅವರು ಮಾಡಿದ್ದರೂ ಒಬ್ಬರನ್ನೊಬ್ಬರು ಯಥಾವತ್ತಾಗಿ ಹೋಲುವವರನ್ನು ಅವರು ನಿರ್ಮಿಸಲಿಲ್ಲ. ಸಮಾನ ಪಡಿಯಚ್ಚನ್ನೂ ಬಳಸಲಿಲ್ಲ. ಅನಾಹೂತ ಪಾತ್ರಕ್ಕೆ ಪ್ರವೇಶ ಮಾಡಲು ಒಂದಂಗುಲ ಜಾಗವನ್ನೂ ತೆರವು ಬಿಡಲಿಲ್ಲ. ಭೀಮಾರ್ಜುನರಂಥ ಸಮಾನ ವ್ಯವಹಾರೀ ವ್ಯಕ್ತಿಗಳನ್ನು ದಿಗ್ದರ್ಶಿಸುವಾಗ ಅವರು ಕಥಾನಕದ ಏಕಾತ್ಮತೆಯು ಭಂಗವಾಗದಂತೆ ನೋಡಿಕೊಳ್ಳಬೇಕಾಗಿರು ತ್ತದೆ. ಜೊತೆಗೆ ಪ್ರತಿಯೊಂದು ಪಾತ್ರದ ಸಾಧರ್ಮ್ಯ ವೈಧರ್ಮ್ಯಗಳ ಬಣ್ಣಗಳ ವಿರೋಧೀ ಛಾಯೆಗಳನ್ನು ಕಾಣಿಸುವಾಗ ಅವು ಒಂದರಲ್ಲೊಂದು ಕೂಡಿ ಹೋದುದನ್ನು ಕಾಣಿಸುವುದಿರುತ್ತದೆ. ಕಥೆಯ ಗತಿಯನ್ನು ಅದರಲ್ಲಿಯ ಉತ್ಕಂಠತೆಯನ್ನುಂಟುಮಾಡುವ ಶಕ್ತಿಯನ್ನು ಈ ಮೂಲಕ ಸಾಧಿಸಿ ದಂತಾಗುತ್ತದೆ. ಪಾತ್ರಗಳು ಒಂದರ ಮೇಲೊಂದು ಒರಗುವುದರಿಂದಾಗುವ ಆಕೃತಿ ಬಂಧವನ್ನು ಭೀಮಾರ್ಜುನರ ಜತೆಗೂಡಿಸುವಿಕೆಯಿಂದ ಮತ್ತು ವ್ಯಕ್ತಿರೇಖೆಗಳೊಳಗಿಂದ ವ್ಯಾಸರು ನಿರ್ಮಿಸಿದ್ದಾರೆ. ಆದರೂ, ಭೀಮನ ವ್ಯಕ್ತಿತ್ವವನ್ನು ಅವರು ಬೇರೆಯಿಟ್ಟಿದ್ದಾರೆ. ಚಿಕ್ಕಂದಿನ ಭೀಮ ಸ್ವತಂತ್ರನು. ಆದರೆ

ಯುವಾವಸ್ಥೆಯಲ್ಲಿಯ ಭೀಮನು ಅರ್ಜುನನಿಗೆ ಆಧಾರನಾಗಿದ್ದಾನೆ. ಇವೆರಡು ಅವಸ್ಥೆಗಳಲ್ಲಿಯ ಸಂದು ಜೋಡಣೆಯನ್ನು ವ್ಯಾಸರು ಭೀಮ ಅರ್ಜುನರ ಮೂಲಸ್ವಭಾವದಲ್ಲಿಯ ವ್ಯತ್ಯಾಸದಲ್ಲಿ ಸಾಧಿಸಿಕೊಂಡಿದ್ದಾರೆ. ಮೂಲತಃ ಭೀಮನು ಉಗ್ರ ಹಾಗೂ ಆವೇಗಶಾಲಿ. ಅದಕ್ಕೆ ಪ್ರತಿಯಾಗಿ ಅರ್ಜುನನು ಶಾಂತ. ಇಬ್ಬರೂ ಪ್ರೇಮವುಳ್ಳವರು. ಆದರೆ ಭೀಮನ ಪ್ರೇಮಕ್ಕೆ ಏರಿಳಿತ ಹೆಚ್ಚು. ಏನಾದರೂ ಮಾಡುವುದರಲ್ಲಿ ಹುಡುಕುವುದರಲ್ಲಿ ಇಬ್ಬರೂ ಮಗ್ನರು; ವನವಾಸದಿಂದ, ಹೆಚ್ಚುಕಡಿಮೆ ಯುದ್ಧಮುಖದವರೆಗೂ ಅದರಿಂದಲೇ ಅವರ ವೀರವೃತ್ತಿಯ ಸಮಾನ ಹೆಣಿಗೆ ಆದದ್ದಿದೆ. ಆದರೆ ಯುದ್ಧವು ಮಧ್ಯಕ್ಕೆ ಬಂದಾಗ ಅವರ ಮಾನಸಿಕ ಪ್ರತಿಕ್ರಿಯೆಗಳು ಬೇರೆ ಸ್ವರೂಪ ಪಡೆದವು. ಬುಡದಲ್ಲಿಯೇ ಏನೇ ಮಾಡಿದರೂ, ಭೀಮನು ಅದನ್ನು ಕೊನೆಯ ಎಳೆಯತನಕ ಒಯ್ಯುವನು. ಭೀಮನು ಮಾಡಿದ ನಾಶ ಕೂಡ ಅತ್ಯಂತ ವಿಧ್ವಂಸ ಸ್ವರೂಪದ್ದು ಮತ್ತು ವಿಕಟವಾದದ್ದು. ಸ್ವಲ್ಪವಾದರೂ ತಡೆದು ಮಾಡುವುದು ಯಾವಾಗಲೂ ಅವನಿಗೆ ಹಿಡಿಸಿದ್ದೇ ಇಲ್ಲ. ಚಿಕ್ಕಂದಿನಿಂದಲೂ ತಾನು ದುಃಖವನ್ನೇ ಉಂಡೆನೆಂಬ ವ್ಯಥೆಯು, ಎಲ್ಲರಿಗಿಂತ ಭೀಮನಿಗೆ ಹೆಚ್ಚಾಗಿತ್ತು. ಎಷ್ಟೆಂದರೆ ಈ ಬದುಕೇ ಬೇಡವೆನ್ನುವಷ್ಟು. ಅರ್ಜುನನಿಗೆ ಎಂದೂ ಹಾಗೆನಿಸಲಿಲ್ಲ. ಸದ್ಯದ ಕಾಲವು ಕೆಟ್ಟದಿದ್ದರೂ ಭವಿಷ್ಯವನ್ನು ತಾನು ಪರಾಕ್ರಮದಿಂದ ತನ್ನ ಮನಸ್ಸಿಗೆ ಬೇಕಾದಂತೆ ರೂಪಿಸಬಲ್ಲೆನೆಂಬ ವಿಶ್ವಾಸ ಅವನಿಗಿತ್ತು. ತನ್ನಂಥ ಧನುರ್ಧರ, ಇನ್ನೊಬ್ಬನಿರಬಾರದು ಎಂಬುದರ ಬಗ್ಗೆ ಸರ್ವದಾ ದಕ್ಷತೆಯಿಂದ ನೋಡಿಕೊಂಡನು. ದಕ್ಷತೆಯು ಭೀಮನ ಗುಣವಾಗಿರಲಿಲ್ಲ. ಆತ ವಿಪರೀತ ಪ್ರಾಕೃತ. ಅರ್ಜುನನ ಸುಸಂಸ್ಕೃತತ್ವ ಅವನಿಗೆ ಲಭಿಸಲಿಲ್ಲ. ಆದ್ದರಿಂದಲೇ ದ್ಯೂತದ ಸಂದರ್ಭದಲ್ಲಿ, ಅಂತೆಯೇ, ವಿರಾಟನ ಸಭೆಯಲ್ಲಿ ಕೀಚಕನು ದ್ರೌಪದಿಯನ್ನು ಒದೆದ ಸಂದರ್ಭದಲ್ಲಿ, ಕ್ಷೋಭೆಯನ್ನು ಹಿಡಿತದಲ್ಲಿಟ್ಟು ಕೊಳ್ಳುವುದು ಇತರರಂತೆ ಅವನಿಗೆ ಸಾಧ್ಯವಾಗಲಿಲ್ಲ. ಆ ಹೊತ್ತಿಗೆ ಅವನ ಹತ್ತಿರ ಸಹೋದರರ ಸಾವಧಾನತೆಯ ವಲಯವಿಲ್ಲದಿದ್ದರೆ ಅಜ್ಞಾತವಾಸವು ಭಂಗವಾಗಿ ಹೋಗುತ್ತಿತ್ತು.

ಅಪ್ಸರ ಕಥೆಯೊಳಗಿನ ಅರ್ಜುನನ ಪರಾವರ್ತಿತ ಅವತಾರವು ಭೀಮಾರ್ಜುನರ ಅನುಪಸ್ಥಿತಿಯಲ್ಲಿ ಆಗಿದೆ. ಆದರ ಎಲ್ಲಕ್ಕಿಂತ ಉತ್ತಮ ಉದಾಹರಣೆಯೆಂದರೆ, ಗಂಧಮಾದನ ಪರ್ವತದ ಮೇಲಿನ ಪಂಚವರ್ಣದ

ಸುಂದರ ಹೂವಿನ ಪ್ರಸಂಗದ್ದು. ಅರ್ಜುನನು ದಿವ್ಯಾಸ್ತ್ರಗಳನ್ನು ಪಡೆಯಲು ಹೊರಟುಹೋಗಿದ್ದಾನೆ; ಅವನ ಸೋದರರೂ ದ್ರೌಪದಿಯೂ ತೀರ್ಥಕ್ಷೇತ್ರ ಗಳನ್ನು ಸಂದರ್ಶಿಸುತ್ತ, ಅವನನ್ನು ಹುಡುಕಾಡುತ್ತ ಅಲೆಯುತ್ತಿದ್ದಾರೆ. ದಾರಿ ಯಲ್ಲಿ ಅವರಿಗೆ ಗಂಧಮಾದನ ಪರ್ವತವು ಸಿಕ್ಕುತ್ತದೆ. ಅದು ಹೂವುಗಳಿಂದ ತುಂಬಿ ಅರಳಿದ್ದು, ಸದಾ ಸುಗಂಧದಿಂದ ಕೂಡಿ, ವಸಂತದ ಸೊಬಗಿನಿಂದ ಉತ್ಫುಲ್ಲವಾಗಿತ್ತು. ಆ ದಿವ್ಯ ಪುಷ್ಪ ಶೋಭೆಯು ಕೇವಲ ಅತಿಮಾನುಷರ ಭೋಗವಿಲಾಸಕ್ಕಾಗಿಯೇ ನಿರ್ಮಿತವಾದದ್ದು. ಆ ಭೂಮಿಗೆ ಎಂದೂ ಮನುಷ್ಯರ ಪಾದಸ್ಪರ್ಶವಾಗಿರಲಿಲ್ಲ. ಯಕ್ಷ ರಾಕ್ಷಸರ ಪಂಚಪ್ರಾಣಗಳು ಆ ಸುಂದರ ಹೂವುಗಳಲ್ಲಿ ತೊಡಗಿದ್ದವು. ಇಂಥ ಆ ಹೂವುಗಳ ಮೇಲೆ ನಾಯಕಿಯ ದೃಷ್ಟಿ ಹಾಯಬೇಕು, ಆಕೆ ಅವನ್ನು ಬೇಡಬೇಕು. ಇದರಲ್ಲಿ ಸೋಜಿಗವೇನು? ಅದರಲ್ಲಿಯೂ ದ್ರೌಪದಿಯು, ಮೊದಲೇ ನಡೆಯುತ್ತ ದಣಿದವಳು, ಸೋತವಳು. ಘಟೋತ್ಕಚನನ್ನು ಕರೆದು ಅವಳನ್ನು ಹೊತ್ತು ಕೊಂಡು ನಡೆಯುವಂತೆ ಭೀಮನು ಅಪ್ಪಣೆ ಮಾಡಿದನು. ಅವಳು ಅರ್ಜುನನ ವಿರಹದಿಂದ ಕಂಗೆಟ್ಟಿದ್ದಾಳೆ. ಮನದಲ್ಲೇ ಶೋಕದಿಂದ ಚಡಪಡಿಸುತ್ತಿದ್ದಾಳೆ. ಆದಾಗ್ಯೂ ಆ ಹೂಗಳನ್ನು ಕಂಡೊಡನೆಯೇ ಅವಳ ರಮಣೀಮನಸ್ಸು ಉಲ್ಲಸಿತಗೊಳ್ಳುತ್ತದೆ; ಅವಳ ವಿಲಾಸೀ ವೃತ್ತಿಯು ಮರಳುತ್ತದೆ. ವಿರಹಿಣಿಯು ಸಂಗಮೋತ್ಸುಕನಾಯಿಕೆಯಾಗಿ ರೂಪಾಂತರ ಹೊಂದುತ್ತಾಳೆ; ಆಕೆ ಭೀಮನತ್ತ ಹೊರಳುತ್ತಾಳೆ. ಅರ್ಜುನನಿದ್ದಿದ್ದರೆ ಅವನತ್ತ ಹೊರಳುತ್ತಿದ್ದಳು. ಭೀಮನನ್ನು ಕುರಿತು, "ಅರ್ಜುನ ಎಂಥ ಧನುರ್ಧರ! ಅವನಿದ್ದಿದ್ದರೆ ಯಕ್ಷರೊಡನೆ ಹೋರಾಡಿ ಈ ಹೂಗಳನ್ನು ನನಗೆ ತಂದುಕೊಡುತ್ತಿದ್ದ. ನಿನ್ನ ಭುಜಬಲವೂ ಅವನಂತೆಯೇ ಇದೆ. ಆ ಹೂಗಳನ್ನು ನೀನು ತಂದುಕೊಡುವುದಿಲ್ಲವೇ?" ಎಂದು ಕೇಳುತ್ತಾಳೆ. ಇಷ್ಟು ಆವಾಹನೆ, ಆಹ್ವಾನ ಇದ್ದಮೇಲೆ ಯಾವ ನಾಯಕನು ತಾನೆ, ನಾಯಕಿಗಾಗಿ ಎಂಥ ಸಾಹಸಕ್ಕಾದರೂ ಕೈಹಾಕದೆ ಇರುತ್ತಾನೆ? ಅಂಥ ನಾಯಕನಿಗೆ ಯಶಸ್ಸು ದೊರೆಯದೆಂಬುದು ಎಂದಿಗಾದರೂ ಉಂಟೆ?

ಅಪ್ಸರ ಕಥೆಯೊಳಗಿನ ಅರ್ಜುನನ ನಾಯಕತ್ವದ ಈ ಪ್ರತಿಬಿಂಬವನ್ನು ಯುದ್ಧದ ಭಯಾನಕ ಹಿನ್ನೆಲೆಯಲ್ಲಿ ವಿಸರ್ಜನೆ ಮಾಡಮಾಡುತ್ತಲೇ ಸಾಮ್ಯದ ಮುಕುಟವನ್ನು ಮುಟ್ಟುವಂತೆ ಮಾಡಿದ್ದಾರೆ. ಅಭಿಮನ್ಯುವಿನ ಮರಣದಿಂದಾಗಿ ಶೋಕ ಕ್ರೋಧಗಳಿಂದ ಅವನು ಉರಿದೆದ್ದ. ಅವನ ನಿಯತಿಯಲ್ಲಿ ಎಲ್ಲ

ಪಾಂಡವರೂ ಸಹಭಾಗಿಗಳಾಗಿದ್ದರು. ಏಕೆಂದರೆ ಮುಂದಾದರೂ ಅಶ್ವತ್ಥಾಮನು ದ್ರೌಪದಿಯ ಎಲ್ಲ ಮಕ್ಕಳನ್ನೂ ಕೊಂದು ಎಲ್ಲ ಪಾಂಡವರನ್ನೂ ಸರಿಯಾಗಿಯೇ ದುಃಖಿಸುವಂತೆ ಮಾಡಿದ್ದನು. ಆದರೆ ಘಟೋತ್ಕಚನ ವಧೆಯು ಕರ್ಣನಿಂದಾಯಿತು; ಆ ಪ್ರಸಂಗವು ವಿಶೇಷ ನಾಟಕೀಯಗುಣದಿಂದ ತುಂಬಿದೆ. ಅಭಿಮನ್ಯುವಿನ ವಧೆಗಿಂತ ಅಲ್ಲಿ ಹೆಚ್ಚು ಕರುಣವಿದೆ. ಏಕೆಂದರೆ ಅದರಲ್ಲಿ ಒಂದು ನಾಜೂಕಾದ ಭಾವನೆಯ ಎಳೆಯನ್ನು ವ್ಯಾಸರು ಜೋಡಿಸಿದ್ದಾರೆ; ಆ ನಾಜೂಕಾದ ಭಾವವನ್ನು ಘಟೋತ್ಕಚನೊಂದಿಗಲ್ಲ, ಅಶ್ವತ್ಥಾಮನೊಂದಿಗೆ ವ್ಯಾಸರು ಸಂಲಗ್ನಗೊಳಿಸಿದ್ದಾರೆ. ಘಟೋತ್ಕಚನು ಅಶ್ವತ್ಥಾಮನೊಡನೆ ಹೋರಾಡಲು ಬಂದಾಗ, ಅಶ್ವತ್ಥಾಮ ಹೇಳುತ್ತಾನೆ : "ಮಗುವೇ ನಿನ್ನೊಂದಿಗೆ ನನಗೆ ಎಂದಿಗೂ ಹಗೆತನವಿಲ್ಲವೋ, ನನ್ನೊಡನೆ ಹೋರಾಡಬೇಡ, ಹೋಗು. ನಿನ್ನ ತಂದೆಯ ಬಳಿಗೆ ಹೋಗು" ಎಂಬುದಾಗಿ. ಆದರೆ ಅಶ್ವತ್ಥಾಮನು ಅವನ ಮಗನನ್ನು ಕೊಂದಿದ್ದನು. ಆದ್ದರಿಂದ ಘಟೋತ್ಕಚನ ಕ್ರೋಧವು, ತಂದೆಯಂತೆಯೇ, ಶಿಖರವನ್ನು ಮುಟ್ಟಿತ್ತು. ಆತ ಅಶ್ವತ್ಥಾಮನ ಮೇಲೆ ರೊಚ್ಚಿಗೆದ್ದು ಆವೇಶದಿಂದ ಮುಗಿದುಬಿದ್ದನು. ಆಗ ಅಶ್ವತ್ಥಾಮನೂ ಅವನ ಆಹ್ವಾನವನ್ನು ಸ್ವೀಕರಿಸಿದನು.

ಅರ್ಜುನನ ಮಗ ಸತ್ತ. ಆಗ ಭೀಮನ ಮಗನೂ ಸಾಯಲೇಬೇಕು. ಯಾವ ಭಾಗ್ಯ ನಾಯಕನದೋ ಅದೇ ಪ್ರತಿನಾಯಕನದು ಕೂಡ. ಸಮಾಂತರ ಘಟನೆ ಬೇಕೇಬೇಕು. ವ್ಯಾಸರು, ಭೀಮನ ಅಪ್ಸರ ಕಥೆಯೊಳಗಿನ ನಾಟಕೀಯ ಭೂಮಿಕೆಯ ಮಟ್ಟಿಗೆ ಇಷ್ಟೇ ಗಮನವಿತ್ತರು. ಆದರೆ ಭೀಮನ ನಾಯಕತ್ವದ ಕಥೆಯನ್ನು ಪರಂಪರೆಯು ಬಹಳ ಮೋಜಿನಿಂದ ಜತನಮಾಡಿಟ್ಟಿದೆ. ಭಾರತೀಯ ಪರಂಪರೆಯು ಕೃಷ್ಣಕಥೆಯಷ್ಟೇ ವಿಶಾಲ ಪ್ರಶಸ್ತ ಅವಕಾಶವನ್ನು ಭೀಮನ ಕಥೆಗಳಿಗೂ ನೀಡಿದೆ. ಎಲ್ಲದರಲ್ಲೂ ವಿನೋದವಿದೆ. ಕೃಷ್ಣನ ತುಡುಗು ತುಂಟತನ ವಿನೋದದ ವಿಷಯವಾದರೆ, ಭೀಮನ ವ್ಯಂಗ್ಯವೂ ಪರಂಪರೆಯಲ್ಲಿ ಅತಿ ಸವಿಯಾದ ವಿನೋದವನ್ನುಂಟುಮಾಡುತ್ತದೆ. ಭೀಮನ ಹೊಟ್ಟೆಬಾಕತನದ ಉಲ್ಲೇಖವನ್ನು ಕರ್ಣನು ತೀರ ಕ್ರೂರತನದಿಂದ ಮಾಡುತ್ತಾನೆ. ಭೀಮನು ಮಡಿದಾಗ ಯುಧಿಷ್ಠಿರ ಕೂಡ, "ತಿಂಡಿಪೋತತನದಿಂದಾಗಿ ಆತ ಜೀವಂತ ನಿರುವಾಗ ಸ್ವರ್ಗಕ್ಕೆ ಹೋಗಲು ಸಾಧ್ಯವಾಗಲಿಲ್ಲ" ಎಂದು ಹೇಳುತ್ತಾನೆ. ಆದರೆ ಭೀಮನ ಹೊಟ್ಟೆಬಾಕತನದ, ಉದ್ಧಟತನದ, ಅಪಾರ ಬಲದ, ಉದ್ದಂಡ ಕೌತುಕವನ್ನೇ ಭಾರತದಲ್ಲೆಲ್ಲ ಜಾನಪದ ಕಥೆಗಳು ಮಾಡಿರುತ್ತವೆ. ಭೀಮನ

ಭೋಳೆತನ ಮತ್ತು ಕೊನೆಗೆ ಅವನ ಗೆಲುವು ಇವು ಜಾನಪದ ಕಥೆಗಳೊಳಗಿನ ಮೂರ್ಖ ವಿಧವಾಪುತ್ರನಿಗೆ ದೊರಕಿದ ಗೆಲುವಿನದೇ ಪರಿವರ್ತನೆಯಾಗಿದೆ. ಈ ಬೀಜವನ್ನು ವ್ಯಾಸರು, ಲಕ್ಷ್ಯಕ್ಕೆ ಬಂದೂ ಬಾರದಂತೆ ಬಳಸಿದ್ದಾರೆ. ಇಂದಿಗೂ ಎಲ್ಲಿಯೇ ಹೋಗಿ ಭೀಮನ ಕಥೆಗಳು ಕಾಡು ಬೆಟ್ಟಗಳಲ್ಲೆಲ್ಲ ನಟ್ಟಿವೆ. ಪಂಚಗಣಿಯಲ್ಲಿ, ಭೀಮನು ಅಡಿಗೆ ಮಾಡುತ್ತಿದ್ದ ಅವಾಢವ್ಯ ಒಲೆಯು ಕಾಣುತ್ತದೆ. ಠಾಣೆಯಲ್ಲಿ ಸೂರ್ಯನದಿಗೆ ಭೀಮನು ಕಟ್ಟಿದ ಅಪೂರ್ಣ ಒಡ್ಡು ಕಾಣುತ್ತದೆ. ಎಷ್ಟೋ ಕಡೆಗೆ ಶಾಲವೃಕ್ಷಗಳು ಅರಳಿದವೆಂದಾಗ ಆದಿವಾಸಿಗಳು ಭೀಮನು ಈ ಕಾನನವನ್ನು ತುರಾಯಿಯಂತೆ ಸಿಕ್ಕಿಸಿಕೊಂಡಿದ್ದನೆಂದು ಹೇಳುತ್ತಾರೆ. ಭೀಮನಿಗೆ ರಾಜಕನ್ಯೆ ಬೇಕಿದ್ದಳು. ಆದರೆ ಒಂದೇ ರಾತ್ರಿಗೆ ಪ್ರಚಂಡ ಕಟ್ಟಡವನ್ನು ಕಟ್ಟಿಮುಗಿಸಬೇಕೆಂದು ಅವಳು ಪಣವೊಡ್ಡಿದ್ದಳು. ಕಪಟಿಯಾದ ದೇವತೆಯು ಹುಂಜದ ರೂಪತಾಳಿ ಬೆಳಗಾಗುವ ಮುಂಚೆಯೇ ಕೂಗುತ್ತದೆ. ಆಗ ಭೀಮನು ನಿರಾಶನಾಗುತ್ತಾನೆ. ಈ ಕಥೆಯನ್ನು ಭಾರತದಲ್ಲೆಲ್ಲ, ಅಲ್ಲಲ್ಲಿ, ಹರಿದು ಮುರಿದ ಅವಶೇಷಗಳಲ್ಲಿ ಪ್ರಚಂಡ ಶಿಲಾಖಂಡಗಳ, ಅಪೂರ್ಣ ಗುಹಾಮಂದಿರಗಳ ಸಂದರ್ಭದಲ್ಲಿ ಹೇಳಲಾಗುತ್ತದೆ. ಪ್ರಾಚೀನ ಭಾರತೀಯ ವಾಙ್ಮಯಕ್ಕೆ ವಿನೋದದ ಕೊರತೆಯಿದೆ. ಆದರೆ ಪರಂಪರೆಯು ವಿನೋದದ ನಿರ್ಮಾಣವನ್ನು ವ್ಯರ್ಥಗೊಳಿಸಲಿಲ್ಲ. ಭೀಮನ ಈ ಯಶಸ್ಸು ಅರ್ಜುನನ ಪಾಲಿಗೆ ಬರಲಿಲ್ಲ. ಜಾನಪದ ಕಥೆಗಳಲ್ಲಿ ನಾಯಕನು ಬಹುಶಃ ಭೀಮನೇ ಇರುತ್ತಾನೆ.

ಅಪ್ಸರ ಕಥೆಯ ವಾತಾವರಣದಲ್ಲಿ ಸುಟಿಯಾಗಿ ಅಚ್ಚುಕಟ್ಟಾಗಿ ಕುಳಿತ ಭೀಮನು ಯುದ್ಧಾನಂತರದಲ್ಲಿ ಅರ್ಜುನನಿಂದ ಬೇರೆಯಾದರೂ, ಅರ್ಜುನನಂತೆ ಅವನಿಗೆ ಜಾಗೃತಿ ಬರಲಿಲ್ಲ. ವಾಸ್ತವದ ಆಘಾತವು ಅವನಿಗೆ ಆಗುವುದಿಲ್ಲ. ಮೃತಪ್ರಾಯನಾದ ದುರ್ಯೋಧನನನ್ನು ಆತ ನೇರ ಒದೆಯುತ್ತಾನೆ. ಇಷ್ಟೇ ಏಕೆ, ಮುಂದೆ, ಮಕ್ಕಳ ಶ್ರಾದ್ಧಕ್ಕಾಗಿ ಮುದುಕ ಧೃತರಾಷ್ಟ್ರನು ಯುಧಿಷ್ಠಿರನ ಹತ್ತಿರ ದ್ರವ್ಯವನ್ನು ಬೇಡಿದಾಗ, ಬಿಡಿಗಾಸನ್ನು ಕೂಡ ಕೊಡಕೂಡದೆನ್ನುತ್ತಾನೆ. ಕೌರವರ ಮೇಲಿನ ಅವನ ವೈರ ಎಂದಿಗೂ ಶಮನವಾಗಲಿಲ್ಲ. ಈ ವೈರಕ್ಕಾಗಿ ಅವನಿಗೆ ಎಂದೂ ಅನುತಾಪವೂ ಆಗಲಿಲ್ಲ.

ಅರ್ಜುನನಲ್ಲಿ ಪ್ರತಿಕ್ರಿಯೆಯ ಎಚ್ಚರವಿದೆ. ಅವನು ಪರಾಕ್ರಮದಿಂದ ಸ್ಫುರಿಸುತ್ತಾನೆ. ಆದರೆ ತಪ್ಪಿದ ತಿಳುವಳಿಕೆಯಿಂದ ನಾಚಿಕೆ ಪಡುತ್ತಾನೆ. ಇದೇ ಭೀಮನ ಬಳಿಯಲ್ಲಿ ಇಲ್ಲ; ಆದ್ದರಿಂದಲೇ ಆತ ಮಾಡಿದ್ದಕ್ಕೆ ಸ್ವತಂತ್ರ ಬೆಲೆ

ಬರುವುದಿಲ್ಲ. ಪರಂಪರೆಯು ಅವನಿಗೆ ಬಳುವಳಿಯಾಗಿ ಕೊಟ್ಟ ಶ್ರೇಯಸ್ಸೆಲ್ಲವನ್ನೂ ಲಕ್ಷ್ಯಕ್ಕೆ ತೆಗೆದುಕೊಂಡರೂ, ಭೀಮನು ಜೀವನದ ಸೂಕ್ಷ್ಮ ಅನುಭವವನ್ನು ಪಡೆಯಲು ಅಸಮರ್ಥನು. ಅರ್ಜುನನಂತೆ ಅವನು ಭಾವಜೀವಿಯಲ್ಲ. ಅರ್ಜುನನ ಮೂಢತ್ವ ಮತ್ತು ಭೀಮನ ದೊಡ್ಡ ದಡ್ಡತನ ಇವೆರಡರ ತುಲನೆಯೇ ಶಕ್ಯವಿಲ್ಲ. ಏಕೆಂದರೆ ಅರ್ಜುನನ ಸಂವೇದಾನಾಕ್ಷಮತೆ ಬಹಳ ತರಲವಿತ್ತು. ಆದ್ದರಿಂದಲೇ ಭಾವುಕತನದ ಬಲದ ಮೇಲೆ, ಕೆಲಕಾಲವಾದರೂ ಏಕಾಗಲೊಲ್ಲದು, ಗೀತೆಯ ತತ್ತ್ವಜ್ಞಾನದ ಮೋಹಿನಿಯಲ್ಲಿ ಗುಂಗು ಹೊಂದಲು ಶಕ್ತನಾದನು.



# ಮುಕ್ತಪಥಿಕ

ಪಾಂಡವರಲ್ಲಿ ನಿಜವಾಗಿ ಕುಂತಿಯ ಮೂವರು ಮಕ್ಕಳೇ ದೊಡ್ಡವರು. ಕಿರಿಯರಿಬ್ಬರು ಮಾದ್ರಿಯ ಮಕ್ಕಳು, ತುಸು ಕುಬ್ಜರೇ ಆಗಿದ್ದಾರೆ. ನಿಜವಾಗಿ ನೋಡಿದರೆ ಅವರಿಗೆ ತಮ್ಮದಾದ ವ್ಯಕ್ತಿರೇಖೆಯೇ ಇಲ್ಲ. ನಕುಲನು ಬಹಳ ಚೆಲುವನಿದ್ದನಂತೆ. ಅವನ ನೆನಪು ಉಳಿದಿರುವುದು ಇಷ್ಟೇ. ಕೃಷ್ಣ, ಅರ್ಜುನ, ಕರ್ಣರೆಲ್ಲರೂ ಚೆಲುವರೇ ಆದರೂ ಅವರಲ್ಲಿ ಚೆಲುವಿಗಿಂತ ಬೇರೆ ಇನ್ನಾವುದೋ ಬಹಳವಿತ್ತು. ಆದರೆ ಯಾರಲ್ಲಿ ಸ್ವಂತದ ಉತ್ಕಟ ವ್ಯಕ್ತಿತ್ವವೆಂಬುದು ಏನೂ ಇಲ್ಲವೋ, ದೇಹಸೌಂದರ್ಯ ಮಾತ್ರ ಅದ್ವಿತೀಯವಾಗಿದೆಯೋ ಅಂಥ ಪ್ರಾಚೀನ ಭಾರತದ ಸಂಸ್ಮರಣೀಯ ಪುರುಷನು ನಕುಲನೇ. ಸಹದೇವನ ಉಲ್ಲೇಖವು ಇದಕ್ಕೂ ವಿಪರೀತವಾಗಿದೆ.

ಅಜ್ಞಾತವಾಸದಲ್ಲಿದ್ದಾಗ ಸಹದೇವನು ಜ್ಯೋತಿಷ್ಯಪಂಡಿತನ ಭೂಮಿಕೆಯನ್ನು ತಾಳಿದ್ದನು. ಈ ಭೂಮಿಕೆಯ ಉಪಯೋಗವನ್ನು ಮಾತ್ರ ಪರಂಪರೆಯು ಚೆನ್ನಾಗಿ ಮಾಡಿಕೊಂಡಿದೆ. ಮಹಾರಾಷ್ಟ್ರದಲ್ಲಿ, ಛತ್ತೀಸಘಡದ ಪರಿಸರದಲ್ಲಿ, ಇಂದಿಗೂ ಪೋಥಿ ಓದುವ ಬ್ರಾಹ್ಮಣರ ಹೆಸರು ಸಹದೇವ ಎಂದೇ ಇರುತ್ತದೆ. ಸಹದೇವ-ಬಾಥಳೀಯ ಜ್ಯೋತಿಷ ಪ್ರಥೆಯಲ್ಲಿ ಇದು ಕಂಡುಬರುತ್ತದೆ. ಆದರೆ ಮೂವರು ಕೌಂತೇಯರಿಗೆ ಇವರು ಸರೀಕರಾಗಲೇ ಆರರು. ಹಾಗಾದರೆ ವ್ಯಾಸರು ಈ ಎರಡು ಪಾತ್ರಗಳನ್ನು ಏಕೆ ತೆಗೆದುಕೊಂಡರು? ದುರ್ಯೋಧನನಿಗೆ ಆಧಾರವಾಗಿ ದುಃಶಾಸನನಿದ್ದನು. ಆದರೆ ದುಃಶಾಸನನಿಗೆ ಸ್ವಂತದ ವ್ಯಕ್ತಿತ್ವವಿದೆ. ದುರ್ಯೋಧನನಲ್ಲಿ ಕೊರತೆ ಬೀಳುವ ಕ್ರೌರ್ಯದ ಧಾರೆಯನ್ನು ದುಃಶಾಸನನೇ ಜೋಪಾನ ಮಾಡಿದನು. ಅವನಿಲ್ಲದಿದ್ದರೆ ಶಕುನಿಯ ದ್ಯೂತದ ಕೊನೆಯ ಭಾಗದಲ್ಲಿ ದ್ರೌಪದಿಯ ವಸ್ತ್ರಾಪಹರಣದ ಅಪ್ರತಿಮ ಪ್ರಸಂಗದಲ್ಲಿ ಅಷ್ಟು ಪ್ರಚಂಡ ಆವೇಗ ಕಂಡುಬರುತ್ತಿರಲಿಲ್ಲ. ಯುದ್ಧ ಮುಗಿದರೂ ಆ ಪ್ರಸಂಗದ ಛಾಯೆ, ಆ ಪ್ರಸಂಗವನ್ನು ನೋಡಿದವರ ಮನಸ್ಸಿನಿಂದ ದೂರವಾಗಲೇ ಇಲ್ಲ. ಅರ್ಜುನನ ಆಧಾರ ಭೀಮ. ಅವನ ಭೂಮಿಕೆಯೂ ಇಂಥದೇ ಆಕ್ರೋಶದಿಂದ ಉಂಟಾಗಿದೆ. ಆದರೆ ನಕುಲಸಹದೇವರ ಪಾಲಿಗೆ ಅವರಿಂದ ಮಹಾಭಾರತದ ನಾಟಕೀಯತೆಗೆ ಬೆಳಕು ಸಿಕ್ಕಬಹುದಾದಂತಹ ಯಾವ ಪ್ರಸಂಗವೂ ಬಂದಿಲ್ಲ. ಆದರೂ ಈ ಪಾತ್ರಗಳು ಅಪ್ರಸ್ತುತವಲ್ಲ. ತೀರ ಕೆಳಕ್ಕಿಳಿದು ದಿಟ್ಟಿಸಿ ನೋಡಿದರೆ, ಮಾತಾಡದ, ಸ್ತಬ್ಧವಾಗಿ ನಿಂತ ಈ ಇಬ್ಬರು ಪಾಂಡವರು ಕಮಾನಿನ ಎರಡು ಆಧಾರಸ್ತಂಭಗಳಿರಬೇಕೆನಿಸುತ್ತದೆ. ದೇವರ ಬಾಗಿಲಲ್ಲಿ ಪ್ರಚಂಡ ದ್ವಾರಪಾಲಕರಿದ್ದಂತೆ ಇದ್ದಾರೆ ಅವರು. ಮೂಕರು, ಆದರೆ ಎಚ್ಚರವುಳ್ಳವರು; ಪರಾಕ್ರಮಿಗಳು ಆದರೆ ಸಂಯಮವುಳ್ಳವರು; ಆಜ್ಞೆಗೆ ಕಟ್ಟುಬಿದ್ದವರು; ಸ್ವಂತದ ಕರ್ತೃತ್ವಕ್ಕೆ ಸ್ವಯಂಪ್ರೇರಣೆಯಿಂದಲೇ ಬೇಲಿ ಹಾಕಿಕೊಂಡವರು. ಈ ಇಬ್ಬರ ಸಹಾನುಭೂತಿಯ ಸಹಾಯದ ವಲಯವು ಮೂವರು ಕೌಂತೇಯರ ಸುತ್ತಲೂ ಸತತವಾಗಿ ಇರುತ್ತದೆ. ಒಂದು ಚಿತ್ರದ ಹಿನ್ನೆಲೆಗೆ ಏನು ಕಲಾತ್ಮಕ ಬೆಲೆಯೋ, ಅದೇ ಮೌಲ್ಯ, ಈ ಇಬ್ಬರ ಅಸ್ತಿತ್ವಕ್ಕಿದೆ. ಇವರ ನಿರ್ವರ್ಣತೆಯು ಮೂವರು ಕೌಂತೇಯರ ವರ್ಣಮಯ ವ್ಯಕ್ತಿತ್ವಕ್ಕೆ ಪೋಷಕವಾಗಿದೆ. ಅದ್ದರಿಂದಲೇ ಕುಂತಿಯ ತಾಯ್ತನವು ಉನ್ನತಿ ಹೊಂದಿದೆ. ಇವರು ಸುಕುಮಾರರು; ಕುಂತಿಯನ್ನೇ ಅವಲಂಬಿಸಿರುವವರು; ಅವಳನ್ನು ಮಮತೆಯಿಂದ ಕಾಣುವವರು.

ಇವರಲ್ಲಿ ಲಾಲಿತ್ಯವಿದೆ, ಬಿಳಿಯ ಶುಭ್ರ ನಿಚ್ಚಳತೆಯಿದೆ. ಇವರಲ್ಲಿ ಉಚ್ಚೃಂಖಲತೆಯ ಲವಲೇಶವೂ ಇಲ್ಲದ್ದರಿಂದಲೇ ಕುಂತಿಯ, ಅವರ, ನಡುವಿನ ಪ್ರೇಮಬಂಧನವು ದೃಢವಾಗಿರುವುದೆಂಬುದನ್ನು ಕಾಣಿಸಲು ವ್ಯಾಸರಿಗೆ ಸಾಧ್ಯವಾಯಿತು. ಸವತಿಮತ್ಸರದ ಪೂರ್ಣ ಅಭಾವವನ್ನು ಕಾಣಿಸುವುದು, ನಿಷ್ಪಕ್ಷಪಾತಿಯಾದ ಸಫಲ ವಾತ್ಸಲ್ಯವನ್ನು ಕಾಣಿಸುವುದು – ಇವು ಬೇಕಿದ್ದಾಗ, ಇಂಥ ಸಾತ್ವಿಕ ಸ್ನೇಹಮಯ ಮಕ್ಕಳೇ ಇರಬೇಕು. ಇವರಿಬ್ಬರು ಇದ್ದರೆಂದೇ ಕರ್ಣನನ್ನು ಕುರಿತ ಕುಂತಿಯ ವೈಗುಣ್ಯವು ಕೆಳಮಟ್ಟಕ್ಕೆ ಬಂದು ಮುಟ್ಟುವುದಿಲ್ಲ. ಹೆಚ್ಚೇನು? ಕರ್ಣಜನ್ಮದ ಲಾಂಛನವನ್ನು ತೊಡೆಯಲಿಕ್ಕೆಂದೇ ಇವರ ಜನ್ಮ, ಇವರ ತಾಯಿಯ ಸಾವು ಹಾಗೂ ಕುಂತಿಯ ಮಕ್ಕಳ ಬಗೆಗೆ ಇವರ ನಿಷ್ಠೆ – ಈ ಅಂಶಗಳನ್ನು ವ್ಯಾಸರು ಉಪಯೋಗಿಸಿದ್ದಾರೆ. ದುಃಶಾಸನನು ಇದ್ದುದರಿಂದಲೆ, ದುರ್ಯೋಧನನ ಬಲದ ಕಳಂಕದ ಕಪ್ಪನ್ನು ಅವನ ಸಾವಿನ ಪ್ರಸಂಗದಲ್ಲಿ ಒರೆಸಿಹಾಕಿ, ಅದಕ್ಕೆ ಕರುಣೆಯ ತಿಳಿನೀಲಿ ಬಣ್ಣವನ್ನು ಕೊಡಲು ವ್ಯಾಸರಿಗೆ ಅನುಕೂಲವಾಯಿತು. ದುರ್ಯೋಧನನ ಖಲತ್ವವನ್ನು ತನ್ನ ಸುತ್ತಲೂ ಸುತ್ತಿಕೊಂಡು ದುಃಶಾಸನನೊಬ್ಬನೇ ಹೋದನು. ಕರ್ಣನೂ ಅದರಿಂದ ಪಾರಾದನು. ಶಕುನಿಯೂ ಪಾದರಸದಂತೆ ಜಾರಿಕೊಂಡನು. ಆದರೆ ಅವರೆಲ್ಲರ ನಡೆನುಡಿಗಳ ಅಂಗಾರವೆಲ್ಲ ದುಃಶಾಸನನ ಸುತ್ತಲೇ ಮುಸುಕಿತು. ದುಷ್ಟತೆಯ ಪಾಪದಿಂದ ಅವನಿಗೆ ವಿಮೋಚನೆ ಸಿಕ್ಕಲಿಲ್ಲ. ನಕುಲ ಸಹದೇವರ ಭೂಮಿಕೆ ಅವನದಕ್ಕೆ ತೀರ ವಿರುದ್ಧ. ಅವರ ವರ್ಣರಹಿತ ಶೀತಲ ವ್ಯಕ್ತಿತ್ವವು ಪಾಂಡವರ ಯಶಸ್ಸಿನ ಹಾಗೂ ಗುಣವಂತಿಕೆಯ ಜಡತನವನ್ನು ಅರಿವಿಲ್ಲದೆ ಮಾಡುತ್ತಿರುತ್ತದೆ. ಕುಂತಿಯ ಎರಡನೆಯ, ಕ್ರಿಯಾಶೀಲವೂ ಸುಖಕರವೂ ಆದ ರೂಪವನ್ನು ತಾಳಿಯೇ ಎಂಬಂತೆ ಅವರಿಬ್ಬರು ವ್ಯವಹರಿಸುತ್ತಿದ್ದರೂ, ಅವರಿಬ್ಬರಿದ್ದುದರಿಂದಲೇ ಕೌಂತೇಯರ ವ್ಯಕ್ತಿತ್ವದ ಹೊಸತನವು ಅಚ್ಚಳಿಯದೆ ಉಳಿಯುತ್ತದೆ.

ಮೂವರು ಕೌಂತೇಯರ ಮಾತುಕತೆ ನಡೆಯುತ್ತಿರುವಾಗಲೂ ಇವರಿಬ್ಬರೂ ಅಲಿಪ್ತರೇ ಆಗಿರುತ್ತಾರೆ. ಎಷ್ಟೇ ಜಗಳವಾಡಿದರೂ ಪಾಂಡವರು ಅಂತರ್ಯದಲ್ಲಿ ಒಂದೇ ಎಂಬುದಕ್ಕೆ ಪ್ರತೀಕವಾಗಿ ವ್ಯಾಸರು ಈ ಇಬ್ಬರಿಗೆ ಈ ಮೂಕತನವನ್ನು ಕೊಟ್ಟಿರಲಿಕ್ಕಿಲ್ಲವಷ್ಟೆ.

ಮೂವರು ಕೌಂತೇಯರಿಗೂ ಮೂರು ಬಣ್ಣಗಳಿವೆ. ಈ ಮೂವರಲ್ಲಿ ಯುಧಿಷ್ಠಿರನ ವ್ಯಕ್ತಿತ್ವವು ಎಲ್ಲರಿಗಿಂತ ಅಚ್ಚುಕಟ್ಟು ಮತ್ತು ಉತ್ಸಾಹಪೂರ್ಣ. ಅರ್ಜುನನನ್ನು ನಾಯಕನನ್ನಾಗಿ ಮಾಡಿಯೂ ವ್ಯಾಸರು ಅವನ ವ್ಯಕ್ತಿರೇಖೆಯನ್ನು ತುಸು ಅಸ್ಪಷ್ಟವಾಗಿಯೇ ಇಟ್ಟಿದ್ದಾರೆ. ಅದರ ಮೇಲೆ ಅಪ್ಸರ ಕಥೆಗಳ ಪಾರಂಪರಿಕ ಬಣ್ಣಗಳ ಪುಟವೇರಿಸಿದರು. ಆದರೆ ಅವರು ರೂಪಿಸಿದ ನಿಜವಾದ ವ್ಯಕ್ತಿತ್ವವು ಯುಧಿಷ್ಠಿರನದೇ. ಉತ್ತಮ ಧನುರ್ಧಾರಿಯ ಚಿತ್ರ ಬರೆದ ಮಾತ್ರಕ್ಕೆ ಅರ್ಜುನನ ಬಾಹ್ಯಚಿತ್ರ ಪೂರ್ಣವಾಗುತ್ತದೆ. ಆದರೆ ಇಂಥ ಯಾವುದೇ ಪ್ರಕಾರವು ಯುಧಿಷ್ಠಿರನಿಗೆ ಅನ್ವಯಿಸುವುದಿಲ್ಲ. ಭೀಮಾರ್ಜುನರು ಚುಚ್ಚಿ ಮಾತಾಡುವಾಗ ಅವನನ್ನು ಬ್ರಾಹ್ಮಣನೆಂದು ಕರೆಯುತ್ತಿದ್ದರು. ಆದರೆ ಬ್ರಾಹ್ಮಣ? ಇದು ಯುಧಿಷ್ಠಿರನ ನಿಜವಾದ ಪ್ರತೀಕವಲ್ಲ. ಅದು ಅವನ ಬಿರುದೂ ಅಲ್ಲ. ಹಾಗಾದರೆ, ಅವನು ನಿಜವಾಗಿಯೂ ಯಾರು? ಆತ, ಬ್ರಾಹ್ಮಣನಿಗಿಂತಲೂ ಹೆಚ್ಚು ಬ್ರಾಹ್ಮಣನಾಗಿದ್ದನು. ಕ್ಷತ್ರಿಯರಿಗಿಂತ ಬೇರೆಯಾದ ಕ್ಷತ್ರಿಯನಾಗಿದ್ದನು. ಅವನ ಮತ್ತು ವಿದೇಹದ ಜನಕನ, ಜಾತಿ ಕುಲ ಒಂದೇ ಆಗಿತ್ತು. ಅವನ ಮತ್ತು ಗೌತಮಬುದ್ಧನ ಕುಲವೂ ಒಂದೇ ಆಗಿತ್ತು. ಅವನು ಜನಕ ಬುದ್ಧರ ಪರಂಪರೆಯಲ್ಲಿ ಉಂಟಾದ ಜೋಡಣೆಯ ಕೊಂಡಿ. ಯುಧಿಷ್ಠಿರನ ವಚನಗಳನ್ನು ಗಮನಿಸಿದಾಗ, ಬುದ್ಧನ ನೀತಿತತ್ತ್ವಗಳ ಸ್ವಾದವು ಹೆಚ್ಚು ಚೆನ್ನಾಗಿ ತಿಳಿದುಬರುತ್ತದೆ.

ಯುಧಿಷ್ಠಿರನು ಜ್ಯೇಷ್ಠ ಪಾಂಡವ. ಅವನ ಜ್ಯೇಷ್ಠತ್ವದ ನೆಳಲು ಬೆಳಕಿನ ಆಟವನ್ನು ವ್ಯಾಸರು ಒಳ್ಳೆಯ ಮೋಜಿನಿಂದ ಬಣ್ಣಿಸಿದ್ದಾರೆ. ಈ ಹಿರಿಯಣ್ಣನು ಹಿರಿಯನಾಗಿರುವನೆಂಬುದು ಈ ಅರ್ಥದಲ್ಲಿಯೇ. ಅವನ ಸೋದರರು ಅವನ ಮಾತಿನಂತೆ ವರ್ತಿಸುತ್ತಾರೆ. ಆದರೆ, ಎಲ್ಲಿ ಕ್ರಿಯೆಯು ಬರುವುದೋ ಅಲ್ಲಿ ಈತ ತನ್ನ ನೆರಳಿನಲ್ಲಿ ಹೋಗುತ್ತಾನೆ; ತಮ್ಮಂದಿರಿಂದ ಆ ಕ್ರಿಯೆಯ ಫಲಶ್ರುತಿಯಾದದ್ದನ್ನು ನೋಡುತ್ತಾನೆ. ಸ್ವತಃ ಇವನು ಎಂದೂ ಮುಂದೆ ಹೋಗಲಿಲ್ಲ. ಆದರೆ ಕ್ರಿಯೆಯು ತುಳುಕಾಡಿ ಅದರ ಸುತ್ತಲಿನ ಉನ್ಮಾದದ ಅವಸಾನದೊಡನೆ ಒಂದು ಬಗೆಯ ಶೂನ್ಯ ಪೊಳ್ಳು ಉಂಟಾಗಿಯೇ ಬಿಡುತ್ತದೆ. ಅಂಥ ಪೊಳ್ಳು ಉಂಟಾದೊಡನೆ ಅದರಲ್ಲಿ ತಿರುಗಿ ಚೈತನ್ಯವನ್ನು ಹೊಯ್ದು ಹೊಚ್ಚ ಹೊಸ ಕ್ರಿಯೆಯ ಬೀಜವನ್ನು ಬಿತ್ತಿ, ತನ್ನ ಪ್ರತಿಯೊಬ್ಬ ತಮ್ಮನ ಕರ್ತೃತ್ವಕ್ಕೆ ಪೂರ್ಣತ್ವವನ್ನು ತರಲು ನೋಡುವವನು ಕೇವಲ ಯುಧಿಷ್ಠಿರನೇ. ಏಕೆಂದರೆ ಯುಧಿಷ್ಠಿರನಿಗೆ ತಾಗಿದ ಪಿಪಾಸೆಯು ಪೂರ್ಣತ್ವದ್ದು. ಅಪೂರ್ಣತೆಯ ಬಗೆಗೆ

ಅವನ ಅರಿವು ಇತರರಿಗಿಂತ ಹೆಚ್ಚು ಪ್ರಗಲ್ಭವೂ ಹರಿತವೂ ಆಗಿತ್ತು. ಪ್ರತಿಯೊಬ್ಬ ಸೋದರರನ ಕ್ರಿಯೆಯ ಹಿಂದೆ ಯುಧಿಷ್ಠಿರನು ಯಾವಾಗಲೂ ಇರುತ್ತಾನೆ. ಕೆಲವೊಮ್ಮೆ ಆ ಕ್ರಿಯೆಗೆ ಪ್ರೋತ್ಸಾಹಕನಾಗಿ, ಕೆಲವೊಮ್ಮೆ ವಿರೋಧಕನಾಗಿ ಇರುತ್ತಾನೆ. ಪಾಂಡವರ ನಡುವಿನ ಸಂಘರ್ಷವೂ ಒಗ್ಗಟ್ಟೂ ಈ ಯುಧಿಷ್ಠಿರನ ಮೂಲಕವೇ ಬಹಳ ವೈಶಿಷ್ಟ್ಯಪೂರ್ಣವಾಗಿದೆ. ಚಿಂತನಶೀಲತೆಗೆ ಕ್ರಿಯಾ ಶೀಲತೆಯು ನೀಡಿದ ಮೂಕ ಆದರೆ ಬಲಿಷ್ಠ ಆಹ್ವಾನವು ಯುಧಿಷ್ಠಿರನಲ್ಲಿಯೇ ನನಗೆ ಕಂಡುಬರುತ್ತದೆ.

ಚಿಕ್ಕಂದಿನಲ್ಲಿಯೇ ತಂದೆಯ ನಿಧನದ ಮೂಲಕ ತಲೆಯ ಮೇಲೆ ಭಾರಿ ಭಾರವು ಬಿದ್ದ ಈ ಹುಡುಗ ತಮ್ಮಂದಿರಿಗೆ ವಾತ್ಸಲ್ಯಪೂರ್ಣ ತಂದೆಯೇ ಇದ್ದಂತೆ, ಸ್ವಭಾವದಿಂದಲೇ ಅತಿ ಮೃದು ಮತ್ತು ಚಿಂತಾನ್ವಿತ. ಕೌರವರ ಚಿಕ್ಕಂದಿನ ವೈರಪೂರ್ಣ ನಡತೆಯೊಂದಿಗೆ ಮುಖಾಮುಖಿಮಾಡಲು ಆತ ಸಮರ್ಥನಿದ್ದಿಲ್ಲವೆಂದಲ್ಲ. ಆದರೆ ಮೂಲತಃ, ಖಾಡಾಖಾಡಿ ಜಗಳಕ್ಕೂ ಅವನಿಗೂ ವಿರೋಧ. ಅಜಾತಶತ್ರುತ್ವವು ಅವನ ಅಂಗೋಪಾಂಗಗಳಲ್ಲಿ ಅಡಗಿತ್ತು. ಆದರೂ ಅವನ ಜನ್ಮವು ಶತ್ರುತ್ವದೊಂದಿಗೆ ಹೋರಾಡು ವುದರಲ್ಲಿಯೇ ಕಳೆದುಹೋಯಿತು. ಚಿಕ್ಕತನದಲ್ಲಿ ತಮ್ಮ ಪಾಲಿಗೆ ಬಂದ ಕಷ್ಟಗಳಿಂದ ಭೀಮಾರ್ಜುನರು ಬಳಲಿದರು. ಆದರೆ ಈ ಬಳಲಿಕೆಯೊಳಗಿಂದ ಯುಧಿಷ್ಠಿರನ ಮನಸ್ಸು ಮಾತ್ರ ಒಂದು ನಿತ್ಯನೂತನ ಪೋಷಣೆ ಪಡೆಯುತ್ತ ಹೋಯಿತು. ಬಾಲ್ಯದಲ್ಲಿ ಭೀಮನು ಕೌರವರನ್ನು ಮಟ್ಟಹಾಕಿ ತನ್ನ ವರ್ಚಸ್ಸನ್ನು ಕಾಪಾಡುವ ಪ್ರಯತ್ನ ಮಾಡುತ್ತಿದ್ದನು. ಅವನನ್ನು ಯುಧಿಷ್ಠಿರನು ತಡೆಯಲಿಲ್ಲ. ಪ್ರಹಾರ, ಪ್ರತಿಪ್ರಹಾರ, ವಿಷಪ್ರಯೋಗಗಳಾದುದರ ಮೂಲಕ ಭೀಮನ ಸ್ಫುರಣ ಬೆಳೆಯಿತು. ಆತ್ಮವಿಶ್ವಾಸ ಬೆಳೆಯಿತು. ಆದರೆ ಜತೆಗೆ ಕಟುತನವು ಬೆಳೆಯಿತು. ಅರ್ಜುನನ ಆತ್ಮವಿಶ್ವಾಸವೂ ತಾನು ಅಪ್ರತಿಮ ಧನುರ್ಧರ ನಾಗಬೇಕೆಂಬ ಈರ್ಷ್ಯೆಯಿಂದ ಉರಿದೆದ್ದಿತು.

ಯುಧಿಷ್ಠಿರನಿಗೆ ಮಾತ್ರ ಇಂಥ ಸಾಧನೆಗಳ ಅಗತ್ಯ ಕಾಣಲಿಲ್ಲ. ಅವನ ಅಂತರ್ಮುಖತೆಯು ಅವನನ್ನು ಎಲ್ಲ ಬಗೆಯ ಅಹಂಕಾರದಿಂದ ಮುಕ್ತನನ್ನಾಗಿ ಮಾಡಿಬಿಟ್ಟಿತು. ಭೀಮನ ಆವೇಶ, ಕಟುತೆ, ಎಷ್ಟು ಉತ್ಕಟವೋ, ಅರ್ಜುನನ ಈರ್ಷ್ಯೆ ಎಷ್ಟು ಉತ್ಕಟವೋ, ಅಷ್ಟೇ ಉತ್ಕಟವಾದದ್ದು ಯುಧಿಷ್ಠಿರನ ತನ್ಮಯತೆ. ಸ್ವಂತದ ತತ್ತ್ವಗಳನ್ನು ಮತ್ತೆ ಮತ್ತೆ ಒರೆಗೆ ಹಚ್ಚಿ ತಿಕ್ಕಿ ನೋಡುವಂಥ ಪ್ರಸಂಗಗಳು ಚಿಕ್ಕಂದಿನಿಂದಲೂ ಅವನ ಮೇಲೆ ಎಷ್ಟೊಂದು ಬಂದುವೆಂದರೆ, ಆ

ಒರೆಗಲ್ಲು ಅವನಿಗೆ ವಾಡಿಕೆಯೇ ಆಗಿಹೋಯಿತು. ಮುಂದೆ ಮುಂದೆ ಈ ವಾಡಿಕೆಯಲ್ಲಿಯೂ ಈ ಚಟದಲ್ಲಿಯೂ ಕೌಶಲವು ಒಡಮೂಡಿತು; ಕೊನೆಗೆ ಯುದ್ಧಪ್ರಸಂಗದಲ್ಲಿ ಈ ಕೌಶಲದ ತಂತ್ರ ಹೋಯಿತು. ಒರೆಗಲ್ಲುಗಳ ಬೆಲೆ ಹೋಯಿತು. ಆಗ ಅವನ ಭಾವನೆಗಳು ಬೊಡ್ಡಾಗಲಿಲ್ಲ; ಭೀಷ್ಮನವು ಮೊಂಡಾದಂತೆ ಮೊಂಡಾಗಲಿಲ್ಲ. ದುಃಖದ ವರದಾನವನ್ನು ಬೇಡುವ ಈ ಕುಂತಿಯ ಜ್ಯೇಷ್ಠಕುಮಾರನು ತನ್ನ ಮನಸ್ಸಿನ ಕೋಮಲತೆಯು ಕಳೆದು ಹೋಗಲು ಬಿಡಲಿಲ್ಲ. ಆದರ್ಶವನ್ನು ಆತ ಸತತವಾಗಿ ಪೂಜಿಸುತ್ತ ಉಳಿದನು. ಆದರೆ ಆದರ್ಶವನ್ನು ಆತ ಜಡದೈವವನ್ನಾಗಿ ಮಾಡಲಿಲ್ಲ. ಕಠೋರ ಸಂಯಮ ಅತೀವ ಕೋಮಲತೆ, ಜಾಗೃತಿಯ ವ್ಯವಸ್ಥಿತ ಪ್ರಜ್ಞೆ, ಅಪ್ರತಿಮ ಕನಸುಗಾರಿಕೆ – ಇವು ಯುಧಿಷ್ಠಿರನಲ್ಲಿ ಸುಂದರವಾಗಿ ಸಮನ್ವಯಗೊಂಡಿವೆ. ಹೆಚ್ಚೇನು? ಅವನಲ್ಲಿ ಮಾನವರ ಸರ್ವಸಾಧಾರಣ ಗುಣಗಳ ಸಮನ್ವಯವೂ ವಿಲಕ್ಷಣ ರೀತಿಯಲ್ಲಿ ಕೂಡಿಬಂದಿದೆ; ಆ ಗುಣಗಳ ಪರಿಪಾಕವು ದೋಷಗಳಿಂದ ತುಂಬಿದೆ; ಪರಿಣಾಮವಾಗಿ ಬೇರೆ ಯಾವುದೇ ಪಾಂಡವನಿಗಿಂತ ಯುಧಿಷ್ಠಿರನು ಥಾಳವಾಗಿ, ದೋಷಿಯಾಗಿ ಕಾಣಬೇಕು. ಜೂಜುಕೋರ, ಹೆಂಡತಿಯನ್ನು ಪಣವಾಗಿ ಒಡ್ಡುವಷ್ಟು ಸತ್ವಹೀನ ಜೂಜುಗಾರ, ಅವಮಾನದ ಸೇಡು ತೀರಿಸಿಕೊಳ್ಳುವುದನ್ನು ಬಿಟ್ಟು ದುರ್ಬಲ ತತ್ತ್ವಜ್ಞಾನವನ್ನು ಎದೆಗವಚಿಕೊಂಡು ಹಿಡಿಯುವ ಮೂಢಕ್ಷತ್ರಿಯ, ಸ್ವಂತ ಹೆಂಡತಿಯೇ ರಾಜಸಭೆಯಲ್ಲಿ ಎರಡು ಸಲ ವಿಡಂಬಿಸಿದ್ದನ್ನು ಸಹಿಸಿದ ಷಂಡಪತಿ, ಕೃತಘ್ನ ಮತ್ತು ಅಸತ್ಯಶಿಷ್ಯ – ಇದಕ್ಕಿಂತ ಹೆಚ್ಚಿನ ಇನ್ನಾವ ನ್ಯೂನತೆಯು ಮಹಾಭಾರತದ ಅದಾವ ಪುರುಷನ ಹಣೆಯಲ್ಲಿ ಬರೆದಿದೆ?

ಹಾಗಾದರೆ ಈ ಮನುಷ್ಯನ ಚಿಂತನಶೀಲತೆಯ ಬೆಲೆ ಏನು? ಅವನ ಬಾಯಿಯ ತತ್ತ್ವಜ್ಞಾನವು ಬರಿ ಬಿನ್ನಾಣದ ಮಾತೇ? ಅವನು ತನ್ನನ್ನು ಹಾಗೂ ಇತರರನ್ನು ವಂಚಿಸಿರುವನೋ ಏನು? ಇವನಿಗೇ ಸ್ವರ್ಗದ್ವಾರವು ತೆರೆದುಳಿಯಿತು. ಇದರಲ್ಲಿ ವ್ಯಾಸರು ಅನೇಕ ತತ್ವಗಳೊಂದಿಗೂ ಮೌಲ್ಯಗಳೊಂದಿಗೂ ಹೊಂದಾಣಿಕೆ ಮಾಡಿಕೊಂಡಿರುವರೆ? ಇಂಥ ಒಂದೇ ಎರಡೆ, ಹಲವಾರು ಪ್ರಶ್ನೆಗಳು ಯುಧಿಷ್ಠಿರನನ್ನು ಕುರಿತೇ ಸಂಭವಿಸುತ್ತವೆ. ಎರಡನೆಯ ಕೌಂತೇಯನಲ್ಲಿಯ ಇಬ್ಭಾಗದ ಬಿರುಕು ಸ್ಪಷ್ಟವಾಗಿ ಕಾಣುತ್ತದೆ. ಆದರೆ ಈತನ ವ್ಯಕ್ತಿತ್ವದ ದಡಗಳೇ ಮುರಿದು ಮುಕ್ಕಾದಂತೆ ಕಾಣುತ್ತದೆ. ಆದಾಗ್ಯೂ ತಪ್ಪದೇ, ಇದೇ ವಿರೋಧಾತ್ಮಕ ಜೋಡಣೆ ಮಾಡಿ ವ್ಯಾಸರು, ವಿಸಂಗತಿಯೊಳಗಿಂದಲೂ,

ಅತ್ಯಂತ ಜೀವಂತ ಹಾಗೂ ಕಲಾಪೂರ್ಣ ವ್ಯಕ್ತಿರೇಖೆಯನ್ನು ನಿರ್ಮಿಸಿದ್ದಾರೆ. ಬೆಳ್ಳಬೆಳ್ಳಗೆ ಎತ್ತರ; ಸ್ನಾಯುಗಳೆಲ್ಲ ಆಯಾ ಸ್ಥಲದಲ್ಲಿ; ಬಹಳಷ್ಟು ವೇದನೆಗಳನ್ನು ಒಳಗೆ ಸಂಗ್ರಹಿಸುವಂಥಹ ವಿಶಾಲವಕ್ಷಸ್ಥಲ. ಉಸಿರುಕಟ್ಟುವ ತನಕ, ಬಹಳಷ್ಟು ಅವಧಿಯವರೆಗೆ, ಪ್ರತಿ ಉಸಿರಿನೊಂದಿಗೆ ವೇದನೆಗಳನ್ನು ಒಳಗೆಳೆದುಕೊಳ್ಳುವ ಕಸುಬು ಯುಧಿಷ್ಠಿರನಿಗೆ ಸಾಧ್ಯವಾಗಿತ್ತು. ಈ ವೇದನೆಗಳ ಒತ್ತಡವು ಇತರ ಎಲ್ಲ ಅಂತರ್ಭಾವನೆಗಳೊಂದಿಗೆ, ಸಂವೇದನೆಗಳೊಂದಿಗೆ ತೂಗಿನೋಡುವ ಹುಚ್ಚಿನಂತಾಗಿತ್ತು. ತುಂಬಿದ ತನ್ನ ಎದೆಯಲ್ಲಿ ಪ್ರಹಾರಮಯ ಜಯಿಷ್ಣುತೆಯ ಕ್ಷಾತ್ರಬಲವನ್ನು ಆತ ಬೆಳೆಯಗೊಟ್ಟನು; ಆದರೆ ಅದು ಒಂದು ಮಿತಿಯಲ್ಲಿ ಮಾತ್ರ. ಈ ಮಿತಿಯ ಪ್ರಜ್ಞೆಯಿಂದಲೇ ಅವನಿಗೆ ಸ್ವತಃ ಹಲವು ಬಾರಿ ಉಸಿರುಗಟ್ಟಿಸುವ ಪ್ರಸಂಗಗಳು ಒದಗಿದವು.

ಆದರೆ ಯುಧಿಷ್ಠಿರನು ಹೀಗೆ ಸ್ವಂತದ ಗುದುಮುರಿಗೆ ಮಾಡಿಕೊಂಡಿದ್ದುದು ಸಲ್ಲದ ಸ್ಥಾನದ್ದಾಗಿರಲಿಲ್ಲ. ತನ್ನ ಸ್ವಂತಕ್ಕೇ ಅಜ್ಞಾತವಿರುವ ಒಂದು ಮಹತ್ತರ ಜಗತ್ತಿನ ಸೆಳೆತ ಅವನ ನರನಾಡಿಗಳಲ್ಲಿ ತುಂಬಿತ್ತು. ಅದು ಕಣ್ಣಿಗೆ ಕಾಣುತ್ತಿರಲಿಲ್ಲ. ಬುದ್ಧಿಗೆ ತಿಳಿಯುತ್ತಿರಲಿಲ್ಲ. ಇಂದ್ರಿಯಗಳಿಗೆ ಅನುಭವಕ್ಕೆ ಬರುತ್ತಿರಲಿಲ್ಲ. ಅಂಥ ಆ ದೂರದ ಶ್ರೇಯಸ್ಸು ಏನೆಂಬುದು ಯುಧಿಷ್ಠಿರನಿಗೆ ಕೊನೆಯತನಕವೂ ಹೇಳಲು ಬರಲಿಲ್ಲ. ಅವನು, ಜೀವನವಿಡೀ, ಆ ಶ್ರೇಯಸ್ಸಿನ ಶೋಧದಲ್ಲಿರಬೇಕಾಯಿತು. ಅನಾಮಿಕ ಪಥದ ಪಥಿಕನಾಗಬೇಕಾಯಿತು. ಅವನಿಗೆ ಈ ಶ್ರೇಯಸ್ಸು ಸಿಕ್ಕಿತೋ ಇಲ್ಲವೋ ಅಷ್ಟರಲ್ಲಿ ಸ್ವರ್ಗದ ಬಾಗಿಲು ಪೂರಾ ತೆರೆಯುತ್ತದೆ. ಯುಧಿಷ್ಠಿರನು ಪ್ರವೇಶಿಸುತ್ತಾನೆ. ಮತ್ತೆ ಅದು ಮುಚ್ಚಿಕೊಳ್ಳುತ್ತದೆ. ಈ ಶ್ರೇಯಸ್ಸು ಸಿಕ್ಕುವಾಗ ಅವನು ಜಗತ್ತಿಗೆ ಬೆನ್ನು ಮಾಡಿ ನಿಂತಿರುತ್ತಾನೆ. ಆಗ ಆ ಸ್ವರ್ಗದ ದ್ವಾರವೇ ನಮ್ಮೆದುರಿಗಿರುತ್ತದೆ. ಆ ಮಹಾ ವಿಶಾಲದ್ವಾರದಲ್ಲಿ ಈ ಪುಟ್ಟ ಜೀವ, ಒಂದು ನಾಯಿಯೊಡಗೂಡಿ ಪ್ರವೇಶಿಸುತ್ತಾನೆ. ಜೀವನವಿಡೀ ಜನರ ಮಧ್ಯದಲ್ಲೇ ಇದ್ದರೂ ಯುಧಿಷ್ಠಿರನು ಏಕಾಕಿಯಾಗಿಯೇ ಉಳಿದನು. ಅಜಾತಶತ್ರುವಾಗಿದ್ದರೂ ಅವನ ಆಂತರ್ಯವು ಅಜ್ಞಾತದ ಆ ದುರ್ದಮ್ಯ ಪ್ರೇರಣೆಯಿಂದ ಏಕಾಂತಪೂರ್ಣವಾಗಿಯೇ ಉಳಿಯಿತು. ಅವನ ಏಕಾಕಿತನವು ದುರ್ಬಲವಲ್ಲದಿದ್ದರೂ ಅಭಂಗವಾಗಿತ್ತು. ಆದರೆ ಸ್ವರ್ಗದ ಮಹಾದ್ವಾರವನ್ನು ಪ್ರವೇಶಿಸುವಾಗಲೂ ನಾಯಿಯನ್ನು ತನ್ನ ಜೊತೆಗೇ ಕರೆದೊಯ್ಯುವ ಹಟದಿಂದಾಗಿಯೇ ಅವನಿಗೆ ದೊರಕಬೇಕಾಗಿದ್ದ ಶ್ರೇಯಸ್ಸು ದೊರಕಿದಂತಾಯಿತು. ತನ್ನ ಜೀವನವಿಡೀ ಜಗತ್ತಿನೆದುರು ತಲೆತಗ್ಗಿಸಿ ಆರೋಪಗಳನ್ನೆಲ್ಲ ಶಾಂತನಾಗಿ

ನುಂಗಿಕೊಂಡ ನಿರಹಂಕಾರಿಯಾದ ಈ ಪಾಂಡವನು ಇಂದು ಮೊದಲ ಬಾರಿಗೆ ಕತ್ತೆತ್ತಿ ಸೆಟೆದುನಿಂತು ಅನಂತದ ತೆಕ್ಕೆಯನ್ನು ಸೇರಿದನು. ನಾಯಿಯ ನಿಷ್ಠೆಯಷ್ಟು ತನ್ನ ನಿಷ್ಠೆ ಅಚಲವಿದೆ ಮತ್ತು ಇರಬೇಕು ಎಂಬುದರ ಅರಿವು ಸದಾಕಾಲವೂ ಜೀವಂತವುಳಿಯಬೇಕೆಂಬುದಷ್ಟೇ ಆದೇಶವನ್ನು ಈ ಅಮರ ಮಾನವನು ಮರ್ತ್ಯಮಾನವರಿಗೆ ಕೊಟ್ಟಿರಿಸಿದ್ದಾನೆ.

ಯುಧಿಷ್ಠಿರನ ಈ ಕೊನೆಯ ಅಂತರ್ಧಾನದಲ್ಲಿಯೇ ಅವನ ಅಸ್ತಿತ್ವದ ರಹಸ್ಯ ಹುದುಗಿದೆ. ಸದೇಹ ಸ್ವರ್ಗಪ್ರಾಪ್ತಿಯೆಂಬುದು ವಿಶಿಷ್ಟಮೃತ್ಯು ಹೀನತೆಯ ಪ್ರತೀಕವಾಗಿದೆ. ಯಾವ ಸುಖಗಳನ್ನು ಕೌರವರು ಸತ್ತು ಸ್ವರ್ಗದಲ್ಲಿ ಭೋಗಿಸಿದರೋ ಅದನ್ನೇ ಅದೇ ದೇಹದಲ್ಲಿ ಭೋಗಿಸುವುದು ಕೇವಲ ಒಂದು ಗೌರವದ ಭೂಷಣ, ಸ್ಥೂಲವಾದ ಮಾನಚಿಹ್ನೆ. ಆದರೆ ಈ ಸ್ಥೂಲತನದ ತಳಕ್ಕೆ ಮಾನವೀಯತೆಗೆ ಸತತವಾಗಿ ಅಂಟಿಕೊಂಡು ಉಳಿಯುವ ಸುಖಮಯ ಲೀನವಾದ, ಚಿಕ್ಕ ಚಿರವಾದ, ಅಸ್ತಿತ್ವದ ನಾಟ್ಯವನ್ನು ವ್ಯಾಸರು ಸೂಚಿಸಿ ಬಿಟ್ಟುಕೊಟ್ಟಿದ್ದಾರೆ. ಮೃತ್ಯುಹೀನತೆಯು ಯುಧಿಷ್ಠಿರನಿಗೆ ದೊರೆತ ವರವೆಂದು ನನಗನಿಸುವುದಿಲ್ಲ. ವರವಾಗಿದ್ದರೆ ಅದು ಇಷ್ಟು ಸ್ಥೂಲವಾಗಿ ಇಷ್ಟು ಥಾಳವಾಗಿ ತೋರುತ್ತಿರಲಿಲ್ಲ. ವ್ಯಾಸರು, ಮೃತ್ಯುವಿನ ಅನೇಕ ಸುಂದರ ಅಸುಂದರ ಚಿತ್ರಗಳನ್ನು ಬಣ್ಣಿಸಿದ್ದುಂಟು. ಕೃಷ್ಣನ ಅವತಾರಸಮಾಪ್ತಿಯನ್ನು ಅವರು ಸ್ವಲ್ಪದರಲ್ಲಿ ಹೇಳಿ ಮುಗಿಸಿದರು. ಪಾಂಡವರ ಸಾವುಗಳನ್ನೂ ಅತಿ ತ್ರುಟಿತ ರೀತಿಯಲ್ಲಿ ಮತ್ತು ನ್ಯಾಯನಿಷ್ಠುರಭಾವದೊಡನೆ ಶುಷ್ಕವಾಗಿ ಹೇಳಿದರು. ಅಪರಾಧಿಯೂ ಅಸಹಾಯಕನೂ ಆದ ಧೃತರಾಷ್ಟ್ರನ ಸಾವನ್ನು ತಪಸ್ಸಿನ ಆವರಣದಲ್ಲಿ ಮುಚ್ಚಿಹಾಕಿದರು. ಕರ್ಣನ ಸಾವಿಗೆ ಹಿಮಾಲಯದ ಭವ್ಯತೆಯನ್ನು ತಂದರು. ಉತ್ತರೆಯ ಮಗು ಸತ್ತು ಹುಟ್ಟಿದ್ದನ್ನು ಕಂಡು ಹರಿದ ಮೊಗ್ಗೆಯ ಶೋಕಾಂತಿಕೆಯ, ಗಾಢವಾದರೂ ನಾಜೂಕಾದ ವೇದನೆಯನ್ನೂ ಉದ್ವೇಗವನ್ನೂ ತುಂಬಿ ಇಟ್ಟರು. ಯುಧಿಷ್ಠಿರನು ಯುದ್ಧದಲ್ಲಿ ಪ್ರಕಟವಾಗಿಯೇ ಮರಣವನ್ನು ತಪ್ಪಿಸಿಕೊಂಡನು. ದೈವವೂ ಅವನನ್ನು ಅಮರನನ್ನಾಗಿಸಿತು. ಯುಧಿಷ್ಠಿರನಿಗೆ ಸಾವುಂಟಾಗಿದ್ದರೆ, ಒಂದು ಅತಿ ಸುಂದರ ಮೃತ್ಯುವಲಯವನ್ನು ಸೃಷ್ಟಿಸುವುದು ವ್ಯಾಸರಿಗೆ ಸಾಧ್ಯವಾಗುತ್ತಿತ್ತು. ಆದರೆ ಅದನ್ನವರು ಏಕೆ ತಪ್ಪಿಸಿಕೊಂಡರು? ಆತ್ಮದ ಅಮರತ್ವದ ಹಾಗೂ ದೇಹದ ವಿನಾಶಿತ್ವದ ತತ್ತ್ವಜ್ಞಾನವನ್ನೂ ಈ ಸೂಕ್ಷ್ಮಸಂವೇದನೆಯ ಪಾಂಡವನ ವಿಷಯದಲ್ಲಿ ಅವರು ಅದೇಕೆ ಬದಿಗೆ ತಳ್ಳಿದರು? ನನಗನಿಸುವುದೇನೆಂದರೆ ವ್ಯಾಸರ ಸಮಗ್ರ

ತತ್ತ್ವಜ್ಞಾನದ ಅಳತೆಗೋಲು ಅಥವಾ ಮಾನದಂಡ ಮಾನವನೇ ಆಗಿದ್ದನು. ಜೀವನದಲ್ಲಿ ಮಾನವನ ಹಿರಿಮೆ; ಹಾಗೆಯೇ ಸಾವಿನ ಕ್ಷಣದಲ್ಲಿಯೂ ಅವನ ವ್ಯಕ್ತಿಮಟ್ಟದ ಸಾರಸರ್ವಸ್ವವು ತುಂಬಿರುತ್ತದೆ. ವ್ಯಾಸರಿಗೆ ಅಭಿಪ್ರೇತವಿರುವ ಈ ಮಾನದಂಡದ ಮಾನವನು ಸಾಮಾನ್ಯ ಆಕಾರದವನು. ಅವನು ಅಂಜುಬುರುಕನಾಗಿಯೂ ಇರುತ್ತಾನೆ–ಇರುವುದಿಲ್ಲ; ಕ್ರೂರನೂ ಆಗಿರುತ್ತಾನೆ– ಆಗಿರುವುದಿಲ್ಲ. ಅವನ ದೌರ್ಬಲ್ಯದಲ್ಲಿ ಸೌಂದರ್ಯವಿರುತ್ತದೆ; ಸಾಮರ್ಥ್ಯದಲ್ಲಿ ಕುರೂಪತೆಯೂ ಇರುತ್ತದೆ. ಅವನ ವಾಣಿಯಲ್ಲಿ ತಥ್ಯವಿರುವುದಿಲ್ಲ; ಆದರೆ ಸ್ತಬ್ಧತೆಯಲ್ಲಿ ಅರ್ಥವಿರುತ್ತದೆ. ಇಂಥ ಈ ತಪ್ಪು ತಡೆಯುವ ಮಾನವನೂ ಕನಸುಗಳಿಲ್ಲದೆ ಬದುಕಲಾರ. ಅವರವರ ಕನಸಿನಂತೆ ಅವರ ನಿಯತಿ. ಆ ಕನಸು ಎಷ್ಟೇ ದೊಡ್ಡದಿದ್ದರೂ ಸಿದ್ಧಿಯು ಎಷ್ಟೇ ಪ್ರಚಂಡವಿದ್ದರೂ, ಎಲ್ಲ ಮಾನವರೂ ಕೊನೆಗೆ ಒಂದೇ ಆಯ–ಅಳತೆಯಲ್ಲಿ ಇರುತ್ತಾರೆ. ಮರಣದ ಕೊನೆಯು ಅಮರತ್ವದಲ್ಲಿ ವಾಂಬಷ್ಟನ್ನು ಕಾಣಿಸುವುದಕ್ಕಾಗಿಯೇ ವ್ಯಾಸರು ಯುಧಿಷ್ಠಿರನಿಗೆ ಅಮರಪದವಿಯನ್ನೂ ಕೊಟ್ಟರು. ಅವನಿಗೆ ಇತರರಿಗಿಂತ ಶ್ರೇಷ್ಠನಾಗಲೂ ದೊಡ್ಡವನಾಗಲೂ ಬಿಡಲಿಲ್ಲ. ಯುಧಿಷ್ಠಿರನು ನಿಧನ ಹೊಂದಿದ್ದರೆ ಕಾರುಣ್ಯದ ವಿಶಾಲವಲಯವೇ ಅವನ ಸುತ್ತಲೂ ಪಸರಿಸುತ್ತಿತ್ತು. ಕರುಣೆಯಿಂದ ತುಂಬಿದ ಅರ್ಘ್ಯವು ಸಾವಿನ ಕ್ಷಣದಲ್ಲಿಯೂ ಮನುಷ್ಯನಿಗೆ ದೊರೆಯುತ್ತದೆ. ಕರುಣೆಯ ಈ ಪ್ರಸಾದವು ಯಾವ ಮನುಷ್ಯನಿಗೆ ಸಿಗುವುದಿಲ್ಲವೋ ಅವನ ಜೀವನದಲ್ಲಿಯೇ ಏನಾದರೊಂದು ನ್ಯೂನತೆ ಉಳಿದುಹೋಗುತ್ತದೆ. ಉಳಿದ ಪಾಂಡವರು ಹೋದರು, ದ್ರೌಪದಿ ಹೋದಳು, ಆಗ ಯುಧಿಷ್ಠಿರ ಶಾಂತನಾಗಿದ್ದ. ಅಚಲ ಅಮೃತಪದದ ಕಾರ್ಯದ ಪ್ರಜ್ಞೆ ಅವನಿಗೆ ಮುಂಚೆಯೇ ಬಂದಿತ್ತು. ಎಲ್ಲ ಪಾಂಡವರಿಗೂ ಅದು ಬಂದಿತ್ತಾದರೂ, ಉಳಿದವರಲ್ಲಿಯ ನ್ಯೂನತೆಯನ್ನು ತೆಗೆದೊಗೆಯಲು ಅವರಿಗೆ ಸಾಧ್ಯವಾಗಲಿಲ್ಲ. ಸತತ ಸಾಧನೆಯಿಂದ ಯುಧಿಷ್ಠಿರನೊಬ್ಬನೇ ಅವ್ಯಂಗನಾಗಿ ಉಳಿದನು, ಅಮರಪದದ ಜಾಲದಲ್ಲಿ ಬಿದ್ದನು. ರಣಾಂಗಣದಿಂದ ಓಡಿಹೋದ ಈ ಪಾರ್ಥನಿಗೆ ವ್ಯಾಸರು ಸಾವಿನ ರಿಂಗಣದಿಂದ ಶಾಶ್ವತವಾಗಿ ಪದಚ್ಯುತಿಯನ್ನು ಉಂಟುಮಾಡಿದರು. ಅವನಿಗೆ ನರಕವಾಸವನ್ನು ಅನುಭವಿಸಲು ಹಚ್ಚಿದರು. ಅವನ ಹಿರಿಮೆಯನ್ನು ಸಮಗ್ರವಾಗಿ ನಷ್ಟ ಮಾಡಲಾಗಿದೆ. ನಾಯಿಯಿಲ್ಲದಿದ್ದರೆ ಕರುಣೆಯ ಸಮುದ್ರವೆ ಯುಧಿಷ್ಠಿರನ ಹೃದಯದಲ್ಲಿ ಓಲಾಡುತ್ತಿದೆಯೆಂಬುದರ ದರ್ಶನವೂ ಯಾರಿಗೂ ಆಗುತ್ತಿರಲಿಲ್ಲ.

ಯುಧಿಷ್ಠಿರನ ಅಂತ್ಯಗತಿಯೊಳಗಿನ ಶುಷ್ಕತೆ ಹಾಗೂ ದುರ್ಯೋಧನನ ಮರಣದ ಪ್ರಸಂಗ, ಹಾಗೂ ಆ ವೇಳೆಗೆ ಯುಧಿಷ್ಠಿರನಿಗೊದಗಿದ ದುಃಖದ ಉಮ್ಮಳ ಇವುಗಳ ನಡುವಿನ ವೈರುಧ್ಯವನ್ನು ವ್ಯಾಸರು ಕೌಶಲದಿಂದ ಸಾಧಿಸಿದ್ದಾರೆ. ಈ ವೈರುಧ್ಯದ ಮೂಲಕವೇ ಯುಧಿಷ್ಠಿರನು ಮಾನವನಾಗಿ ಉಳಿದನು; ಒಳ್ಳೆಯ ಮಾನವ, ಆದರೆ ಇತರರೊಳಗೇ ಒಬ್ಬ ಮತ್ತು ಕದಾಚಿತ್ ಅಷ್ಟೇ ಹೇಳ ಹೆಸರಿಲ್ಲದವನು. ಆದ್ದರಿಂದಲೇ ನಾವು ಅರ್ಜುನನನ್ನು ಮರೆಯುತ್ತೇವೆ, ಭೀಮನನ್ನು ಮರೆಯುತ್ತೇವೆ, ಆದರೆ ಯುಧಿಷ್ಠಿರನನ್ನು ಮರೆಯಲಾರೆವು.

ಯುಧಿಷ್ಠಿರನಿಗೆ ದುರ್ಯೋಧನನ ಸಾವಿನ ಪ್ರಸಂಗದಲ್ಲಿ ಉಂಟಾದ ದುಃಖ ಅವನಿಗೆ ಭೀಮನ ಬಗೆಗೆ ಬಂದ ಜುಗುಪ್ಸೆ, ಆ ಭಾವನೆಯ ಮರ್ಮವು ಅವನ ಭೂಮಿಕೆಯನ್ನು ಆರಂಭದಿಂದಲೂ ನಿರೀಕ್ಷಣೆ ಮಾಡಿದ್ದಲ್ಲದೆ ತಿಳಿಯದು. ಅದು ಯುಧಿಷ್ಠಿರನ ಅಂತರ್ಗತ ಸಂಘರ್ಷದ ಚಿತ್ರವಾಗಿರುತ್ತದೆ.

ವನವಾಸದಲ್ಲಿ ದ್ರೌಪದಿಯು ಯುಧಿಷ್ಠಿರನಿಗೆ ತಾಗುವಂತೆ ಮಾತಾಡಿದಳು. ಭೀಮಾರ್ಜುನರೂ ಅದರಲ್ಲಿ ಶಾಮೀಲಾಗಿದ್ದರು. ಯುಧಿಷ್ಠಿರನು ದ್ರೌಪದಿಗೆ ಕ್ಷಮೆಯ ಮಹತ್ವವೇನೆಂಬುದನ್ನು ಹೇಳುತ್ತಾನೆ ಮತ್ತು ಅವಳನ್ನು ತಾತ್ಪೂರ್ತಿಕವಾಗಿ ನಿರುತ್ತರಗೊಳಿಸುತ್ತಾನೆ. ಸೋದರರಿಗೆ ಮಾತ್ರ, "ದ್ಯೂತದ ವೇಳೆಗೆ ನೀವು ನನ್ನನ್ನು ಏನೂ ಎನ್ನಲಿಲ್ಲ. ನಾನು ಗೆದ್ದಿದ್ದರೆ ನೀವು ಸುಮ್ಮನಿರುತ್ತಿದ್ದಿರಿ. ನಾನು ಸೋತಾಗ ಮಾತ್ರ ನನ್ನನ್ನು ಮೂರ್ಖ, ಜೂಜುಗಾರ ಎಂದೆಲ್ಲ ಜರೆಯುತ್ತೀರಿ. ಇದು ಸರಿಯಲ್ಲ. ಅಲ್ಲದೆ, ಸದ್ಯ ನಾವು ತೀರ ದರಿದ್ರರಾಗಿದ್ದೇವೆ. ಮುಂದಿನ ಪ್ರಯತ್ನವನ್ನು ಯಾವ ಬಲದ ಮೇಲೆ ಮಾಡುವುದು? ಆ ತನಕ ನಾವು ಸಿದ್ಧಿಯನ್ನು ಪಡೆಯೋಣ. ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯಬೇಕು" ಎನ್ನುತ್ತಾನೆ.

ಆ ಸಮಯದಲ್ಲಿ, ಬಹಳ ಕಾಲ ಒಟ್ಟಿಗೆ ಉಳಿಯುವುದು ಸುಖಕರವಲ್ಲ; ಅದರಿಂದ ಪ್ರೀತಿ ಹೆಚ್ಚುವುದರ ಬದಲು ಕಡಿಮೆಯೇ ಆಗುತ್ತದೆಯೆಂಬ ವ್ಯಾಸರ ಪಿಸುಮಾತು ಯುಧಿಷ್ಠಿರನಿಗೆ, ಪಾರಾಗುವ ಒಂದು ಉಪಾಯವಾಗಿ ತೋರಿತು. ಅತ್ಯಂತ ಕೌಶಲದಿಂದ ಅವನು ಅರ್ಜುನನ ಪರಾಕ್ರಮಕ್ಕೆ ದಾರಿ ಮಾಡಿಕೊಟ್ಟನು. ದ್ರೌಪದಿಯ ಭಾರವನ್ನು ಭೀಮನ ಮೇಲೆ ಹಾಕಿದನು; ಅದೂ ವನವಾಸ

ಮುಗಿಯುವ ತನಕ; ಅವನಿಗೆ ಆತ್ಮಗೌರವದ ಸುಖವನ್ನು ಭೋಗಿಸಲು ಕೊಟ್ಟನು. ಅರ್ಜುನನ ವಿರಹವು ಪಾಂಡವರ ಆಶೆಗೂ ಪ್ರೀತಿಗೂ ದೊರೆತ ದೊಡ್ಡ ಸಂಜೀವಿನಿಯೇ ಆಗಿತ್ತು.

ಆದರೆ ಕರ್ಣನ ಅಪಾರ ಪರಾಕ್ರಮವನ್ನು ಕಂಡು ಯುಧಿಷ್ಠಿರನು ನಾಚಿಕೊಂಡನು, ವ್ಯಥೆಪಟ್ಟನು. ಅರ್ಜುನನ ಮೇಲಿನ ಅವನ ನಂಬಿಕೆಯು ಹಾರಿತ್ತು. ತನ್ನ ಕ್ಷಮೆಯ ತತ್ತ್ವಜ್ಞಾನವನ್ನಂತೂ ಅವನು ಮರೆತನಲ್ಲದೆ, ಅವನಿಗೆ ತನ್ನ ಮೇಲಿನ ಹಿಡಿತವೇ ಹೋಯಿತು. ಈ ವಿಕಲಾವಸ್ಥೆಯಲ್ಲಿ ಅವನು ಅರ್ಜುನನನ್ನು ಕುರಿತು, "ಕರ್ಣನು ಸತ್ತೊಡನೆ ಹನ್ನೆರಡು ವರ್ಷಗಳ ಶಲ್ಯಹೋಯಿತು. ಕರ್ಣನು ಭೂತದಂತೆ ನನ್ನನ್ನು ಕಾಡಿದ್ದಾನೆ. ಹೋದಲ್ಲಿ ಆತ ಮುಂದೆ ಕಾಣಿಸುತ್ತಾನೆ; ನಿದ್ದೆಯಿಲ್ಲ. ದ್ರೌಪದಿಯನ್ನು ಕುರಿತು ಅವನು ಏನೇನು ಆಡಿದನೋ ಅದಕ್ಕಾಗಿ ನೀನು ಅವನ ವಧೆಮಾಡತಕ್ಕುದು. ದ್ವೈತವನದಲ್ಲಿ ನೀನು ಅವನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದೆ. ಭೀಮ ಅವನಿಗೆ ಹೆದರುತ್ತಾನೆ. ಅವನನ್ನು ಕೊಲ್ಲದಿದ್ದರೆ, ನಿನ್ನ ಗಾಂಡೀವ, ನಿನ್ನ ಪರಾಕ್ರಮ, ಬಾಣ, ರಥ, ಅಷ್ಟೇ ಏಕೆ, ನಿನ್ನದು ಏನೇನಿದೆಯೋ ಅವೆಲ್ಲಕ್ಕೂ ಧಿಕ್ಕಾರವಿರಲಿ" – ಎನ್ನುತ್ತಾನೆ.

ಈ ಮಾತು ಅರ್ಜುನನಿಗೆ ನಾಟಿತು. ಕರ್ಣನು ಯುಧಿಷ್ಠಿರನಿಗೆ ಈ ಮೊದಲೇ, "ನೀನು ಬ್ರಾಹ್ಮಣಧರ್ಮದಲ್ಲಿ ಪ್ರವೀಣ; ಯಜ್ಞಕರ್ಮದಲ್ಲಿ ಸ್ವಾಧ್ಯಾಯದಲ್ಲಿ ಪ್ರವೀಣ; ವೀರರೊಡನೆ ಹೋರಾಡಲು ಹೋಗಬೇಡ; ಎಲ್ಲಿ ಕೃಷ್ಣಾರ್ಜುನರಿರುವರೋ ಅಲ್ಲಿಗೆ ಹೋಗು" ಎಂದು ಹೇಳಿದ್ದನು.

ಅರ್ಜುನನೂ ಅದೇ ಗೆರೆ ಗೀರಿದನು. "ಕೃಷ್ಣಾ ನಿನ್ನೆದುರಿಗೇ ನಾನು ಇವನ ರುಂಡ ಹಾರಿಸುತ್ತೇನೆ. ಇವನನ್ನು ಕೊಂದರೇ ನನ್ನ ಪ್ರತಿಜ್ಞೆ ಪೂರ್ತಿಯಾಗುವುದು" ಎಂದನು. ಅದಕ್ಕೆ ಕೃಷ್ಣನು, "ಹೀಗೆ ಒರಟಾಗಿ ಮಾತಾಡುವುದು ನಿನಗೆ ಶೋಭಿಸದು" – ಎಂದನು. ಆದರೂ ಅರ್ಜುನನ ಸಿಟ್ಟು ಇಳಿಯಲೊಲ್ಲದು. ಅವನು ಯುಧಿಷ್ಠಿರನತ್ತ ಹೊರಳಿ, "ರಣಭೂಮಿಯಿಂದ ನೀನು ಹರದಾರಿ ದೂರವಿರುತ್ತೀ; ಎಂದಾಗ ನೀನು ಮಾತಾಡಬೇಡ. ಭೀಮ ಮಾತಾಡುತ್ತಾನೆ, ರೇಗುತ್ತಾನೆ, ದೋಷಾರೋಪಣೆ ಮಾಡುತ್ತಾನೆ; ಅದು ಸರಿ. ಏಕೆಂದರೆ, ಅವನು ದೊಡ್ಡ ಯೋಧರೊಡನೆ ಹೋರಾಡುತ್ತಾನೆ. ಆತ ಸಾಹಸದ ಕೆಲಸ ಮಾಡುತ್ತಾನೆ. ನೀನು ಏನೂ ಮಾಡಲಾರೆ. ಭೀಮನು ಮಾತಾಡಿದರೆ ಅದು ಅವನಿಗೆ ಶೋಭಿಸುತ್ತದೆ. ನನಗೆ ಏಟು ಕೊಡುವುದಾದರೆ ಅವನೇ. ಆಡುವುದರಲ್ಲಿ ನಿನ್ನ

ಬಾಯಿ ದೊಡ್ಡದು; ನಡೆನುಡಿಯಲ್ಲಿ ನಿಷ್ಠುರ. ಬ್ರಾಹ್ಮಣನೆಂದು ಭಾವಿಸಿ ನೀನು ಮಾತಾಡುತ್ತಿರುವೆ; ಸ್ವತಃ ಪಾಪವನ್ನು ಮಾಡಿ ಅದನ್ನು ತೊಳೆಯಲು ನಮಗೆ ಹೇಳುತ್ತಿದ್ದೀಯೆ. ನಮ್ಮನ್ನು ಸಂಕಟದಲ್ಲಿ ನೂಕಿದೆ. ಆದರೂ ನಾನು ನಿನಗೆ ಒಳಿತನ್ನೇ ಮಾಡುವೆನು. ನೀನು ಜೂಜುಗಾರ. ನಿನ್ನ ಮೂಲಕ ರಾಜ್ಯ ನಾಶವಾಯಿತು; ನಾವು ಸಂಕಟದಲ್ಲಿ ಬಿದ್ದೆವು. ಈಗ ನಮ್ಮನ್ನು ಕುರಿತು ಕ್ರೂರವಾಗಿ ಆಡಬೇಡ. ನನ್ನ ಸಿಟ್ಟು ಅಂಕೆ ಮೀರುವುದು" ಎನ್ನುತ್ತಾನೆ.

ತುಸು ಹೊತ್ತಿನ ಮೇಲೆ ಅರ್ಜುನನಿಗೆ ತನ್ನ ಮಾತಿನ ಬಗ್ಗೆ ಪಶ್ಚಾತ್ತಾಪ ವಾಯಿತು. ಎಷ್ಟೆಂದರೆ ಕೃಷ್ಣನನ್ನು ಕುರಿತು ಅವನು, "ನನ್ನಿಂದ ಬಹು ದೊಡ್ಡ ಅಪರಾಧವಾಯಿತು. ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ" ಎಂದನು.

ಕೃಷ್ಣನು ಚಾತುರ್ಯದಿಂದ, "ಬಂಧು ಹತ್ಯೆಗಿಂತ ಆತ್ಮಹತ್ಯೆಯ ಅಪರಾಧ ಇನ್ನೂ ದೊಡ್ಡದು" ಎಂದನು.

ಅನಂತರ, ಅರ್ಜುನನು, ಅಣ್ಣನಿಗೆ ಎಂದೂ ಅವಮಾನ ಮಾಡಲಿಲ್ಲ. ಅಶ್ವಮೇಧಕ್ಕೆ ಮೊದಲು, ಈ ಅಣ್ಣತಮ್ಮಂದಿರಲ್ಲಿ ವಾಗ್ವಾದವು ಮತ್ತೊಮ್ಮೆ ಘಟಿಸಿತು. ಆದರೆ ಅದು ತಾತ್ವಿಕ ಪ್ರಕಾರದ್ದಾಗಿತ್ತು.

ಅರ್ಜುನನಿಗೆ ಪಶ್ಚಾತ್ತಾಪವಾಯಿತು; ಅಣ್ಣನ ಕ್ಷಮೆ ಕೋರಿದನು. ಆಗ ಯುಧಿಷ್ಠಿರನೂ ಪಶ್ಚಾತ್ತಾಪದಿಂದ ಬೆಂದುಹೋದನು. ಅತ್ಯಂತ ನಿರ್ಮತ್ಸರನೂ, ಮೂಲತಃ ಜಡಸ್ವಭಾವದವನೂ ಆಗಿದ್ದ ಅವನು ಈಗಂತೂ ಅತ್ಯಂತ ದೀನನಾಗಿ, "ಅರ್ಜುನಾ, ನಾನು ಮಾಡಿದ್ದು ಒಳ್ಳೆಯದಾಗಲಿಲ್ಲ. ನೀವೆಲ್ಲ ಆ ಮೂಲಕ ಸಂಕಟದಲ್ಲಿ ಬಿದ್ದಿರಿ. ಆದ್ದರಿಂದ ನೀನು ನನ್ನ ರುಂಡ ಹಾರಿಸು. ನಾನು ಪಾಪಿ; ಕೆಟ್ಟವ್ಯಸನದಲ್ಲಿ ಮುಳುಗಿದೆ; ಹೇಡಿ; ಅಂಜುಬುರುಕ; ಮೂರ್ಖ. ನನ್ನನ್ನೇಕೆ ಅನುಸರಿಸುವೆ? ನಾನು ಈಗಲೇ ವನಕ್ಕೆ ಹೋಗುವೆನು. ನಾನಿಲ್ಲದಿದ್ದರೆ ನಿಮಗೆ ಒಳಿತೇ ಆದೀತು. ನಾನು ಕ್ಲೀಬ. ಭೀಮನು ಒಳ್ಳೆಯ ರಾಜ. ನನಗೆ ಈಗ ಚುಚ್ಚು ಮಾತನ್ನೂ ತಾಳಲು ಆಗುವುದಿಲ್ಲವೋ! ನೀನು ಮಾತಾಡಿದರೆ ಮತ್ತೇನು ಉಳಿಯಿತು. ನನಗೆ ಬದುಕಿ ಉಳಿಯಬೇಕೆಂದೆನಿಸುವುದಿಲ್ಲ. ಬದುಕಿಗೆ ಅರ್ಥವೇ ಉಳಿದಿಲ್ಲ" ಎಂದು ಹೇಳಿ ಹಾಸಿಗೆಯಿಂದೆದ್ದು ಹೊರಹೊರಟನು.

ಭೀಮನು, ದ್ಯೂತಪ್ರಸಂಗದಲ್ಲಿ, "ನಿನ್ನ ಕೈಕಡಿಯಬೇಕು" ಎಂದಿದ್ದನು. ಆದರೆ ಅದನ್ನು ಯುಧಿಷ್ಠಿರನು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಅರ್ಜುನನ ಮಾತು ಮಾತ್ರ ಅವನ ಮನಸ್ಸಿನಿಂದ ಮರೆಯಾಗದು. ಯುಧಿಷ್ಠಿರನ ಈ ವರ್ತನೆಯು ಎಲ್ಲರಿಗೂ ಹೊಸತಾಗಿತ್ತು. ಆ ಸಮಯಕ್ಕೆ ಕೃಷ್ಣನು

ಮುಂದಾದನು, "ನೀವಿಬ್ಬರೂ ಒಟ್ಟಿಗೆ ಇರುವುದೇ ಕ್ಷೇಮ. ಅರ್ಜುನನು ನಿನಗೆ ಅವಮಾನ ಮಾಡಿದ. ಅವನು ನನ್ನ ಬೆನ್ನಿಗಿದ್ದವ. ಹಿರಿಯರ ಅವಮಾನವೆಂದರೆ ಅವರ ಕೊಲೆ ಮಾಡಿದಂತೆಯೇ. ನನ್ನನ್ನು ಕ್ಷಮಿಸು. ನಾನು ಹೇಳುತ್ತೇನೆ, ಇಂದು ಕರ್ಣ ಸಾಯುವನು" ಎಂದು ಹೇಳಿದನು.

ಕೃಷ್ಣನು ಅವನ ಕಾಲಿಗೆ ಬಿದ್ದನು. ಯುಧಿಷ್ಠಿರನಿಗೆ ಹಿಂದಿರುಗದೆ ಗತ್ಯಂತರವಿರಲಿಲ್ಲ; ಹಿಂತಿರುಗಿದ. ಅರ್ಜುನನನ್ನು ಗಾಢವಾಗಿ ಬಿಗಿದಪ್ಪಿ ಕೊಂಡು ಅವನ ತಲೆಯನ್ನು ಮೂಸಿದ. ಅರ್ಜುನನು ಅವನ ಅಪ್ಪುಗೆಯಲ್ಲಿ ಬೆರೆತ.

ದುರ್ಯೋಧನನು ಬಿದ್ದ ವೇಳೆಯಲ್ಲಿ ಭೀಮನು ಅವನನ್ನು ಒದ್ದನು. ಅದನ್ನು ನೋಡಿ ಯುಧಿಷ್ಠಿರನು ನಾಚಿಕೆಯಿಂದ ಕಪ್ಪಿಟ್ಟನು. ಭೀಮನು, ದುಃಶಾಸನನ ಕರುಳು ಬಗೆದು ರಕ್ತ ಹೀರುವಾಗ, "ಈ ರಕ್ತ ಹಾಲಿಗಿಂತ ಸವಿ, ಜೇನಿಗಿಂತ ರುಚಿ" ಎಂದಿದ್ದನು. ಆ ಕೃತ್ಯವನ್ನು ನೋಡುವಾಗ ಎಲ್ಲರ ಮೈ ಜುಂ ಎಂದು ನವಿರೆದ್ದಿತು. ಆದರೆ ಯುಧಿಷ್ಠಿರನು ಅವನತ್ತ ಗಮನ ಹರಿಸಿರಲಿಲ್ಲ. ಆದರೆ ಈಗ ಮಾತ್ರ ಅವನು ತಡೆಯದಾದನು. "ಇದೇನು ಮಾಡುತ್ತಿರುವೆ? ಅವನನ್ನು ಒದೆಯಬೇಡ. ಧರ್ಮದ ಉಲ್ಲಂಘನೆ ಮಾಡಬೇಡ. ಅವನು ನಮ್ಮ ಆಪ್ತ ಬಂಧು. ರಾಜನಾಗಿದ್ದಾನೆ." ಎಂದನು. ಇಷ್ಟೇ ಹೇಳಿ ಸುಮ್ಮನಾಗಲಿಲ್ಲ. ಭೀಮನ ಕಡೆಗೆ ಬೆನ್ನು ತಿರುಗಿಸಿ ಅವನು ದುರ್ಯೋಧನನ ಹತ್ತಿರ ಹೋಗಿ ಕುಳಿತನು. ಅತ್ಯಂತ ಗದ್ಗದಿತನಾಗಿ, "ತಮ್ಮಾ ಶೋಕಿಸಬೇಡ. ನಿನ್ನ ಅಪರಾಧದ ಫಲ ನಿನಗೆ ದೊರೆಯಿತು. ಆದ್ದರಿಂದ ನಿನ್ನ ಸಾವು ಧನ್ಯವೆನಿಸೀತು. ದುರ್ಯೋಧನಾ, ನಾವು ನಿನಗಿಂತ ಹೀನ ದೀನರಾಗಿದ್ದೇವೆ. ನಮ್ಮ ಎಲ್ಲ ಆಪ್ತೇಷ್ಟರು ಹೋದರು. ನಮ್ಮ ಬದುಕು ಬಡವಾಯಿತು. ಈಗ ಹೆಣ್ಣು ಮಕ್ಕಳು, ಸೊಸೆಯರು, ಮೊಮ್ಮಕ್ಕಳ ಹೆಂಡಂದಿರು ಇವರಿಗೆಲ್ಲ ನಾನು ಹೇಗೆ ಮೋರೆ ತೋರಿಸಲಿ? ವಿಧವೆಯರಾದ ಸೊಸೆಯರ ಮುಖ ಹೇಗೆ ನೋಡಲಿ? ನೀನೇನೋ ಸ್ವರ್ಗಕ್ಕೆ ಹೋಗುವೆ. ನರಕದಂಥ ದುಃಖವನ್ನು ಭೋಗಿಸುತ್ತ ನಾವು ಮಾತ್ರ ಇಲ್ಲಿ ಉಳಿಯಬೇಕು" ಎಂದನು.

ಆದರೆ ಈ ಪ್ರಕರಣ ಅಷ್ಟಕ್ಕೇ ನಿಲ್ಲಲಿಲ್ಲ. ಸೊಂಟದ ಕೆಳಗೆ ಹೊಡೆಯು ಬಾರದೆಂಬ ಗದಾಯುದ್ಧದ ನಿಯಮವನ್ನು ಭೀಮನು ಪಾಲಿಸಲಿಲ್ಲ. ಬಲ ರಾಮನಿಗೆ ಇದರಿಂದ ಬಹಳ ಸಂತಾಪವಾಯಿತು. ಭೀಮನು ಸಭೆ ಯಲ್ಲಿಯೇ ದುರ್ಯೋಧನನ ತೊಡೆ ಮುರಿಯುವುದಾಗಿ ಪ್ರತಿಜ್ಞೆ ಮಾಡಿದ್ದುದನ್ನು ಕೃಷ್ಣನು

ನೆನಪು ಮಾಡಿಕೊಟ್ಟನು. ಆದರೆ ಬಲರಾಮನಿಗೆ ಮಾತ್ರ ಕಪಟವು ಕಪಟವೇ, ಸಿಟ್ಟಿನಿಂದ ಅವನು ತೀರ್ಥಯಾತ್ರೆಗೆ ಹೊರಟುಹೋದನು. ಆಗ ಕೃಷ್ಣನೂ ರೇಗಿದನು. "ಒದೆಯುವುದಕ್ಕೆ ನೀನು ಹೇಗೆ ಅವಕಾಶಕೊಟ್ಟೆ" ಎಂದು ಯುಧಿಷ್ಠಿರನನ್ನೇ ಪ್ರಶ್ನಿಸಿದನು.

ಬಡಪಾಯಿ ಯುಧಿಷ್ಠಿರ! ಅಸಹಾಯನಾಗಿ ಉತ್ತರಿಸಿದ. "ಕೃಷ್ಣಾ, ನನಗೆ ಅದು ಹಿಡಿಸಲಿಲ್ಲ. ಭೀಮನು ವನವಾಸದಲ್ಲಿ ನನಗೆ ಚುಚ್ಚಿ ಮಾತಾಡಿದ್ದನು. ಅದು ನನಗೆ ಒಂದೇ ಸಮನೆ ಚುಚ್ಚುತ್ತಿತ್ತು. ಆದ್ದರಿಂದಲೇ ನಾನು ಈ ಸಂಗತಿಯನ್ನು ಉಪೇಕ್ಷಿಸಿದೆ; ಮೂಢನಾದೆ. ಧರ್ಮವಿರಲಿ, ಅಧರ್ಮವಿರಲಿ, ಮೂರ್ಖನೂ ಲೋಭಿಯೂ ಆದ ದುರ್ಯೋಧನನನ್ನು ಹೇಗಾದರೂ ಕೊಂದು ಆತ ಸಂತುಷ್ಟನಾಗಲೆಂದಷ್ಟೇ ನಾನು ಬಗೆದೆ" ಎಂಬುದಾಗಿ.

ಈ ಭಯಾನಕ ನಾಟಕವನ್ನು ವ್ಯಾಸರು ಮೈನವಿರೇಳುವಂತೆ ಕೊನೆಗೊಳಿಸಿದ್ದಾರೆ. ದುರ್ಯೋಧನನ ಸುತ್ತಲೂ ಅರಸರು ನೆರೆದಿದ್ದಾರೆ. ಅಲ್ಲಿಯೇ ಈ ವಾಗ್ವಾದವೆದ್ದಿದೆ. ಆಗ ಕೃಷ್ಣನು ಹೇಳುತ್ತಾನೆ : "ಎಲ್ಲರೂ ನಡೆಯಿರಿ. ಇವನು ಇಲ್ಲೇ ಇರಲಿ. ಇವನು ಪಾಪಿ. ಪಾಂಡವರಿಗೆ ಸೂಜಿ ಮೊನೆಯಷ್ಟು ಭೂಮಿಯನ್ನೂ ಕೊಡದಾದ ಈತ ಬಿದ್ದಿರಲಿ. ಇವನು ಮಿತ್ರನೆಂದುಕೊಳ್ಳುವ ಯೋಗ್ಯತೆಯವನೂ ಅಲ್ಲ, ಶತ್ರು" ಎಂಬುದಾಗಿ.

ಇದನ್ನು ಕೇಳಿದ ದುರ್ಯೋಧನನು ಆ ಸ್ಥಿತಿಯಲ್ಲೂ ಕೆರಳಿ ಏಳುತ್ತಾನೆ. ಬಾಲತುಳಿದ ಹಾವಿನಂತೆ, ಎರಡೂ ಕೈಗಳ ಮೇಲೆ ಮೈಯನ್ನೂ ತೂಗಿಸಿ ತಲೆಯೆತ್ತಿ ಫೂತ್ಕರಿಸುತ್ತ, "ಕಂಸನ ದಾಸನ ಪೋರ ನೀನು. ನೀನೇ ನನಗೆ ತೊಡೆಯ ಕೆಳಗೆ ಹೊಡೆಯಲು ಸಲಹೆಕೊಟ್ಟೆ. ನಿನಗೆ ನಾಚಿಕೆಯಿಲ್ಲ. ಭೂರಿಶ್ರವ ದ್ರೋಣ ಕರ್ಣ ಭೀಷ್ಮ ಇವರೆಲ್ಲರ ನೆನಪು ನಿಮಗಾಗುತ್ತಿಲ್ಲ. ನೇರ ಹಾದಿಯಿಂದ ಯುದ್ಧಮಾಡಿದ್ದರೆ ನೀವು ಗೆಲ್ಲುವುದಕ್ಕಾಗುತ್ತಿರಲಿಲ್ಲ. ನಾನಂತೂ ಸ್ವರ್ಗಕ್ಕೇರುತ್ತೇನೆ. ನೀವು ಮಾತ್ರ ಭಗ್ನ ಹೃದಯರಾಗಿ ಇಲ್ಲಿಯೇ ಶೋಕಿಸುತ್ತ ಕುಳಿತಿರಿ" – ಎನ್ನುತ್ತಾನೆ.

ಇದನ್ನು ಕೇಳಿ ಪಾಂಡವರೂ ಕೃಷ್ಣನೂ ಕಪ್ಪಿಟ್ಟರು. ಕೃಷ್ಣನು ಅವರನ್ನು ಕುರಿತು, "ಕಪಟದ ಹೊರತು ಇವನಿಗೆ ಮರಣವು ಶಕ್ಯವಿದ್ದಿಲ್ಲ. ನಿಮಗೆ ಜಯವು ಬೇಕಿತ್ತಲ್ಲವೇ?" ಎನ್ನುತ್ತಾನೆ.

ಯುಧಿಷ್ಠಿರನು ಮಾತ್ರ, ಗಾಂಧಾರಿಗೆ ಹೇಗೆ ಮುಖ ತೋರಿಸುವುದೆಂಬ ಚಿಂತೆಯಲ್ಲಿದ್ದನು. ಕೊನೆಗೆ ಆ ಕೆಲಸವನ್ನು ಕೃಷ್ಣನು ಸ್ವೀಕರಿಸಿದನು. ಆತ ಶಾಂತಿಯನ್ನು ಮಾಡಿದನು. ಯುದ್ಧದ ಎಲ್ಲ ಭಯಾನಕ ಪ್ರಕರಣಗಳನ್ನೂ ಅನುಭವಿಸುವಾಗ ಯುಧಿಷ್ಠಿರನು ಇತರರಿಗಿಂತ ಹೆಚ್ಚು ವ್ಯಾಕುಲನಾದನು. ಮೊದಲೇ ಅವನಿಗೆ ಯುದ್ಧವನ್ನು ಕುರಿತು ಹೇಸಿಗೆ. ಅದನ್ನು ಆದಷ್ಟೂ ತಪ್ಪಿಸಬೇಕೆಂಬುದೇ ಅವನ ಮತ. ಸಂಧಾನಕ್ಕೆ ಮುಂಚೆಯೇ ಅವನು ಕೃಷ್ಣನಿಗೆ ಹೇಳುತ್ತಾನೆ, "ಇಬ್ಬರು ಯುದ್ಧಮಾಡುತ್ತಾರೆ. ಅವರಲ್ಲಿ ಒಬ್ಬನು ಸತ್ತರೂ ಜಯವಾಗುವುದಿಲ್ಲ. ಯುದ್ಧದಲ್ಲಿ ಒಳಿತೆಂಬುದೇನಿದೆ" ಎಂಬುದಾಗಿ. ಅನಂತರದ ಸಮಗ್ರ ಜೀವನವೇ ಒಂದು ಸಂಗ್ರಾಮವೆಂಬ ಒಂದು ನೋಟವು ಅವನ ಕಣ್ಣೆದುರು ತೇಲುತ್ತದೆ. "ಬ್ರಾಹ್ಮಣರ ಕೈಯಲ್ಲಿ ಕರಟ. ಕ್ಷತ್ರಿಯರು ವಧೆಯಿಂದ ಹೊಟ್ಟೆ ತುಂಬಿಸಿಕೊಳ್ಳುವರು. ಶೂದ್ರರಿಗೆ ಸೇವೆಯ ಕಷ್ಟ. ವೈಶ್ಯರು ಉಪ್ಪು ಬೆಲ್ಲ ಮುಂತಾದವನ್ನೂ ಮಾರಿ ಬದುಕಬೇಕು. ನಾಯಿಯು ನಾಯಿಯನ್ನು, ಮೀನು ಮೀನನ್ನು ಕೊಲ್ಲುತ್ತದೆ. ಶೂರನು ದುರ್ಬಲನನ್ನು ಕೊಲ್ಲುತ್ತಾನೆ. ಅಯಶಸ್ವಿಯು ಯಶಸ್ವಿಯನ್ನು ಕೊಲ್ಲುತ್ತಾನೆ. ಪರಾಜಯವು ಮರಣಕ್ಕಿಂತ ಹಾಳು. ಜಯದಲ್ಲಿಯೂ ಅರ್ಥವಿಲ್ಲ. ವೈರವು ವೈರದಿಂದ ತಣೆಯುವುದಿಲ್ಲ. ನಮ್ಮ ಜನ ಸತ್ತಮೇಲೆ, ಸುಖವೆಂಬುದೇನು? ಶಾಂತಿಯಂಥ ಸುಖವಿಲ್ಲ" ಎನ್ನುತ್ತಾನೆ. ಆದರೆ ಅವನ ಈ ಮಾತೆಲ್ಲ ಮರಳಿನಲ್ಲಿ ನೀರು ಇಂಗುವಂತೆ ಇಂಗಿಹೋಯಿತು.

ಕರ್ಣನ ಜನ್ಮರಹಸ್ಯ ಗೊತ್ತಾದ ಮೇಲೆ ಯುಧಿಷ್ಠಿರನ ವ್ಯಾಕುಲತೆ ಅತಿಯಾಗಿ ಬೆಳೆಯಿತು. ಆತ ಎಷ್ಟು ತತ್ತರಿಸಿದನೆಂದು ಹೇಳಲು ಬರುವುದಿಲ್ಲ. ತನ್ನ ಮೂಢತೆಗಾಗಿ ಆತ ಚಕಿತನಾದ. ಯಾವಾಗಲೂ ಅವನಿಗೆ ಹಾಗಾಗುತ್ತಿತ್ತು. ಆದರೆ ಈ ಸಲ ಅವನ ಸಂಯಮವು ಪೂರಾ ಸಡಿಲಾಗಿ ಜಾರಿತು. ಕೃಷ್ಣನು ಸಂಧಾನಕ್ಕೆ ಹೊರಟಾಗ ಯುಧಿಷ್ಠಿರನು ಕುಂತಿಯನ್ನು ಕುರಿತು ಅಂದಿದ್ದನು, "ನೀನು ಧೃತರಾಷ್ಟ್ರನ ಮನೆಗೆ ಹೋಗುತ್ತೀ. ಅಂದಾಗ ಗಾಂಧಾರಿಯನ್ನು ಭೇಟಿಯಾಗು. ಮಮತಾಮಯಿ ಆ ನಮ್ಮ ತಾಯಿ. ಚಿಕ್ಕಂದಿನಿಂದಲೂ ಮಾವನ ಮನೆಯವರಿಂದ ದುಃಖವನ್ನೇ ಕಂಡವಳು ಅವಳು. ದುರ್ಯೋಧನನಿಂದ ನಮ್ಮನ್ನು ರಕ್ಷಿಸಿದವಳು. ಬಲು ದುಃಖವನ್ನು ಅವಳು ಸಹಿಸಿದಳು" ಎಂದು. ಇಂಥ ಈ ಕಕುಲಾತಿಯ ಮಗ, ವಿವೇಕವನ್ನು ಕಳೆದುಕೊಂಡು ಅವಳನ್ನು ಶಪಿಸುತ್ತಾನೆ. ಕರ್ಣನ ವಿಷಯವಾಗಿ ಯುಧಿಷ್ಠಿರನ ಆಕರ್ಷಣೆಯು

ಇಬ್ಬಗೆಯಾಗಿತ್ತು. ಒಂದೆಡೆಗೆ ಅವನ ಬಗ್ಗೆ ಭಯ, ಅವನ ಕೃತ್ಯಗಳಿಂದ ಉಂಟಾಗುವ ದ್ವೇಷ; ಇನ್ನೊಂದೆಡೆಗೆ ಅವನನ್ನು ಕುರಿತ ಅನಿವಾರ್ಯವಾದ ಆಕರ್ಷಣೆ. ಕರ್ಣನ ಮುಖ ನೋಡಿದಾಗ ಒಂದು ಬಗೆಯ ಆನಂದವೆನಿಸುತ್ತಿತ್ತು ಅವನಿಗೆ.

ಕುಂತಿ ಕರ್ಣರ ಪಾದಗಳ ಸಾಮ್ಯವು ಅವನ ಲಕ್ಷ್ಯಕ್ಕೆ ಎಂದೋ ಬಂದಿತ್ತು. ಆ ಸಾಮ್ಯ ಹಾಗೂ ಕರ್ಣನ ಮುಖ ಮುದ್ರೆ ಇವು ಅವನಲ್ಲಿ ಎಂಥ ಶಾಂತಭಾವವನ್ನು ಹುಟ್ಟಿಸಿತೆಂದರೆ, ದ್ರೌಪದಿಯು ವಿಡಂಬಿಸಿದಾಗಲೂ ಅವನು ಶಾಂತನಾಗಿ ಉಳಿಯಲು ಸಾಧ್ಯವಾಗಿತ್ತು. ತಾನು ಆ ಸಮಯದಲ್ಲೇ ಈ ಸಾಮ್ಯವನ್ನು ಏಕೆ ಪತ್ತೆ ಹಚ್ಚಲಿಲ್ಲ? ಬಂಧುವಧೆಯ ಪಾತಕವನ್ನು ಏಕೆ ಗಳಿಸಿದೆ? ಎಂಬ ಮುಳ್ಳು ಅವನನ್ನು ಚುಚ್ಚುತ್ತ ಉಳಿಯಿತು. ಎಲ್ಲ ದುಃಖಗಳಿಂದ ಈ ದುಃಖ ದೊಡ್ಡದಾಗಿತ್ತು. ವಂಚಿತ ಕರ್ಣನ ಸುತ್ತಲೂ ಅವನ ಮನಸ್ಸು ಸುಳಿದಾಡುತ್ತಾ ಉಳಿಯಿತು.

ರಾಜ್ಯವನ್ನು ಬಿಟ್ಟು ಹೊರಟು ಹೋಗಬೇಕು, ತಪಸ್ಸು ಮಾಡಬೇಕು ಎಂದು ಅವನ ಮನಸ್ಸಿನಲ್ಲಿ ಬಂತು. ಅವನ ಈ ವಿಚಾರವನ್ನು ಕಂಡ ಅರ್ಜುನನು ಸಿಟ್ಟಿಗೆದ್ದು, "ಇಷ್ಟೊಂದು ರಾಜ್ಯವನ್ನು ಗೆದ್ದು ಅದನ್ನು ಬಿಟ್ಟು ಹೋಗುವು ದೆಂದರೇನು? ಭಿಕ್ಷಾಪಾತ್ರೆ ಹಿಡಿದು ತಿರುಗಿದರೆ ಜನ ಏನೆಂದಾರು?" ಎಂದನು.

ಭೀಮನು ಅರ್ಜುನನ ಮಾತಿಗೆ ಸಮರ್ಥನೆ ನೀಡುತ್ತಾ, "ರಾಜ್ಯ ಬಿಟ್ಟು ಭಿಕ್ಷೆ ಬೇಡುವುದೇ? ಅರ್ಥವೇ ಕ್ಷತ್ರಿಯ ಧರ್ಮ" ಎನ್ನುತ್ತಾನೆ. ದ್ರೌಪದಿಯೂ ಅವರ ಮಾತಿಗೆ ದನಿಗೂಡಿಸುತ್ತಾಳೆ. ಅರ್ಜುನ ಮತ್ತೆ ಹೇಳುತ್ತಾನೆ, "ಸಭೆಯಲ್ಲಿ ದ್ರೌಪದಿಯ ಮಾನಭಂಗ, ವನವಾಸ, ಕೀಚಕನ ಒದೆತ ಇವೆಲ್ಲವನ್ನೂ ಮರೆತೆ. ಯುದ್ಧದಲ್ಲಿ ಶತ್ರು ಮಿತ್ರರೆಂದು ನೋಡುವುದಿರುವುದಿಲ್ಲ. ಯುದ್ಧವೆಂದರೆ ಯುದ್ಧ; ಅದು ಪ್ರಾಣವನ್ನು ಪಣವೊಡ್ಡಿ ಮನಮುಟ್ಟಿ ಆಚರಿಸುವಂತಹದು. ಭೀಷ್ಮ ದ್ರೋಣರ ಬಗ್ಗೆ ಕೂಡ ಶೋಕಿಸಬೇಡ. ಕೆಲವು ಮಂದಿ ಹೀಗಿರುತ್ತಾರೆ : ಅವರಿಗೆ ಸುಖ ಪ್ರಸಂಗದಲ್ಲಿಯೂ ದುಃಖವೇ ನೆನಪಾಗುತ್ತದೆ. ಕೆಲವರು ದುಃಖದಲ್ಲಿದ್ದರೂ ಸುಖವನ್ನು ಹಂಬಲಿಸಿ ಆನಂದಪಡುತ್ತಾರೆ. ಯುಧಿಷ್ಠಿರನೇ ನೀನು ಏನು ಒಳಿತು ಮಾಡಿರುವೆಯೋ, ಯಾವುದು ದುಃಖಕ್ಕಿಂತ ಬಲಿಷ್ಠವೋ ಅದನ್ನು ನೆನೆ. ಆದರೇನು, ಏನಾದರೂ ಮನಸ್ಸಿನಲ್ಲಿ ತಂದುಕೊಂಡು ವ್ಯಾಕುಲಪಡುವುದೇ ನಿನ್ನ ಸ್ವಭಾವ" ಎಂಬುದಾಗಿ.

ಇದಕ್ಕೆ ಯುಧಿಷ್ಠಿರನು, "ಎಲ್ಲವೂ ಭಾವಿಸುವುದರಲ್ಲಿದೆ. ಜನಕನದೇ ನೋಡು; ಆತ ಹೇಳುತ್ತಿದ್ದ, ನನ್ನ ಬಳಿ ಏನೂ ಇಲ್ಲ; ಆದರೂ ನನ್ನ ಧನ ಅನಂತ ಪ್ರಕಾರದ್ದು; ಮಿಥಿಲೆ ಸುಟ್ಟುಹೋದರೂ ನನ್ನದೇನೂ ಸುಟ್ಟು ಹೋಗಲಾರದು ಎಂದು" ಎಂಬುದಾಗಿ ಉತ್ತರಿಸುತ್ತಾನೆ.

ಈಗ ಅರ್ಜುನನು ಅಪ್ಸರ ಕಥೆಯೊಳಗಿನ ಕನಸುಗಾರ ನವಯುವಕನಾಗಿ ಉಳಿದಿರಲಿಲ್ಲ. ಬಿರುಸಾದ ಅನುಭವಗಳಿಂದಾಗಿ ಅವನು ಪ್ರೌಢವ್ಯವಹಾರೀ ಮನುಷ್ಯನಾಗಿದ್ದನು. ರಾಜ್ಯ ದೊರೆತರೂ ಧನವಿರಲಿಲ್ಲ. ಅದನ್ನು ಸಂಪಾದಿಸಿ ರಾಜ್ಯ ರಥವನ್ನು ನಡೆಸುವುದು ಹೇಗೆಂಬ ಚಿಂತೆ ಅವನದಾಗಿತ್ತು. ಯುಧಿಷ್ಠಿರನೂ ರಾಜ್ಯವಾಳಲು ಕುಳಿತಿದ್ದರೆ ಅವನಿಗೆ ಧನಗಳಿಸಿ ತರಲು ಹುರುಪು ಬರುತ್ತಿತ್ತು. ಆದ್ದರಿಂದ ಅವನು ಸ್ವಲ್ಪ ಸಿಡುಕಿನಿಂದ "ಜನಕ ಮೂರ್ಖನಾಗಿದ್ದ; ಆತ ರಾಜ್ಯಬಿಟ್ಟು ಭಿಕ್ಷೆ ಬೇಡಲು ಹೊರಟಾಗ ಅವನ ರಾಣಿಯು ಅವನನ್ನು ಕುರಿತು, ಸಂಪತ್ತನ್ನು ಕಳೆದುಕೊಂಡು ಹೊರಟ ನೀನು ನಾಯಿಯಂತೆ ಕಾಣುತ್ತೀ; ನಿನ್ನನ್ನು ಅವಲಂಬಿಸಿದ ಪ್ರಜೆಗಳು ಎಲ್ಲಿ ಹೋಗಬೇಕು? ಅದಾವ ಶ್ರೇಯಸ್ಸು ನಿನಗೆ ಸಿಗಲಿದೆ – ಎಂದು. ತತ್ತ್ವಜ್ಞನೆಂದು ಖ್ಯಾತನಾಗಿದ್ದರೂ ಜನಕನು ಮೂಢನಾಗಿದ್ದನು; ಪ್ರಜಾಪಾಲನೆ, ದೇವರು ಅತಿಥಿ, ಭೂತಗಳು ಇವುಗಳ ಪೂಜೆ – ಇವನ್ನು ಮಾಡಲೇ ಬೇಕಾಗುವುದು" ಎಂದನು.

ಆದಾಗ್ಯೂ ಯುಧಿಷ್ಠಿರನು ತನ್ನ ಸಂಕಲ್ಪವನ್ನು ಎಂದೂ ಬಿಟ್ಟಿದ್ದಿಲ್ಲ. ಹಾಗೆಂದು ತನ್ನ ಗುಣಗಳ ಪ್ರೌಢಿಮೆಯನ್ನು ಆತ ಎಂದೂ ಮೆರೆಯಿಸಿದ್ದೂ ಇಲ್ಲ. ಆದರೆ ಈ ವೇಳೆಗೆ ಮಾತ್ರ ಆತ ಕೊನೆಯ ಮಟ್ಟಕ್ಕೆ ಉರಿದೆದ್ದು ಅಂದನು, "ನಾನು ಶಸ್ತ್ರಾಸ್ತ್ರಗಳನ್ನು ಕಲಿತಿದ್ದೇನೆ; ವೇದ, ಧರ್ಮ ಏನೆಲ್ಲ ಕಲಿತಿದ್ದೇನೆ. ನೀನು ಅಸ್ತ್ರಗಳನ್ನಷ್ಟೇ ಕಲಿತಿದ್ದೀ. ಶಾಸ್ತ್ರಗಳ ಅರ್ಥ ನಿನಗೆ ಎಂದೂ ತಿಳಿಯಲಾರದು. ಧರ್ಮದ ಸೂಕ್ಷ್ಮಸ್ವರೂಪ ನಿನಗೆ ತಿಳಿಯದು. ನೀನು ವೃದ್ಧರ ಸೇವೆ ಮಾಡಿಲ್ಲ; ಬರಿಯ ಯುದ್ಧವನ್ನಷ್ಟೇ ನೀನು ಬಲ್ಲೆ. ಧನವೇ ಎಲ್ಲಕ್ಕೂ ಶ್ರೇಷ್ಠವೆಂಬ ತಿಳುವಳಿಕೆ ತಪ್ಪು. ತಪಸ್ಸೇ ಎಲ್ಲಕ್ಕಿಂತ ದೊಡ್ಡದು. ಋಷಿಗಳಿಗೆ ಗತಿಯು ಪ್ರಾಪ್ತವಾದದ್ದು ಅದರಿಂದಲೇ. ತಪಸ್ಸಿನಿಂದ ಬಹಳಷ್ಟು ದೊರೆಯುತ್ತದೆ. ಬುದ್ಧಿಯಿಂದ ಮಹಾಶ್ರೇಯಸ್ಸು ಪ್ರಾಪ್ತವಾಗುತ್ತದೆ. ತ್ಯಾಗದಲ್ಲಿಯೇ ಸುಖವಿದೆ" – ಎಂಬುದಾಗಿ.

ಆಗ ಅರ್ಜುನನು ಸುಮ್ಮನೆ ಕುಳಿತನು. ಆದರೆ ದೇವಸ್ಥಾನ ಋಷಿಯೂ ವ್ಯಾಸರೂ ಅರ್ಜುನನ ಪಕ್ಷವನ್ನು ಎತ್ತಿಹಿಡಿದು ಸುವರ್ಣ ಮಾಧ್ಯಮವನ್ನು ತೆಗೆದರು – ರಾಜ್ಯವು ಧರ್ಮದಿಂದ ಗಳಿಸಿದ್ದು. ಅದನ್ನು ಬಿಡುವುದು ಯೋಗ್ಯ ವಲ್ಲ. ಯಾಗ ಮಾಡಿದರೆ ಧನವು ಸಾರ್ಥಕವಾಗುವುದು ಎಂಬುದಾಗಿ. ಆಗ ಯುಧಿಷ್ಠಿರನ ಅಂತರ್ಯಾಮದ ಹಸಿಯ ದುಃಖವು ಒತ್ತರಿಸಿ ಬಂತು. ಅವನೆಂದನು, "ನಮ್ಮ ಮಕ್ಕಳು ಹೋದರು. ಹೆಂಡಂದಿರು ಪುತ್ರರನ್ನು ಕಳೆದುಕೊಂಡರು. ಆದ್ದರಿಂದ ಶೋಕವನ್ನು ತಡೆಯಲಾಗುವುದಿಲ್ಲ; ರಾಜ್ಯದಲ್ಲಿ ಮನಸ್ಸು ನೆಡುವುದಿಲ್ಲ" – ಎಂಬುದಾಗಿ. ಇದಕ್ಕೆ ವ್ಯಾಸರು, "ಸುಖವು ಸಿಗಲಿ ಅಥವಾ ದುಃಖವು ಸಿಗಲಿ, ಪ್ರಾಪ್ತವಾದುದನ್ನು ಅನುಭವಿಸಲೇಬೇಕು. ಸುಖವು ಶಾಶ್ವತವಾಗಿರುವುದಿಲ್ಲ. ಹೃದಯವನ್ನು ಅಪರಾಜಿತವಾಗಿಟ್ಟುಕೊಂಡು ಮುಂದೆ ಬರುವುದನ್ನು ಸ್ವೀಕರಿಸಬೇಕು. ಎಲ್ಲ ಸಹವಾಸಗಳ ಕೊನೆಯು ವಿರಹದಲ್ಲಿಯೇ ಆಗುತ್ತದೆ. ಆದ್ದರಿಂದ ಶೋಕಿಸಬೇಡ" ಎಂದರು. ಕೃಷ್ಣನೂ ತಿಳಿಯಹೇಳುತ್ತಾನೆ. ವ್ಯಾಸರು ರಾಜಧರ್ಮವನ್ನು ಕುರಿತು ಪ್ರವಚನ ನೀಡುತ್ತಾರೆ. ಯುಧಿಷ್ಠಿರನ ಮನಸ್ಸೂ ಶಾಂತವಾಗುತ್ತದೆ. ಅವನು ಅಡವಿಗೆ ತೆರಳುವ ಹಂಬಲವನ್ನು ಬಿಟ್ಟು ಹಸ್ತಿನಾಪುರವನ್ನು ಪ್ರವೇಶಿಸುತ್ತಾನೆ.

ಅನಂತರ ಅವನು ಬಹಳ ವರ್ಷ ರಾಜ್ಯವಾಳಿದನು. ಆದರೆ ಆ ಕಾಲದ ಹಕೀಕತ್ತನ್ನು ವ್ಯಾಸರು ಬರೆದಿಲ್ಲ. ಯುದ್ಧದ ಸ್ಥಿತಿಯೊಳಗಿನ ಯುಧಿಷ್ಠಿರನ ಮಾನಸಿಕ ಆಂದೋಲನಗಳು ಅದರಲ್ಲಿ ಇರಲಿಕ್ಕಿಲ್ಲ. ಇದ್ದರೂ ಯುದ್ಧವೆಂಬ ಗಾಥೆಯನ್ನು ಬರೆಯಹೊರಟ ವ್ಯಾಸರಿಗೆ ಮುಂದಿನ ರಾಜ್ಯದ ಚಿತ್ರವು ಅನಗತ್ಯವೆನಿಸಿರಬಹುದು. ಅಲ್ಲದೆ, ಸುಖ ಸಮೃದ್ಧಿ ಇವು ಒಂದೇ ಬಣ್ಣದವು. ಸಂಘರ್ಷದಲ್ಲಿಯೇ ಯಾರ ಕಲೆ ಅರಳಿತೋ ಅವರು ಸಂಘರ್ಷವಿಲ್ಲದ ಜೀವನಕ್ಕೆ ಏನು ಮಹತ್ವ ಕೊಡುವರು? ಅವರು ಕೈಹಾಕಿದ್ದು ಕೂಡ ನೇರವಾಗಿ ಸಾವಿನ ಕೊನೆಯ ಸಂಘರ್ಷಕ್ಕೆ. ಶಾಂತಿಪ್ರಿಯನೂ ಸಂಘರ್ಷರಹಿತನೂ ಆದ ಯುಧಿಷ್ಠಿರನನ್ನೂ ಕೊನೆಯಲ್ಲಿ ನಿಷ್ಕ್ರಿಯ ಶಾಂತತೆಯ ಪ್ರತೀಕವಾಗಿಸಿ ಅಕ್ಷರಶಃ ಶೂನ್ಯದಲ್ಲಿ ಮುಳುಗಿಸಿಬಿಟ್ಟರು. ಅವನ ಪಾರ್ಥಿವ ಜೀವನ ಮುಗಿಯಿತು. ಮೃತ್ಯುವೂ ಮುಗಿಯಿತು. ಅವನ ಕಲ್ಯಾಣಪ್ರದ ಸಂಕಲ್ಪ ಮಾತ್ರ ಸವೆದು ಹೋಗಬಾರದೆಂದು ಸ್ವರ್ಗದ ಸಂಪುಟದಲ್ಲಿ ವ್ಯಾಸರು ಅವನನ್ನು ಇಟ್ಟುಬಿಟ್ಟರು.

ಯುಧಿಷ್ಠಿರನು ದಾನಧರ್ಮ ಮಾಡಿದನು. ಪುಣ್ಯದ ಸೆರಗು ಹಿಡಿದನು. ಆದರೆ ಅದು ಇತರರದಂತೆ ಸಕಾಮವಿದ್ದಿರಲಿಲ್ಲ. ಅಡವಿಯಲ್ಲಿ ಆತ, "ನಾನು ಕರ್ಮ ಮಾಡುತ್ತೇನೆ; ಆದರೆ ಫಲಾಪೇಕ್ಷೆಯಿಲ್ಲದೆ" ಎಂಬುದಾಗಿ, ದ್ರೌಪದಿಗೆ ಹೇಳುತ್ತಾನೆ. ಅವನು ವಿಶಿಷ್ಟ ದೈವಗಳ ಅಥವಾ ಧರ್ಮಸಂಪ್ರದಾಯಗಳ ಸ್ತೋಮ ಬೆಳೆಯಿಸಲಿಲ್ಲ. ಕಶ್ಯಪನ ಕ್ಷಮೆಯ ಗಾಥೆಯನ್ನೂ ಅವನು ದ್ರೌಪದಿಗೆ ಹೇಳುತ್ತಾನೆ. ಜನಕನ ಆಕರ್ಷಣೆ ಅವನಿಗಿದೆ. ಆದರೆ ಆತ, ಯಾರ ಭಕ್ತನೂ ಆಗಿರಲಿಲ್ಲ. ಬುದ್ಧಿಯ ಪ್ರತಿಷ್ಠೆಯನ್ನು ಅವನು ಉತ್ತಮವಾಗಿ ತಿಳಿದಿದ್ದನು. ಸ್ವಂತಜೀವನದ ವಿಚಾರಮಾಡಬೇಕು; ಆಗಾಗ ಸುಜ್ಞರ ಸಲಹೆಯನ್ನು ಪಡೆಯಬೇಕು – ಹೀಗಿತ್ತು ಅವನ ವೃತ್ತಿ. ಅವನಂಥ ಸ್ವತಂತ್ರ ಬುದ್ಧಿಯ ಉದ್ಗಾತೃ ಮಹಾಭಾರತದಲ್ಲಿ ಬೇರೊಬ್ಬನಿಲ್ಲ. ತನ್ನ ಇಂಥ ನಿಲುವಿಗಾಗಿ ಅವನು ಅಪಾರ ಕಷ್ಟಗಳನ್ನು ಅನುಭವಿಸಿದನು. ತನ್ನ ನಿರ್ಣಯಗಳ ಜಂಭವನ್ನೂ ಅವನು ಮೆರೆಯಿಸಲಿಲ್ಲ. ಹೆಚ್ಚೇನು, ವಿಚಾರವಾದಿಯಾಗಿದ್ದುದರಿಂದಲೇ ಅವನು ಸಾಶಂಕನಿರುತ್ತಿದ್ದನು, ಇಬ್ಬಗೆಯಾಗುತ್ತಿದ್ದನು. ಒಂದು ಪ್ರಶ್ನೆಯ ಬಗೆಗೆ ಎರಡು ರೀತಿ ವಿಚಾರಮಾಡಬಲ್ಲವನಾಗಿದ್ದನು. ಆದ್ದರಿಂದಲೇ ಅವನು ಅಜಾತ ಶತ್ರುವಾಗಿದ್ದನು. ಅದೇ ಕಾರಣದಿಂದ ಆತ ಏಕಾಕಿಯೂ ಆದನು. ಅವನ ಧರ್ಮವೆಂದರೆ ಉತ್ತಮ ನೀತಿಮತ್ತೆ. ವೈಯಕ್ತಿಕ, ಕೌಟುಂಬಿಕ, ಸಾರ್ವಜನಿಕ ನೀತಿಮತ್ತೆಯನ್ನು ಅವನು ಭೀಷ್ಮನಿಂದ ಕೇಳಿದ್ದನು. ಅಧ್ಯಾತ್ಮದ ಸಿದ್ಧಾಂತ ಗಳನ್ನು ಅವನು ಕಂಠಪಾಠ ಮಾಡಲಿಲ್ಲ. ಉಪನಿಷತ್ತುಗಳ ತತ್ವಗಳ ಚರ್ಚೆ ವಿಚರ್ಚೆ ಮಾಡಲಿಲ್ಲ. ದಿನನಿತ್ಯದ ಬದುಕಿನ ಮತ್ತು ವಿಶಿಷ್ಟ ಪ್ರಸಂಗಗಳ ಮಂದಿಯ ನಡತೆಯೇ ತತ್ತ್ವಜ್ಞಾನದ ಮೂಲಾಧಾರವೆಂದು ಅವನು ಅರಿತನು. ಮೋಕ್ಷದ ಧ್ಯಾಸವನ್ನು ಅವನು ಹಿಡಿಯಲಿಲ್ಲ. ಅವನು ಹಿಡಿದ ಧ್ಯಾಸ, ಧರ್ಮಮಾರ್ಗದಿಂದ ನಡೆದು ಸ್ವಕೀಯರನ್ನು ಹೇಗೆ ಸುಖಿಯಾಗಿ ಮಾಡಬೇಕೆಂಬುದಾಗಿತ್ತು. ಎಲ್ಲಕ್ಕೂ ಮಿಗಿಲಾದ ಅವನ ಧ್ಯಾಸ ಕ್ಷಮೆಯದು. ಪ್ರಭುತ್ವ ಮತ್ತು ಸತ್ತೆಗಳ ಶೋಭೆ ಕ್ಷಮಾಗುಣದಿಂದಲೇ ಎಂಬುದನ್ನು ಆಗ್ರಹದಿಂದ–ಅದು ಕುಚೇಷ್ಟೆಯಾಗುತ್ತಿದ್ದರೂ–ಹೇಳುವವನು ಯುಧಿಷ್ಠಿರ ನೊಬ್ಬನೇ. ಶಾಂತಿಯ ಬಗೆಗೆ ತಳಮಳ ಅವನಂತೆ ಬೇರೆಯವರಿಗಿದ್ದದ್ದು ಅಪರೂಪ.

ಅತ್ಯಂತ ಮೃದು ಅಂತಃಕರಣದ ಈ ಮನುಷ್ಯನನ್ನು ಯುದ್ಧದ ಕಠೋರ ಕಾರ್ಯಕ್ಕಾಗಿ ನಿಯತಿಯು ಏಕೆ ಬಳಸಿಕೊಂಡಿತೋ ಯಾರಿಗೆ ಗೊತ್ತು? ಆದರೆ ಒಂದು ಮಾತ್ರ ನಿಜ. ಬಾಲ್ಯದಿಂದ ಕೊನೆಯವರೆಗೂ ಯುಧಿಷ್ಠಿರನು ಯಾವುದೇ ತೀವ್ರ ಮಹತ್ವಾಕಾಂಕ್ಷೆಯಲ್ಲಿ ತನ್ನನ್ನು ಹರಿಯಗೊಟ್ಟದ್ದಿಲ್ಲ. ತನ್ನ ಮಣಿ ಯುವಿಕೆಯ ಗುಣವನ್ನು ಅವನು ಕಾಪಾಡಿಕೊಂಡು ಸತತವಾಗಿ ಶಾಂತಿಯ ಮೂಲಾಧಾರದ ಸಂವೇದವನ್ನು ಪಡೆಯುತ್ತ ಉಳಿದನು; ದಾರಿಕಾರನಂತೆ ತನ್ನದೇ ಆದ ಆ ಕಿರಿದಾದ ಕಾಲುದಾರಿಯಲ್ಲಿ ಸತತವಾಗಿ ನಡೆದನು. ಕೊನೆಯ ದಾರಿಯು ಬಹಳ ಇಕ್ಕಟ್ಟಿನದಾಗಿತ್ತು, ಏರಿನದಿತ್ತು. ಹೆಂಡತಿ ಬಿದ್ದಳು, ತಮ್ಮಂದಿರು ಬಿದ್ದರು; ನಾಯಿಯೊಂದೇ ಉಳಿಯಿತು. ನಾಯಿಯ ಕಣ್ಣೊಳಗಿನ ಕಾರುಣ್ಯವು ಯುಧಿಷ್ಠಿರನ ಪ್ರಾಣಕ್ಕೆ ನಾಟಿತು. ಅದು ನಾಟಿದಾಗಲೆ ಧರ್ಮದ ಶೋಧವಾಗುತ್ತದೆ. ಶಾಂತಿಯು ತಾನೇತಾನಾಗಿ ಸ್ರವಿಸಲು ಪ್ರಾರಂಭ ವಾಗುತ್ತದೆ. ಅದೇ ಶಾಂತಿಯ ಗುಟುಕು ತೆಗೆದುಕೊಳ್ಳುತ್ತ ಈ ಪಥಿಕನು ಮುಕ್ತನಾದನು.



# ಕಂಬನಿ ಆರಿದ ಮೇಲೆ

ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಶತಾಯುಷೀ ಸ್ಥಿತಿಯ ಮಹನ್ಮಂಗಲ ಸ್ತೋತ್ರವನ್ನು ಪ್ರತಿಯೊಂದು ಸ್ಥಲದಲ್ಲಿ ಹಾಡಿದ್ದು ಕಂಡುಬರುತ್ತದೆ. ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳುಗಳ ಸಮೃದ್ಧ ಸಂಸಾರವನ್ನು ವಾರ್ಧಕ್ಯದಲ್ಲೂ ಸುಖಿಯಾಗಿ ಉಳಿದು ನೋಡಬೇಕೆಂಬ ಅಪೇಕ್ಷೆಯನ್ನು ವೈದಿಕಋಷಿಗಳೂ ಇಟ್ಟುಕೊಂಡಿದ್ದರು. ಅದೇ ಅಪೇಕ್ಷೆಯ ಬಳುವಳಿ ಮಹಾಭಾರತದಲ್ಲಿ ಕಂಡು ಬಂದಿದ್ದರೆ, ಅದರಲ್ಲಿ ಯಾವ ಸೋಜಿಗವೂ ಇಲ್ಲ, ಆದರೆ ಪ್ರಾಚೀನ ಸಾಹಿತ್ಯ ದಲ್ಲಿಯ ಆ ಚಿರಾಯುಷಿತ್ವದ ಸ್ವಪ್ನವು ಮಹಾಭಾರತದ ವಿರಾಡ್ವ್ಯವಹಾರದಲ್ಲಿ ಹಾಗೆಯೇ ವರ್ಣರಂಜಿತವೂ ಆಕೃತಿಹೀನವೂ ಆಗಿ ಉಳಿದಿಲ್ಲ. ಮನುಷ್ಯನ ಪ್ರತಿಯೊಂದು ಕಾಮನೆಗೆ, ಪ್ರತಿಯೊಂದು ಅನುಭವಕ್ಕೆ ಪ್ರತಿಯೊಂದು

ಜೀವನಾವಸ್ಥೆಗೆ ವ್ಯಾಸರು ವಿಶಿಷ್ಟವಾದ ಒತ್ತುಕೊಟ್ಟಿದ್ದಾರೆ. ಹಾಗೆ ಮಾಡುವಾಗ, ತಾವು ಮಾಡಿದ ಮೂಸೆಯನ್ನು ತಾವೇ ಒಡೆದು ಚೆಲ್ಲಿದ್ದಾರೆ. ಆದ್ದರಿಂದಲೇ ಮಹಾಭಾರತದಲ್ಲಿಯ ಈ ಒತ್ತುಗಳು, ಸಾರ್ವತ್ರಿಕವಾಗಿ, ವಿಶ್ವವ್ಯಾಪಕವಾಗಿ ಕಂಡರೂ ಸ್ವಂತದ ಕೇಂದ್ರದಿಂದ ಎಂದಿಗೂ ಚ್ಯುತವಾಗುವುದಿಲ್ಲ. ಅದರೊಳಗಿನ ವ್ಯಕ್ತಿಗಳು ಕೇವಲ ವ್ಯಾಸನಿರ್ಮಿತ ವಾತಾವರಣದಲ್ಲಿಯೇ ಸ್ವಂತದ ಆಕಾರ, ಸ್ವಂತದ ಪರಿಮಾಣ, ಸ್ವಂತದ ಖಾಸಗಿ ವಿಶೇಷಗಳನ್ನು ಧಾರಣ ಮಾಡಿ ಜೀವಂತವಾಗಿ ವ್ಯವಹರಿಸುತ್ತವೆ. ಅವನ್ನು ಅಲ್ಲಿಂದ ಹೊರತೆಗೆದು ಅವರ ವ್ಯವಹಾರಗಳನ್ನು ಆದರ್ಶವಾಗಿ ಮಾಡಹೊರಟಿರಾದರೆ ಅವು ಕೂಡಲೆ ಬರಿ ಕೊರಡುಗಳಾಗುತ್ತವೆ; ಮರದ ಗೊಂಬೆಗಳಾಗುತ್ತವೆ.

ವ್ಯಾಸರು ನೀಡಿದ ಮುಪ್ಪಿನ ಪರಿಮಾಣವು ಉಕ್ಕಿ ಚಿಮ್ಮುವ ತಾರುಣ್ಯದ ಭಾವಕ್ಕಿಂತ ಬಹಳ ವಿಶಾಲವಾಗಿದೆ. ಈ ಪರಿಮಾಣವು ಅವರ ಸ್ವಂತದ್ದಲ್ಲ. ಹಿಂದಣ ಪರಂಪರೆಯಿಂದ ಅದನ್ನು ಎತ್ತಿಕೊಂಡರು. ವಾರ್ಧಕ್ಯವು ಪರಿಪಕ್ವತೆಯ ಇನ್ನೊಂದು ಹೆಸರು. ಮಾಧುರ್ಯ ಅನುಭವಗಳ ಪೂರ್ಣತೆ ಮತ್ತು ಅಲಿಪ್ತವಾಗಿ ಚಿಕ್ಕ ದೊಡ್ಡ ವ್ಯವಹಾರಗಳನ್ನು ತೂಗುವ ಅಳೆಯುವ ಸಮತೋಲ ವೃತ್ತಿ – ಇವುಗಳ ಪರ್ಯಾಯ ಹೆಸರೇ ವಾರ್ಧಕ್ಯ. ಆಚೆಯ ಸೀಮೆಯತ್ತ ಯಾರ ಗಮನ ಕೇಂದ್ರೀಕೃತವಾಗಿದೆಯೋ ಅಂಥ ಮನುಷ್ಯನೇ ಈ ಅವಸ್ಥೆಯನ್ನು ಅಲಂಕರಿಸಬಲ್ಲನು. ಅಂಥ ಮನುಷ್ಯನು ಅಂತರ್ಮುಖಿಯಾಗಿಯೂ ತಟಸ್ಥನಾಗಿರಬೇಕಾಗುತ್ತದೆ. ಅವನಿಗೆ ಸ್ವಂತದ ಇಚ್ಛೆಯೆಂಬುದು ಇರುವುದೇ ಇಲ್ಲ. ಆದರೆ ಕಲ್ಯಾಣದ, ಸಾರ್ವತ್ರಿಕ ಕಲ್ಯಾಣದ ಹವ್ಯಾಸ ಮಾತ್ರ ಇಂಥ ಪರಿಪಕ್ವ ವೃತ್ತಿಯ ಮನುಷ್ಯನಲ್ಲಿ ಬಲಿಷ್ಠವಿರುತ್ತದೆ. ತನ್ನನ್ನು ವಿಸರ್ಜಿಸಿಕೊಳ್ಳಲು ಆತ ಹೆಣಗಾಡುತ್ತಿರುತ್ತಾನೆ. ಅಂಥ ಈ ಆದರ್ಶವೃದ್ಧನನ್ನು ದ್ರೌಪದಿಯು ಬಹಳ ಚೆನ್ನಾಗಿ ಅರಿತಿದ್ದಳು. ಆತ ಇಲ್ಲದಿದ್ದರೆ ಸಭೆಯ ಸಭಾಗುಣಕ್ಕೇ ಲೋಪಬರುತ್ತದೆ. ಏಕೆಂದರೆ ಈ ವೃದ್ಧನ ಬಳಿಯಲ್ಲಿ ಅಸ್ಖಲಿತ ಸತ್ಯದ ಅಮೂಲ್ಯ ನಿಧಿಯಿರುತ್ತದೆ. ಈ ಸತ್ಯವು ಕರುಣೆಯಿಂದ ಆಚ್ಛಾದಿತವಾಗಿರುತ್ತದೆ. ಎಲ್ಲ ಬಗೆಯ ದಂಭದಿಂದ ಅದು ಮುಕ್ತವಿರುತ್ತದೆ. ಆದ್ದರಿಂದಲೇ ಅದು ಭೀರುವಾಗಿರುವುದಿಲ್ಲ.

ದ್ರೌಪದಿಯು ಮನಸಾ ರೇಖಿಸಿದ ಕೌರವ ಸಭೆಯಲ್ಲಿ ಆಕ್ರೋಶಮಾಡಿ ಗೋಗರೆದ ಈ ವೃದ್ಧನು ಯಾರಾಗಿದ್ದನು? ಆತ ಎಲ್ಲಿದ್ದನು? ಪಿತಾಮಹ ಭೀಷ್ಮ ಗುರುದ್ರೋಣ, ಜರಾಜರ್ಜರ ಧೃತರಾಷ್ಟ್ರ, ವಿದುರ ಇವರೆಲ್ಲರೂ ವೃದ್ಧರೇ. ಆದರೆ ಅವರಲ್ಲಿಯ ಆ ಶಾಂತವೂ ಭವ್ಯವೂ ಆದ ಭಾವವಿರುವ ವೃದ್ಧನು ಎಲ್ಲಿಂದಲೋ ಲೋಪಗೊಂಡಿದ್ದನು. ಭೀಷ್ಮ ವಿದುರರಿಬ್ಬರೂ ತುಂಬಾ ಮರವಟ್ಟುಹೋಗಿದ್ದರು. ಆದರೆ ಅಂಥ ಧೃತರಾಷ್ಟ್ರನ ಮನಸ್ಸಿನಲ್ಲಿ ಮಾತ್ರ ಆ ಸಮಯಕ್ಕೆ ಪ್ರಚಂಡವಾದ ಕ್ಷೋಭೆಯೆದ್ದಿತ್ತು. ಧೃತರಾಷ್ಟ್ರನ ವಾರ್ಧಕ್ಯದ ವಿಶೇಷವೆಂದರೆ ಅವನ ಮನಸ್ಸು ಸದಾ ಅಶಾಂತವಿರುತ್ತದೆ; ಇಬ್ಬಗೆಯಾಗಿ ಶಂಕಾಕುಲವಾಗಿ ಇರುತ್ತದೆ. ನಿಕರದ ಪ್ರಸಂಗಗಳಂತೂ ಯಾವಾಗಲೂ ಅವನ ಸುತ್ತಲೂ ಇರುತ್ತಿದ್ದವು. ಅದರಲ್ಲಿ ಆತ ರಾಜ. ನಿರ್ಣಯ ನೀಡುವ ಭಾರವೂ ಅವನ ಮೇಲೆಯೇ ಬೀಳುತ್ತಿತ್ತು. ಎಲ್ಲೆಲ್ಲಿ ಸ್ವಾರ್ಥಕ್ಕೆ ಭೇದ ಕೊಡುವ ಪ್ರಸಂಗವೇಳುತ್ತಿತ್ತೋ ಅಲ್ಲಲ್ಲಿ ಧೃತರಾಷ್ಟ್ರನ ಸಮಚಿತ್ತವು ಮುಗ್ಗರಿಸುತ್ತಿತ್ತು. ಅವನು ನ್ಯಾಯವನ್ನು ತಪ್ಪಿಸಿ, ಸತ್ಯವನ್ನು ಬದಿಗೊತ್ತಿ, ಏನಾದರೂ ಮಾಡಿ ಕೂರುತ್ತಿದ್ದನು. ಅಲ್ಲದ್ದು ಸಲ್ಲದ್ದನ್ನು ಬಡಬಡಿಸುತ್ತಿದ್ದನು. ನ್ಯಾಯದ ದಾರಿಯಿಂದಲೇ ತಾನು ಹೋಗಬೇಕೆಂಬ ಮುಳ್ಳು ಅವನನ್ನು ಅನೇಕ ಸಲ ಚುಚ್ಚುತ್ತಿತ್ತು. ಆಗ ಆತ, ವಿದುರನನ್ನು ಕರೆಯಿಸಿಕೊಂಡು ತನ್ನ ಹೃದ್ಗತವನ್ನು ಅವನಲ್ಲಿ ತೋಡಿಕೊಳ್ಳುತ್ತಿದ್ದನು. ಭೀಷ್ಮ ದ್ರೋಣ ವಿದುರರಿಗಿಂತ ಅವನು ಬಹಳ ದುರ್ಬಲನಾಗಿದ್ದನು; ಇದರಲ್ಲಿ ಸಂಶಯವೇ ಇಲ್ಲ. ಆದರೆ ಸಭೆಯಲ್ಲಿ ದ್ರೌಪದಿಯ ಆಹ್ವಾನದಿಂದ ಹಿರಿಕಿರಿಯರೆಲ್ಲರೂ ಸ್ತಬ್ಧರಾದಾಗ ಧೃತರಾಷ್ಟ್ರನಲ್ಲಿ ಕ್ಷಣದ ಮಟ್ಟಿಗೇ ಆಗಲಿ ದ್ರೌಪದಿಯು ಊಹಿಸಿದ ಮತ್ತು ಪ್ರತ್ಯಕ್ಷವಾಗಿ ಚಿರಸ್ವರೂಪದಲ್ಲಿ ಕಾಣಸಿಗದ ಆ ಅದೃಶ್ಯ ವೃದ್ಧನ ಸಂಚಾರವಾಯಿತು. ಅವನು ಅವಳನ್ನು, ಗಂಡಂದಿರೊಂದಿಗೆ, ದಾಸ್ಯದಿಂದ ಬಿಡುಗಡೆ ಮಾಡಿದನು. ಅಷ್ಟೆಲ್ಲ ನಡೆದುಹೋದ ಮೇಲೆ ಮಾತ್ರ ಅವನು ಮತ್ತೆ ಧೃತರಾಷ್ಟ್ರನಾಗಿಯೇ ಉಳಿದನು. ಎಡವುತ್ತ, ಮುಳುಗೇಳುತ್ತ, ಅಳುತ್ತ ಗೋಗರೆಯುತ್ತ ತನ್ನನ್ನೂ ಇತರರನ್ನೂ ದೂಷಿಸುತ್ತ ಆತ ಕೊನೆಯವರೆಗೂ ಉಳಿದನು. ಹ್ಞಾ ಹ್ಞಾ ಎನ್ನುವಷ್ಟರಲ್ಲಿ ಆ ಶಾಲೀನ ವಿಶಾಲ ವೃದ್ಧತ್ವವು ಸಭೆಯಲ್ಲಿ ಕಾಣಿಸಿಕೊಂಡಿತು, ಕಾಣದಂತೆಯೂ ಆಯಿತು! ಧೃತರಾಷ್ಟ್ರನನ್ನು ಅದು ಸ್ವಲ್ಪವೂ ಎತ್ತರಿಸಲಿಲ್ಲ. ಭೀಷ್ಮಾದಿ ಹಿರಿಯರಿಗೆ ಅದು ಯಾವ ಪ್ರೇರಣೆಯನ್ನೂ ಕೊಡಲಿಲ್ಲ. ಪಾಂಡವರಿಗೆ ಯಾವ

ಆಶ್ವಾಸನೆಯೂ ದೊರೆಯಲಿಲ್ಲ. ಎಲ್ಲರ ತಲೆಗಳೂ ತಗ್ಗಿದವು. ಕ್ಷುದ್ರ ದುರ್ಬಲ ಮನಸ್ಸುಗಳ ಮರುಕ ಚಡಪಡಿಕೆ ಮತ್ತು ಎಲ್ಲೆಡೆಗೆ ವೈಫಲ್ಯವನ್ನು ನೆಟ್ಟ ಆ ವಿಚಿತ್ರ ಪ್ರಜ್ಞೆ ಇಲ್ಲವಾಯಿತು.

ಆದರೆ ಆ ಕ್ಷಣದ ಆ ಪ್ರಜ್ಞೆಯ ಪ್ರತಾಪವು ಬೇರೆ ಬೇರೆ ಎಲ್ಲ ವಯೋವೃದ್ಧರನ್ನೂ ಎಂದೆಂದಿಗೂ ಚುಡಾಯಿಸುತ್ತ ಉಳಿಯಿತು. ಧೃತರಾಷ್ಟ್ರನ ಮನದ ಆಂದೋಲನಗಳು ಅಂದಿನಿಂದ ನೂರುಪಟ್ಟು ಬೆಳೆದವು. ಗಾಂಧಾರಿಯ ಮನಸ್ಸಿನ ತೀವ್ರತೆಯಂತೂ ಎಷ್ಟು ಬೆಳೆಯಿತೆಂದರೆ, ನ್ಯಾಯದ ಸ್ಫಟಿಕದಂಥ ರೂಪವು ಅವರ ಕಣ್ಣೆದುರು ಮತ್ತೆ ಮತ್ತೆ ಬರಹತ್ತಿತು. ತನ್ನ ಸ್ವಾರ್ಥೀಪುತ್ರರನ್ನು ತ್ಯಜಿಸುವುದನ್ನು ಕುರಿತು ಭೀಷ್ಮರಂತೆ ಅವಳೂ ಗಂಡನಿಗೆ ಹೇಳಿದಳು. ಅವನೊಡನೆ ಅತ್ಯಂತ ಸಮತೂಕದಲ್ಲಿ ಚರ್ಚೆ ಮಾಡಿದಳು. ದ್ರೌಪದಿಯ ಅನ್ಯಾಯದ ಮಾನಸಿಕ ಪರಿಮಾರ್ಜನೆಯನ್ನು ನಿಜವಾದ ಅರ್ಥದಲ್ಲಿ ಯಾರಾದರೂ ಮಾಡಿದ್ದು ಇದ್ದರೆ ಅದು ಗಾಂಧಾರಿಯೇ; ತಾಯಿಯು ಮಕ್ಕಳ ವಿರುದ್ಧ ನಿಂತಳು. ಯುದ್ಧದಲ್ಲಿ ಸಾಯಲು ಒಡ್ಡಿದ್ದ ಮಕ್ಕಳ ತಾಯಿ. ರಾಜಕಾರಣದ ವಿರುದ್ಧ ಆ ಮೊದಲೇ ಒಂದು ರೀತಿ ಬಂಡು ಹೂಡಿದ್ದವಳು. ಅನುದ್ಯೂತದ ಆ ಕಲ್ಪನೆಯನ್ನು ಸದೆಬಡಿಯುವ ಸಣ್ಣ ಯಶಸ್ಸೇನೋ ಇವಳ ಉಡಿಯಲ್ಲಿ ಬಿತ್ತು. ಪರಿಪಕ್ವತೆಯ ನಿಟ್ಟಿನಲ್ಲಿ ಅವಳು ಭರದಿಂದ ಸಾಗಿದ್ದಳು. ಧೃತರಾಷ್ಟ್ರನು ಮಾತ್ರ ಅವಳಿಗಿಂತ ಎಷ್ಟೋ ಹಿಂದೆ ಬಿದ್ದಿದ್ದನು. ಭೀಷ್ಮ ವಿದುರರಿಗಿಂತ ಎಷ್ಟೋ ದೊಡ್ಡ ದುಃಖವನ್ನು ನುಂಗುತ್ತ ಅವಳು ನ್ಯಾಯಕ್ಕೆ ಅಂಟಿಕೊಂಡು ಉಳಿಯುವ ಪರಾಕಾಷ್ಠೆಯ ಪ್ರಯತ್ನ ಮಾಡುತ್ತಿದ್ದಳು.

ಇಷ್ಟೆಲ್ಲ ಆದರೂ, ಈ ಎಲ್ಲ ವಯೋವೃದ್ಧರ ಪ್ರತಿಮೆಗಳೂ ನಮ್ಮ ಕಣ್ಣೆದುರು ನಿಲ್ಲುವುದು, ದುಃಖದ ಭಾರದಿಂದ ಬಗ್ಗಿದ ಸೊಂಟಮುರಿದ ವ್ಯಕ್ತಿಗಳಾಗಿ. ಇದಕ್ಕೆ ಅಪವಾದ ಭೀಷ್ಮನೊಬ್ಬನೇ. ಮಹಾಭಾರತದಲ್ಲಿಯ ವೃದ್ಧನೆಂದೊಡನೆ ಒಂದೇ ಆಕೃತಿ ಮೊದಲು ಕಣ್ಣಮುಂದೆ ಬರುತ್ತದೆ. ಆದರ್ಶ ವೃದ್ಧನ ಕಲ್ಪನೆಯು ಅದರ ಪೂರ್ಣತ್ವದೊಂದಿಗೆ ಆಕಾರಗೊಳ್ಳದಿದ್ದರೂ ಅದರ ಆಚೆ ಈಚೆ ಛಾಯೆಯಂತೆ ಸುಳಿದಾಡುವ ಆಕೃತಿ ಯಾರದಾದರೂ ಇದ್ದರೆ ಅದು ಪಿತಾಮಹ ಭೀಷ್ಮನದೇ. ಗಟ್ಟಿಮುಟ್ಟಾದ ದೇಹ; ಬದುಕಿನ ಎಲ್ಲ ನೆನಪುಗಳೂ ಕೊನೆತನಕ ಜೀವಂತವಿದ್ದ ಆಳವೂ ಗಂಭೀರವೂ ಆದ ಮನಸ್ಸು; ಎಲ್ಲರಲ್ಲಿಯೂ ಸೇರಿ ಬೆರೆತು ತಟಸ್ಥವಾಗಿರುವಿಕೆ – ಇಂಥ ವ್ಯಕ್ತಿತ್ವವುಳ್ಳವನು ಭೀಷ್ಮ.

ಕುರುವಂಶದಲ್ಲಿಯ ಸರ್ವಶ್ರೇಷ್ಠ ಪುರುಷ ಅವನೇ. ಎಲ್ಲರನ್ನೂ ಬೆಳೆಯಿಸಿ ನೀತಿ, ಕರ್ತವ್ಯ, ಕರ್ತೃತ್ವಗಳನ್ನು ಕಲಿಸುವವನೂ ಅವನೇ. ತನ್ನ ಅನಂತರದ ಮೂರು ಪೀಳಿಗೆಯವರಲ್ಲಿ ತನ್ನ ಮುಂಚಿನ ಪೀಳಿಗೆಗಾಗಿಯೂ ಹೆಣಗುವವನು ಭೀಷ್ಮನೇ. ಉದಾಸೀನ, ಒಳಗೊಳಗೇ ಕುದಿಯುವ, ಶಾಂತವಾದ ಆದರೆ ಜಡವಾದ ಕವಚವನ್ನು ಧರಿಸುವ ವ್ಯಕ್ತಿತ್ವವು ಯಾರದಾದರೂ ಇದ್ದರೆ ಅದು ಭೀಷ್ಮನದೇ.

ಅಷ್ಟಾವಕ್ರ, ಪುರೂರವರಂತೆ ಭೀಷ್ಮನು ಜನ್ಮತಃ ಪ್ರೌಢನಾಗಿದ್ದನು. ಅಷ್ಟಾವಕ್ರನು "ನನ್ನನ್ನು ಚಿಕ್ಕವನೆನ್ನಬೇಡ. ತಲೆನರೆತವರೆಲ್ಲ ವೃದ್ಧರಲ್ಲ. ಯಾರು ತರುಣನಿದ್ದರೂ ಪಂಡಿತನೋ, ಅವನನ್ನು ದೇವತೆಗಳೂ ವೃದ್ಧನೆನ್ನುತ್ತಾರೆ" – ಎಂದು ಬಂದಿಯ ಮುಂದೆ ಜಂಭಕೊಚ್ಚಿಕೊಂಡಿದ್ದನು. ಪೂರುವಂತೂ ಪ್ರಕಟವಾಗಿಯೇ ತಂದೆಯ ಮುಪ್ಪನ್ನು ತಾನು ಸ್ವೀಕರಿಸಿದ್ದನು. ಆದರೆ ಆ ಮುಪ್ಪು ಅಂತರಂಗಕ್ಕಿರಲಿಲ್ಲ; ಯುವಾವಸ್ಥೆಯ ಮರಣಕಳೆಯೆಂದು ಯಾವುದನ್ನು ಕರೆಯಬಹುದೋ ಅಂತಹದು ಮತ್ತು ಎಂದಿಗೂ ಎಲ್ಲರಿಗೂ ಬೇಡಬೇಡ ವೆನಿಸುವ ವಾಡಿಕೆಯದು ಆಗಿತ್ತು ಅದು. ಅದರಲ್ಲಿ ಕಾಮವಾಸನೆಯ ಮರಣ ವಿತ್ತು; ನಿರ್ಮಾಣಶಕ್ತಿಯ ಹಾಗೂ ಪರಾಕ್ರಮದ ಅಂತ್ಯವಿತ್ತು. ಭೀಷ್ಮನ ರೂಪ ದಲ್ಲಿ ವ್ಯಾಸರು ಈ ಎರಡೂ ಉಚ್ಚನೀಚ ಅವಸ್ಥೆಗಳ ಸಮನ್ವಯವನ್ನು ಜರುಗಿಸಿ ತಂದರು. ತಂದೆಯ ಇಚ್ಛೆಯನ್ನೂ ಪೂರ್ತಿಮಾಡುವಾಗ ರಾಜ್ಯ, ವಿವಾಹ, ಎಲ್ಲವನ್ನೂ ಭೀಷ್ಮನು ತ್ಯಜಿಸಿದನು. ಆ ಬಗ್ಗೆ ಅವನಿಗೆ ಎಂದೂ ಅನುತಾಪ ವಾಗಲಿಲ್ಲ. ಜೀವನದಲ್ಲಿ ಶಾರೀರಿಕ ತಾರುಣ್ಯವನ್ನು ಅವನು ತ್ಯಜಿಸಲಿಲ್ಲ. ಆದರೆ ಆ ತಾರುಣ್ಯದ ಬಲಿಷ್ಠ ನಿರ್ಮಾಣದಲ್ಲಿ ಅವನು ಅಷ್ಟಾವಕ್ರನಿಗೆ ಅಭಿಪ್ರೇತವಿದ್ದ ಎಲ್ಲ ಸ್ಥೈರ್ಯವನ್ನೂ ಎಲ್ಲ ಸಮಂಜಸತನವನ್ನೂ ಎರಕಹೊಯ್ದನು. ಇದನ್ನು ಮಾಡುವಾಗ ಅವನಿಗೆ ಒಂದು ವಿಲಕ್ಷಣ ಅಂತರ್ಮುಖತೆಯು ಲಭಿಸಿತು. ಅವನು ತನ್ನಲ್ಲಿ ತಾನೇ ಮುಳುಗುತ್ತ ಉಳಿದನು. ಆದರೆ ಅದರೊಂದಿಗೇ, ಅವನ ತರಲ ಸಂವೇದನೆಗಳೂ ಕಮರುತ್ತ ಹೋದವು. ಯುಧಿಷ್ಠಿರನಂತೆ, ಅಂತರ್ಮಂಥನದಿಂದ ಹೊರಡುವ ಸೂಕ್ಷ್ಮ ಸಂವೇದನಾಕ್ಷಮತೆಯು, ಭೀಷ್ಮ ನಲ್ಲಿ ಕಂಡುಬರುವುದಿಲ್ಲ. ಕಂಡುಬರುವ ಕಾರಣವೇ ಈಗ ಉಳಿದಿಲ್ಲವೋ ಎಂಬಂತಿದೆ. ಈ ಮೊಂಡುತನವಿಲ್ಲದಿದ್ದರೆ ಭೀಷ್ಮನಿಗೆ ಶಾಂತದಾಂತ ವೃತ್ತಿ ಯಿಂದ ತ್ಯಾಗಭಾವವನ್ನು ಸಹಜವಾಗಿ ತಾಳಿಕೊಳ್ಳಲು ಬರುತ್ತಿದ್ದಿಲ್ಲ.

ತೂಗುಯ್ಯಾಲೆಯಾಡುವ ಭಾವನೆಗಳು ಯುಧಿಷ್ಠಿರನಿಗೆ ಶೋಭಿಸುತ್ತಿದ್ದವು. ವಿದುರನಾದರೋ ಅಪರೂಪದ ಕ್ಷೋಭೆಯ ಕಂಬನಿಗಳನ್ನು ಸುಖವಾಗಿಯೇ ಸುರಿಸಿದನು. ಆದರೆ, ತಾರುಣ್ಯದಲ್ಲಿಯೇ ಕಂಬನಿಗಳನ್ನು ಕಳೆದುಕೊಂಡು ಕುಳಿತ ಮನುಷ್ಯ, ಭೀಷ್ಮನ ಹೊರತು ಬೇರೆ ಯಾರಾದರೂ ಸಿಗಬಹುದೆಂದು ನನಗನ್ನಿಸುವುದಿಲ್ಲ. ತನ್ನನ್ನು ತಾನೇ ಅಟ್ಟಹಾಸದಿಂದ ಪರಕೀಯನನ್ನಾಗಿ ಮಾಡಿಕೊಳ್ಳುವ, ತನ್ನ ಮನಸ್ಸಿನ ಕೆಲವು ಭಾಗಗಳನ್ನು ತಾನೇ ಮುಚ್ಚಿಟ್ಟುಕೊಳ್ಳುವ ಈ ಮನುಷ್ಯನು ಮಕ್ಕಳ, ಮೊಮ್ಮಕ್ಕಳ, ಸೊಸೆಯರ, ಸಮಗ್ರ ಪರಿವಾರದ ಸುಖದುಃಖಗಳ ಜೋಪಾಸನೆಯನ್ನು ನವುರಾಗಿ ಕೈಯಾಡಿಸುತ್ತ ನೋಡಿಕೊಳ್ಳುತ್ತಾನೆ. ನಿಜವಾದ ಅರ್ಥದಲ್ಲಿ ಆತ ಪಿತಾಮಹ. ಭೂಮಿಯ ಮೇಲೆ ಭದ್ರವಾಗಿ ಕಾಲೂರಿ ಕುಳಿತ ಈತ, ಮಕ್ಕಳ ಮೊಮ್ಮಕ್ಕಳ ದಿನನಿತ್ಯದ ವ್ಯವಹಾರದಲ್ಲಿ ಪೂರ್ಣವಾಗಿ ಮುಳುಗಿಹೋಗಿರುತ್ತಾನೆ. ಸ್ವತಃ ಬ್ರಹ್ಮಚಾರಿಯಾಗಿದ್ದರೂ ಇವನಿಗೆ ಬೀಳಲುಗಳು ಬಹಳ ಒಡೆದಿವೆ. ಈತ ಎಂದೂ ಅಳುವುದಿಲ್ಲ ನಗುವುದಿಲ್ಲ. ಆದರೂ ಈ ವೃತ್ತದ ಹಣ್ಣುಗಳನ್ನು ಸಾವಿರಾರು ಹಕ್ಕಿಪಕ್ಷಿಗಳು ತಮ್ಮ ಕೊಕ್ಕಿನಿಂದ ನಿತ್ಯವೂ ಕೊರೆಯುತ್ತವೆ, ಕುಕ್ಕುತ್ತವೆ; ಅವನನ್ನು ಕೃತಾರ್ಥನನ್ನಾಗಿಸುತ್ತವೆ. ಮಹಾಭಾರತದಲ್ಲಿ, ನಿಜವಾದ ಅರ್ಥದಲ್ಲಿ ಯಾರಾದರೂ ಬೇರೂರಿದ್ದರೆ ಅದು ಭೀಷ್ಮನೇ. ಮಣ್ಣು ಬಿಟ್ಟು ಮೇಲೆ ಹೋಗಲು ಅವನು ಸಿದ್ಧನಾಗಿರಲಿಲ್ಲ. ತಾರುಣ್ಯದಲ್ಲಿ ಭೋಗಗಳ ಸ್ವರ್ಗವನ್ನು ಅವನು ಸಹಜವಾಗಿಯೇ ಬಗೆದುಬಿಟ್ಟ. ತನ್ನ ಅತಿದೀರ್ಘ ಆಯುಷ್ಯದಲ್ಲಿ ಮುಮುಕ್ಷತ್ವದ ಗೀಳು ಹತ್ತಿಸಿಕೊಳ್ಳಲಿಲ್ಲ. ಪೃಥ್ವಿಸ್ವರ್ಗಗಳ ಅಂತರವನ್ನು ಸಂಪೂರ್ಣವಾಗಿ ಕತ್ತರಿಸಿ ಚೆಲ್ಲಿ ಅವೆರಡನ್ನೂ ಒಂದೇ ಪಾತಳಿಯ ಮೇಲೆ ತರಲು ನೋಡುವ ಗೀಳನ್ನು ಆತ ಹಚ್ಚಿಕೊಂಡಂತೆ ಕಾಣುತ್ತದೆ.

ಈ ಗೀಳಿನಿಂದಾಗಿಯೇ ಪಿತಾಮಹನೆಂಬ ಬಿರುದು ಅವನಿಗೆ ಚೆನ್ನಾಗಿ ಒಪ್ಪುತ್ತದೆ. ಅವನ ವಾತ್ಸಲ್ಯವು ಯಾವ ತಾಯಿಯನ್ನೂ ಹಿಂದೆ ಹಾಕುವಂತಿದೆ. ಅದು ಉತ್ತರೋತ್ತರ ಪಕ್ವವಾಗುತ್ತ ಸಾಗಿದೆ. ಭೀಷ್ಮನು ಕುಂತಿಯಂತೆಯೆ ತನ್ನನ್ನು ಮಮತೆಯಿಂದ ಬೆಳೆಸಿದನೆಂದು ಯುಧಿಷ್ಠಿರನು ಗದ್ಗದನಾಗಿ ಹಲವು ಸಲ ಹೇಳಿದ್ದಾನೆ. ಭೀಷ್ಮ ಬಿದ್ದೊಡನೆ ದುರ್ಯೋಧನನಿಗೂ ಬಹಳ ದುಃಖವಾಗುತ್ತದೆ. ಅದು ಸ್ವಾರ್ಥಮೂಲವಾಗಿಯೆನ್ನುವಂತಿಲ್ಲ. ಭೀಷ್ಮನ ಈ ವಾತ್ಸಲ್ಯವನ್ನು ವ್ಯಾಸರು ವಾಚಾಳಿಯಾಗಲು ಬಿಡಲಿಲ್ಲ. ಭೀಷ್ಮನು ಮಕ್ಕಳನ್ನು ಮುದ್ದಾಡುತ್ತಾನೆ. ಎಲ್ಲೋ ಭಾವನಾಪರನಾಗಿ ತನ್ನ ಅಂತಃಕರಣಕ್ಕೆ ದಾರಿ

ತೆರೆದುಕೊಡುವುದು ಎಂದೂ ಆಗಿರಲಿಲ್ಲ. ಅವನ ಸುತ್ತಮುತ್ತ ಒಂದು ಕೋಮಲ ದೃಶ್ಯವನ್ನೂ ವ್ಯಾಸರು ನಿಲ್ಲಿಸಿಲ್ಲ. ಈ ವಾತ್ಸಲ್ಯಮಯ ಪಾಲಕನ, ಪಿತಾಮಹನ ಹಿನ್ನೆಲೆಯನ್ನು ಮಾತ್ರ ವ್ಯಾಸರು ಅಪೂರ್ವ ಕೋಮಲವಾದ ಒಂದು ಬಣ್ಣದಿಂದ ತುಂಬಿರುತ್ತಾರೆ. ಪ್ರತ್ಯಕ್ಷ ಚಿತ್ರವನ್ನು ಮಾತ್ರ ಒಣನಿಬ್ಬರದ ಗೆರೆಗಳಿಂದ ಬರೆದಿದ್ದಾರೆ. ಪ್ರತಿಯೊಂದು ರೇಖೆಯೂ ಅಚ್ಚುಕಟ್ಟಿನದು, ಅಂಗಸೌಷ್ಠವದ್ದು ಮತ್ತು ತುಂಬಿದ್ದು; ಆಕೃತಿಯ ದುಂಡುಗಾತ್ರಕ್ಕೆ ಎಲ್ಲಿಯೂ ಮುಕ್ಕುಂಟಾಗಿಲ್ಲ. ಭೀಷ್ಮನ ಸ್ವರ, ಗಂಭೀರವಾಗಿದೆ. ಆದರೆ ಈಗ ಅವನ ಪೂರ್ವ ಜೀವನದಲ್ಲಿಯ ವಿಗ್ರಹದ ಕಠೋರತನ ಅದರಲ್ಲಿ ಉಳಿದಿಲ್ಲ. ವಿಗ್ರಹವೇ ಮೂಲತಃ ಚೆನ್ನಾಗಿ ಮಿದುವಾಗಿದೆ. ಎಷ್ಟೆಂದರೆ, ಅವನು ನಿಕರದ ನಿಗ್ರಹವನ್ನು ಎಂದಾದರೂ ಮಾಡಿದ್ದನೋ ಇಲ್ಲವೋ ಎಂಬುದರದೇ ಶಂಕೆಯುಂಟಾಗು ವಷ್ಟು. ಸ್ವಂತದ ಉತ್ಕಟ ವೃತ್ತಿಗಳಿಗೆ ಇಂಥ ಸವಕಳಿಯ ಕಳೆಯನ್ನು ಆತ ಬೇಕೆಂದೇ ತಂದುಕೊಟ್ಟಿರಬಹುದೇ? ಅಥವಾ ವೈರಾಗ್ಯದ ಸಾಮಾನ್ಯ ಆದರ್ಶವು ಅದು ಕ್ಷತ್ರಿಯರೂಪದಿಂದ ಅರಮನೆಯಲ್ಲಿರುತ್ತಿದ್ದರೂ – ಸ್ವಲ್ಪವೂ ವಿಕೃತವಾಗಕೂಡದೆಂಬ ಸಂಸ್ಕೃತಿಯ ದಂಡಕವನ್ನು ವ್ಯಾಸರು ಪಾಲಿಸಿದರೆ? ಭೀಷ್ಮನು ವಿರಾಗಿ ಹೌದು, ಹಾಗಾದರೆ, ಪಾಂಡುವು ರಾಜನಾದ ಮೇಲೆ, ತನ್ನ ಕರ್ತವ್ಯ ಮುಗಿಯಿತೆಂದು ಸಮಾಧಾನದಿಂದ ಸಹಜವಾಗಿಯೇ ಕಾಡಿಗೆ ಹೋಗಿ ತಪಸ್ಸು ಮಾಡಬಹುದಾಗಿತ್ತು. ತಪಸ್ಸು ಅವನಿಗೆ ಕಷ್ಟವಾಗುತ್ತಿತ್ತೆಂದೇನೂ ಅಲ್ಲ. ಅಂದಾಗ, ಅವನನ್ನು ಸಂಸಾರ ಪ್ರಪಂಚದಲ್ಲಿಯೇ ಇಷ್ಟೊಂದು ವಿರಕ್ತ ರೀತಿಯಲ್ಲಿ ವ್ಯವಹರಿಸಲು ಹಚ್ಚುವುದರಲ್ಲಿ ವ್ಯಾಸರ ಉದ್ದೇಶವೇನಿತ್ತು?

ನನಗನಿಸುತ್ತದೆ, ಕಠೋರ ತಾಪಸರ, ಶಾಂತಋಷಿಗಳ, ಜಾಜ್ವಲ್ಯ ಹಟವಾದೀ ತಪಸ್ಸಿನಿಂದ ಇಷ್ಟ ಪೂರೈಸಿಕೊಳ್ಳುವವರ – ಚಿತ್ರಗಳು ಏನೇ ಆದರೂ ಕಣ್ಣಿಗೆ ಹೊಡೆಯುವಂತಹವೇ ಇರುತ್ತವೆ. ವೈರಾಗ್ಯದ ಜ್ವಾಲೆಯನ್ನೂ ಸೇಡಿನ ಕೃತ್ಯಕ್ಕೆ ಬಳಸಿರುವವರು ಕೆಲವರೇ ಏನಲ್ಲ. ಈರ್ಷ್ಯೆಯೂ ತಪಸ್ಸಿಗೆ ಸಲ್ಲದೆಂಬುದಿಲ್ಲ. ಕ್ಷಣಿಕ ಮೋಹದಿಂದ, ಇಡೀ ತಪಸ್ಸಿನ ಫಲ, ವ್ಯರ್ಥವಾದ ಉದಾಹರಣೆಗಳೂ ಕಡಮೆಯಿಲ್ಲ. ವ್ರತಸ್ಥ ಮುನಿಗಳ ಬೀಜವು ಪರಮ ನಿರ್ಮಾಣಕಾರಿಯೆಂಬ ಪ್ರತ್ಯಯವೂ ನಿಯೋಗರೂಪದಿಂದ ಇಲ್ಲಿ ಬರುವು ದುಂಟು. ಈ ಎಲ್ಲ ಪಾರಂಪರಿಕ ತಪಸ್ಸಿನ ಕಕ್ಷೆಯಲ್ಲಿಯೇ ವ್ಯವಹರಿಸುವ ವಿವಿಧ ಮೂರ್ತಿಗಳನ್ನು ವ್ಯಾಸರು ಕಾಲಕಾಲಕ್ಕೆ ಕೊರೆದರು. ಆದರೆ ಸ್ವೇಚ್ಛೆಯಿಂದ ಒಂದೇ ಒಂದು ಮೂರ್ತಿಯನ್ನು ಅವರು ನಿರ್ಮಿಸಿದರು. ಕೆಲವರಿಗೆ ಅದು

ವಿಕೃತ ಮೂರ್ತಿ-ಅರ್ಧಕ್ಕೇ ಬಿಟ್ಟದ್ದು ಎನಿಸಿರಲೂಬೇಕು-ಎಂದೆನಿಸುವಂತೆಯೇ ಅದನ್ನು ರೂಪಗೊಳ್ಳಲು ಬಿಟ್ಟರು. ಆದರೆ, ಆ ಮೂರ್ತಿಯಲ್ಲಿ, ತಮಗೂ ಕೆಲವೆಡೆಯಲ್ಲಿ ದಕ್ಕಲಾರದ ಕಸಬನ್ನು ವ್ಯಾಸರು, ಪ್ರಾಣವನ್ನೇ ಪಣವೊಡ್ಡಿ, ಎರಕಹೊಯ್ದರು. ಶುಚಿಗೊಳಿಸುವ ಕೈಯನ್ನು ಅದರ ಮೇಲೆ ಆಡಿಸಲು ಅವರು ಸಾಹಸ ಮಾಡಲಿಲ್ಲ. ತಪಸ್ಸಿನ ಜೋರನ್ನಿಲ್ಲಿ ಅವರು ಡೊಂಕಾಗಿ ಅನಿಸಿಟ್ಟು ಬಳಸಿದರು. ಅಂಬೆಯ ದ್ವೇಷದ ಪ್ರಖರ ಕಿರಣವನ್ನು ಮೇಲಿಂದ ಸರಿಯಲು ಬಿಡಲಿಲ್ಲ. ಅವಳ ಸಾವಿನಲ್ಲೂ ಅದು ಆರಲಿಲ್ಲ. ಉರಿಯುವ ಕೊಳ್ಳಿಯನ್ನು ಹಿಡಿದುಕೊಂಡೇ ಅದು ಶಿಖಂಡಿಯ ರೂಪದಲ್ಲಿ ಹುಟ್ಟಿಬಂತು.

ಅಂಬೆಯ ಪ್ರಕರಣವು ಚಿಕ್ಕದಾಗಿದ್ದರೂ ಎಷ್ಟು ಪ್ರಜ್ವಲವಾಗಿದೆಯೆಂದರೆ ಈ ಒಂದು ಕಿಡಿಯಲ್ಲಿಯೇ ಮಹಾಭಾರತ ಯುದ್ಧದ ಎಲ್ಲ ಅಂಗಾರವೂ ಹಿಡಿದಂತಿದೆ. ಕುರುವಂಶದ ವೃದ್ಧಿಯ ಪ್ರತೀಕ ಭೀಷ್ಮ; ವಿನಾಶದ ಪ್ರತೀಕ ಕೂಡ ಅವನೇ ಎನಿಸುವಷ್ಟು ತೀವ್ರವಾಗಿದೆ ಅಂಬೆಯ ಸೇಡಿನ ಧಾರೆ. ಅವಳು ಭೀಷ್ಮನ ಪಾಲಿನ ದುರ್ಭಾಗ್ಯ ವಿಧಾತ್ರಿಯೇ ಎಂಬಂತಿದೆ. ಅವಳು ಇರುವಳೆಂದು ನಮಗೆ ಶಂತನುವಿನ ಲಂಪಟತ್ವ ಹಾಗೂ ಜಿಪುಣತನದ ಬಗ್ಗೆ ಸಿಟ್ಟುಬರುವುದಿಲ್ಲ. ಏನು ಘಟಿಸಿತೋ ಅದೆಲ್ಲ ಸ್ವಾಭಾವಿಕವೇ ಎಂಬಂತೆ ಸಹಜವಾಗಿ ಭೀಷ್ಮನು ಆ ಪ್ರಕರಣವನ್ನು ತನ್ನ ಮೈಮೇಲಿಂದ ಹರಿಯಗೊಟ್ಟನು. ಆದರೆ ಅದರ ಪ್ರತಿಕ್ರಿಯೆಯನ್ನು ತಡೆಯಲು ಅವನಿಂದ ಆಗಲಿಲ್ಲ. ಆ ಪ್ರತಿಕ್ರಿಯೆಯ ಹೆಸರೇ ಅಂಬೆ. ದುರ್ಬಲ ಸೋದರನಿಗಾಗಿ ಸ್ವಂತದ ಅತುಲ ಪರಾಕ್ರಮವನ್ನು ವ್ಯರ್ಥವಾಗಿ ಕಳೆದುಕೊಳ್ಳುವ ಈ ಪುರುಷನನ್ನು ಅಂಬೆಯು ಧಿಕ್ಕರಿಸಿದಳು. ಅವನ ಪೌರುಷಕ್ಕೆ ಆಹ್ವಾನ ಕೊಟ್ಟಳು. ಹರಣ ಮಾಡಿದ ಕನ್ಯೆಯನ್ನು ತಾನೇ ಗ್ರಹಿಸಬೇಕೆಂಬ ನೀತಿನಿಯಮವನ್ನು ಅವಳು ಎತ್ತಿಹಿಡಿದಳು. ತಾನು ಸಾಲ್ವನನ್ನು ಪ್ರೇಮಿಸುತ್ತಿದ್ದುದರಿಂದ ತನ್ನನ್ನು ಅಪಹರಿಸುವುದರ ಅನೌಚಿತ್ಯವನ್ನೂ ಅವನ ಅರಿವಿಗೆ ಬರುವಂತೆ ಮಾಡಿದಳು. ಆದರೆ ಈ ಘಟನೆಗಿಂತ ಮುಂಚೆಯೇ ಅವನು ಕಂಬನಿಗಳನ್ನು ಕಳೆದುಕೊಂಡು ಭಾವನೆಗಳಿಗೆ ಹೊರತಾಗಿಬಿಟ್ಟಿದ್ದನು. ಇದರ ಅರಿವು ಅವಳಿಗೆಲ್ಲಿ? ತ್ಯಾಗೋತ್ಪನ್ನವಾದ ಟೊಳ್ಳು ಸಹನೆಯನ್ನು ತುಂಬಿಕೊಳ್ಳುತ್ತ ಅವನು ಎಂದೋ ಕುಳಿತಿದ್ದ. ಈಗ ಅವನ ಬದುಕಿನಲ್ಲಿ ಸುಳಿಗಾಳಿ ಬಿರುಗಾಳಿಗಳಿದ್ದಿಲ್ಲ, ಬೆಳುದಿಂಗಳಿದ್ದಿಲ್ಲ, ಅಳಲು ಇದ್ದಿಲ್ಲ. ಯೌವನದ ಮೂರನೆಯ ಪ್ರಹರದಲ್ಲಿ ತನ್ನ ಜೀವನಕ್ಕೆ ಬಂದು ಅಪ್ಪಳಿಸಿದ ಈ ಕೊನೆಯ

ಬಿರುಗಾಳಿಯನ್ನು ನೋಡಿದಾಗ ಅವನು ಸಾವಧಾನನಾಗಿ ಉಳಿದು ಅಂಬೆಯನ್ನು ಬಿಟ್ಟುಕೊಟ್ಟನು. ಸ್ವತಃ ಅವನ ಪ್ರೀತಿ ಭಂಗವಾದದ್ದು ಎಲ್ಲೂ ಕಂಡುಬರುವುದಿಲ್ಲ. ಬಹುಶಃ ತಂದೆಯ ಆಯುಷ್ಯದಲ್ಲಿ ಪ್ರೇಮ ಮತ್ತು ಕಾಮಗಳ ಸಂಗತಿಯು ಇಂಥ ವಿಲಕ್ಷಣ ರೀತಿಯಲ್ಲಿ ಆದಮೇಲೆ ಪ್ರೀತಿಯ ಅಂಕುರವನ್ನೇ ಅವನು ಸುಟ್ಟು ಬೂದಿಮಾಡಿರಬೇಕು.

ಆದರೆ, ಅಂಬೆಯ ಪ್ರೇಮವೂ ಮಾನವೂ ಒಮ್ಮೆಗೇ ಭಂಗವಾದವು. ಸತ್ಯವತಿಗಿಂತ ಅಂಬೆ ಎಷ್ಟೋ ಶ್ರೇಷ್ಠಳು. ವಿಚಿತ್ರವೀರ್ಯನು ಮಡಿದಮೇಲೆ ಸತ್ಯವತಿಯು, ಅಂಬಿಕೆ ಅಂಬಾಲಿಕೆಯರೊಂದಿಗೆ ಸಹಶಯನ ಮಾಡಿ ನಿಯೋಗ ಪದ್ಧತಿಯಿಂದ ಪುತ್ರಜನನ ಮಾಡಿಸೆಂದು ಭೀಷ್ಮನಿಗೆ ಬಿನ್ನಹ ಮಾಡಿದ್ದಳು. ಆದರೆ ಸತ್ಯಪ್ರತಿಜ್ಞನಾದ ಅವನು ಅಂಬೆಗಿತ್ತ "ನ" ಕಾರಕ್ಕೆ ಈ ಎರಡನೆಯ "ನ" ಕಾರವು ಸಾಟಿಯಾಗದು. ಸತ್ಯವತಿಯ ಇಚ್ಛೆಯಿರುವ ತನಕ ಕುರುವಂಶವು ಕ್ಷಯಿಸುವುದು ಸಾಧ್ಯವಿರಲಿಲ್ಲ. ಭೀಷ್ಮನು ಒಲ್ಲೆನೆಂದುದರ ಯಾವ ಪ್ರತಿಕ್ರಿಯೆಯೂ ಆಗದೆ ಈ ಸಂಗತಿ ನಡೆದುಹೋಯಿತು – ತೀರ ಸಹಜವಾಗಿ. ಆದರೆ ಅಂಬೆಗಿತ್ತ ನಕಾರದ ಮೊದಲ ಘಟನೆಯಲ್ಲಿ ಮಾತ್ರ ಸ್ಫೋಟವಿತ್ತು.

ಭೀಷ್ಮನಿಗೂ ಶಿಖಂಡಿಯನ್ನು ಕಂಡು ಆ ಘಟನೆ ನೆನಪಾಯಿತು. ತನ್ನನ್ನು ಕುರಿತು ಎಂದೂ ಏನೂ ಆಡದ ಭೀಷ್ಮನು ಕೌರವರಿಗೆ ತನ್ನ ವ್ರತವನ್ನು ಅರುಹುತ್ತಾನೆ; ಅದೂ ತೀರ ಚುಟುಕದಲ್ಲಿ. ಆಮೇಲೆ ಅಂಬೆಯ ಕಥೆಯನ್ನು ಹೇಳುತ್ತಾನೆ. ತನ್ನ ತಾರುಣ್ಯದ ಒಂದೇ ಒಂದು ನೆನಪನ್ನು ಹೇಳುವಾಗ ಭೀಷ್ಮನಿಗೆ ಸುಖವೆನಿಸಿದಂತೆ ಕಾಣುತ್ತದೆ. ಅರ್ಜುನನ ಬಾಣದಿಂದ ಹೊರಟ ಗಂಗೆಯು ಅವನ ನೀರಡಿಕೆಯನ್ನು ಶಾಂತಮಾಡಿತು. ಅಂಬೆಯ ವೃತ್ತಾಂತ ದಿಂದಲೂ ಅವನಿಗೆ ಒಂದು ರೀತಿಯ ಸಮಾಧಾನ ದೊರೆತಿರಬೇಕೆಂದು, ಕಥಾನಕದ ಓಘದಿಂದ ಅನಿಸುತ್ತದೆ. ಭೀಷ್ಮನು ಒಮ್ಮೆ ತರುಣನಾಗಿದ್ದ ನೆಂಬುದರ ಕುರುಹು ಮಹಾಭಾರತದಲ್ಲಿ ಸಿಕ್ಕುವುದು ಇದೊಂದೇ ಕಡೆ. ಅಂಬೆಯ ತಪಸ್ಸಿನ, ಆಕೆ ತಾನಾಗಿಯೇ ತಂದುಕೊಂಡ ಮರಣದ ಅಂಥ ಆತ್ಮಹತ್ಯೆಯಂಥ ಆತತಾಯಿ ಮರಣವು ಮಹಾಭಾರತದಲ್ಲಿ ಇದೊಂದೇ ಅಲ್ಲ; ಅದರ ನೆನಪು ಜಾಗೃತವಾಗಿದ್ದುದರಿಂದಲೆ ಭೀಷ್ಮನು ದುರ್ಯೋಧನನನ್ನು ತಡೆಯಲಾರದಾದನೆ? ಅವನ ಕೆಟ್ಟಮಾತುಗಳನ್ನು ಸಹಿಸಲು ಶಕ್ತನಾದನೆ? ವಿಧಿಯು ತಪ್ಪದಂತಹದು; ಅಂಬೆಯೇ ವಿಧಿ – ಎಂದು ಅವನಿಗನಿಸಿರ ಲಿಕ್ಕಿಲ್ಲವಷ್ಟೆ?

ಮಹಾಭಾರತದ ಎಲ್ಲ ವ್ಯಕ್ತಿಗಳೂ ನಮ್ಮೆದುರು ನಿಜವಾಗಿಯೂ ನಿಲ್ಲುವುದು ಕೌರವ ಪಾಂಡವರ ತೀರ ತಾರುಣ್ಯದ ಭರದಲ್ಲಿ. ಆಗ ಭೀಷ್ಮನು ಆಯುಷ್ಯದ ಕರ್ತವ್ಯ ಮುಗಿಯಿತೆಂಬ ವೃತ್ತಿಯಲ್ಲಿರುತ್ತಾನೆ. ಆದರೂ ಅವನು ಯುದ್ಧಕ್ಕೆ ಹೂಡಿಕೊಂಡು ಸೇನಾಪತಿಯಾಗುತ್ತಾನೆ. ಅವನ ಮನಸ್ಸು ಪಾಂಡವರ ಕಡೆಗೆ; ಶರೀರ ಕೌರವರ ಕಡೆಗೆ. ಇವನು ನಮ್ಮ ಅನ್ನ ಉಂಡು ಪಾಂಡವರ ಪಕ್ಷಪಾತಿಯಾಗಿದ್ದಾನೆಂಬುದು ಧೃತರಾಷ್ಟ್ರ ದುರ್ಯೋಧನರ ಅನಿಸಿಕೆ. ಈ ಹಂಗಿಗತನವು ಭೀಷ್ಮನಿಗೆ ಅರಿವಾಗುತ್ತದೆ. ತನ್ನ ಔದಾರ್ಯದಿಂದ, ತಂದೆಗಿತ್ತ ದಾನದಿಂದ ಈ ಹಂಗಿಗತನವನ್ನು ಆತ ಸುಖದಿಂದ ಸ್ವೀಕರಿಸಿದನು. ಆದರೆ ಈಗ ಯುದ್ಧದ ಪ್ರಸಂಗ ಒದಗಿದಾಗ ಅವನ ಮುದಿ ಹೆಗಲಿಗೆ ಆ ಭಾರ ಸಹ್ಯವಾಗುವುದಿಲ್ಲ. ಯುದ್ಧಮಾಡಿ ಅದನ್ನು ತೆಗೆಯೊಗೆಯುವುದೆಂಬ ಗತಾನುಗತಿಕತೆ ಅವನಿಗೆ ಬಂದಿದೆ. ತಂದೆಗಾಗಿ ಏನನ್ನು ಆತ ಬಿಟ್ಟುಕೊಟ್ಟನೋ ಅದನ್ನು ಕಂಡು ನಮಗೆ ಅವನಲ್ಲಿ ದಯೆ ಬರುವುದಿಲ್ಲ, ಕೌತುಕವೆನಿಸುತ್ತದೆ. ಆ ವಚನದ ಪರಿಪಾಕದ ಪರಿಣಾಮವೆಂದರೆ ಅವನ ಬಗೆಗೆ ಕೇವಲ ಮರುಕತೋರಿಸುವುದು. "ನಿಮ್ಮ ಮನಸ್ಸು ಪಾಂಡವರ ಕಡೆಗಿರುವುದರಿಂದ ನೀವು ಮನಸ್ಸಿಟ್ಟು ಯುದ್ಧ ಮಾಡುವುದಿಲ್ಲ"ವೆಂಬುದಾಗಿ ದುರ್ಯೋಧನನು ಮಾಡಿದ ದೂಷಣೆಯನ್ನು ತೊಡೆದು ಹಾಕಲು ಅವನು ತನ್ನ ಎಲ್ಲ ಬಲವನ್ನೂ ಯುದ್ಧದಲ್ಲಿ ಎರೆಯುತ್ತಾನೆ; ಪ್ರತಿಜ್ಞೆ ಮಾಡುತ್ತಾನೆ. ಕೃಷ್ಣ ಮಹಾಚತುರ; ತನ್ನ ಪ್ರತಿಜ್ಞೆಯನ್ನು ಮುರಿದು ಭೀಷ್ಮಪ್ರತಿಜ್ಞೆಯನ್ನು ಕಾಪಾಡುತ್ತಾನೆ. ಅರ್ಜುನನ ಮೂರ್ಛೆಯೆಂಬುದನ್ನು ಭೀಷ್ಮನ ಪೂರ್ವಪರಾಕ್ರಮಕ್ಕೆ ಪ್ರತೀಕವೆನಿಸುವಂತೆಯೇ ವ್ಯಾಸರು ಬಳಸಿದ್ದಾರೆ. ನಿಜವಾದ ಕಾರಣವನ್ನು, ಬಲ್ಲವರು ಗುರುತಿಸಬಲ್ಲರು. ಪಿತಾಮಹರು ಜೀವಹಿಂಡಿ ಹೋರಾಡುತ್ತಿದ್ದಾರೆ, ಭಾರೀ ಕೌಶಲದಿಂದ ಹೋರಾಡುತ್ತಿದ್ದಾರೆ, ಆದರೆ ಅವರ ಹೋರಾಟದ ದಿನಗಳು ಈಗ ತೀರಿವೆ; ದೇಹ ದಣಿದಿದೆ – ಎಂಬ ಆದರ ಭೀಷ್ಮನ ಬಗ್ಗೆ ಎಲ್ಲರಿಗೂ ಇದೆ. ಆದರೆ ಅವನ ಆತಂಕ, ಭೀತಿ ಯಾರಿಗೂ ಇಲ್ಲ. ಇದರ ಅರಿವು ಯಾರಿಗಾದರೂ ಇದ್ದರೆ ಅದು ಭೀಷ್ಮನಿಗೇ ಹೆಚ್ಚು. ಏಕೆಂದರೆ ದುರ್ಯೋಧನನು ಚುಚ್ಚಿನುಡಿದಾಗ ಆತ ಕೆರಳಿ, "ನಾನು ಮುದುಕ, ನನ್ನಿಂದ ಆಗುವುದನ್ನು ನಾನು ಮಾಡಿಯೇ ಮಾಡುತ್ತೇನೆ. ಆದರೆ ಪಾಂಡವರು ಅಜೇಯರು. ಅದೇನೇ ಇರಲಿ ಈಗ ನನ್ನ ಪರಾಕ್ರಮವನ್ನು ನೋಡು" ಎನ್ನುತ್ತಾನೆ.

ಅರ್ಜುನನಿಗೆ ಮಾತ್ರ ಭೀಷ್ಮನೊಡನೆ ಕಾದಾಡುವಾಗ ಏನೇನೋ ಅನಿಸಿತು. ಏಕೆಂದರೆ ಭೀಷ್ಮನು ಆರಂಭದಲ್ಲಿಯೇ, "ಮಗುವೇ, ನಿನ್ನನ್ನು ನೋಡಿ ನನಗೆ ಆನಂದವೆನಿಸುತ್ತಿದೆ; ಯುದ್ಧಮಾಡು; ಜಯಸಂಪಾದಿಸು" ಎಂದು ಅಂದಿದ್ದನು. ಅದಕ್ಕೆ ಅರ್ಜುನನು, "ನಿಮ್ಮನ್ನು ಜಯಿಸದೆ ಯುದ್ಧದಲ್ಲಿ ಗೆಲ್ಲುವದು ಹೇಗೆ ಹೇಳಿ" ಎಂದಿದ್ದನು.

ಇಲ್ಲಿ ಭೀಷ್ಮನ ಕಣ್ಣಮುಂದೆ ತಾರುಣ್ಯದ ಚಿತ್ರವೇ ನಿಂತಂತೆ ಆಗುತ್ತದೆ. ಶಸ್ತ್ರದ ಸ್ಪರ್ಶದಿಂದ ಅವನು ಮತ್ತೆ ಗತಕಾಲದ ರಣರಂಗದ ಅನುಭವವನ್ನು ಪಡೆಯುತ್ತಾನೆ. ಅವನು ಹೇಳುವ, "ನನ್ನನ್ನು ಜಯಿಸುವವರು ಯಾರೂ ಇಲ್ಲ, ಆದರೆ ನನ್ನನ್ನು ಜಯಿಸದ ಹೊರತು ನನಗೆ ಮೃತ್ಯುವೂ ಇಲ್ಲ" ಎಂಬ ಎರಡು ಮಾತುಗಳಲ್ಲಿ ಎರಡು ಕಾಲಗಳ ಸಂದನ್ನು ವ್ಯಾಸರು ಜೋಡಿಸಿದ್ದಾರೆ. ಭೀಷ್ಮನ ಬಲ, ಅವನ ಸಮಗ್ರ ಜೀವನ ಕಾರ್ಯದ ವೈಫಲ್ಯ –ಇವುಗಳ ಸಾರವು ಈ ಸಂದಿನಲ್ಲಿದೆ. ಭೀಷ್ಮನು ದುರ್ಯೋಧನನ ಮೇಲೆ ಆಗಾಗ ರೇಗುತ್ತಾನೆ. ದುರ್ಯೋಧನನನ್ನು ಅಂಕೆಯಲ್ಲಿರಿಸು ಎಂದು ಧೃತರಾಷ್ಟ್ರನಿಗೂ ಹೇಳುತ್ತಾನೆ. ಆದರೆ ಯಾರೂ ಅವನ ಮಾತು ಕೇಳುವುದಿಲ್ಲ. ಪಾಂಡವರು ಅಡವಿಗೆ ಹೋದಾಗ ಭೀಷ್ಮನಿಗೆ ಬಹಳ ದುಃಖವಾಯಿತು.

ಗೋಗ್ರಹಣದ ಪ್ರಸಂಗದಲ್ಲಿ ಭೀಷ್ಮನು ಅರ್ಜುನನಿಂದ ಸೋಲುಂಡನು. ಅವನು ಓಡಿಹೋಗಬೇಕಾಗಿ ಬಂತು. ಹಾಗೆಯೇ ದ್ರೋಣನೂ. ಆದರೆ ಭೀಷ್ಮನು ಮನಸ್ಸಿನ ಸಮತೋಲವನ್ನು ಬಿಡಲಿಲ್ಲ. ಯುದ್ಧ ತಪ್ಪಿಸಬೇಕೆಂದು ಅವನು ಕೊನೆಯ ತನಕವೂ ಯತ್ನಿಸಿದನು. ಗೋಗ್ರಹಣದ ಪ್ರಸಂಗದ ಅನಂತರ ಒಂದು ವರ್ಷ ಕೌರವರಿಗೆ ಅಭಯ ನೀಡಬೇಕೆಂಬ ವಚನವನ್ನು ಅವನು ಪಾಂಡವರಿಂದ ಪಡೆದನು. ಉಂಡ ಅನ್ನದ ನಿಷ್ಠೆಯನ್ನು ಕಾಪಾಡಲು ಈ ರೀತಿ ಆತ ಪರಾಕಾಷ್ಠೆಯ ಪ್ರಯತ್ನ ಮಾಡಿದನು.

ತಂದೆಯ ವಂಶಜರ ಕಲ್ಯಾಣವನ್ನು ಮಾಡುವ ಸಲುವಾಗಿ ಅವನು ಗರ್ಭಿಣಿಯದೇ ವ್ರತವನ್ನು ಅಂಗೀಕರಿಸಿದಂತೆ ಇತ್ತು. ಶರತಲ್ಪದ ಮೇಲೆ ಒರಗಿದಾಗ ಅವನು ಯುಧಿಷ್ಠಿರನಿಗೆ ಅನೇಕ ಧರ್ಮಗಳನ್ನು ವಿವೇಚಿಸಿ ಹೇಳುತ್ತಾನೆ. ಅದರಲ್ಲಿ ರಾಜಧರ್ಮವನ್ನು ಕುರಿತು ಮಾತಾಡುವಾಗ ಅವನು, "ರಾಜನು ಗರ್ಭಿಣಿಯ ಅನುಕರಣ ಮಾಡಬೇಕು. ಗರ್ಭಿಣಿಯು ಸ್ವಂತದ ಪ್ರಿಯವನ್ನು ನೋಡುವುದಿಲ್ಲ. ಮನ ಬಂದಂತೆ ಮಾಡುವುದಿಲ್ಲ. ಕೇವಲ ಗರ್ಭದ ಹಿತವನ್ನು ನೋಡುತ್ತಾಳೆ" ಎನ್ನುತ್ತಾನೆ.

ಕುರುವಂಶವನ್ನು ತನ್ನ ಗರ್ಭವೆಂಬಂತೆ ತಿಳಿದು ಭೀಷ್ಮನು ತನ್ನನ್ನೂ ಮರೆತು, ಬಾಳಿನುದ್ದಕ್ಕೂ ಅದನ್ನು ಸಂಬಾಳಿಸುತ್ತ ಉಳಿದನು. ಆದರೆ ಆ ಸಂಬಾಳಿಕೆಯು ವ್ಯರ್ಥವಾಗಿ ಹೋಯಿತು. ಅವನು ಗಳಿಸಿದ್ದೇನು? ಗರ್ಭಪಾತ ವಾದರೂ ಅಳಲಾರದ ವರದಾನ. ಅದೇ ನಿಜ. ಭೀಷ್ಮ ಬಿದ್ದಾಗ ಎಲ್ಲರೂ ಅತ್ತರು. ಆತ ಇಚ್ಛಾಮರಣಿ. ಶರತಲ್ಪದ ಮೇಲೆ ಆತ ಒರಗಿದ. ಯುದ್ಧ ಮುಗಿಯುವವರೆಗೂ ಆತ ಎಚ್ಚರವಾಗಿದ್ದ. ಆ ಎಚ್ಚರ, ಎಂದೂ ಮುಗಿಯದ್ದು. ಅದು ಅವನಿಗೆ ದೊರೆತ ವರವೋ ಶಾಪವೋ ತಿಳಿಯುವುದಿಲ್ಲ.

ಭೀಷ್ಮನ ಬಗ್ಗೆ ಎಲ್ಲರೂ ಅತ್ತರು. ಆದರೂ ಆತ ಎಂದೂ ಯಾರ ಬಗ್ಗೆಯೂ ಅಳಲು ಶಕ್ತನಾಗಲಿಲ್ಲ. ಶರಶಯ್ಯೆಯಲ್ಲಿ ಅವನು ಒಂದು ವಿಶಿಷ್ಟ ತಂದ್ರಾವಸ್ಥೆಯಲ್ಲಿಯೇ ಇದ್ದನು. ತನಗೆ ಬರುವ ಎಲ್ಲ ಧರ್ಮ ವಿಚಾರಗಳನ್ನೂ ಅವನು ಯುಧಿಷ್ಠಿರನಿಗೆ ಕೊನೆಗೆ ಅರುಹಿದನು. ವ್ಯಾವಹಾರಿಕ ಹಾಗೂ ಆಧ್ಯಾತ್ಮಿಕ ಮಾರ್ಗದ ಎಲ್ಲ ಪಾರಂಪರಿಕ ಸಿದ್ಧಾಂತಗಳೂ ಅವನಿಗೆ ಗೊತ್ತಿದ್ದುವೆಂಬುದೇನೂ ಆಶ್ಚರ್ಯವಲ್ಲ. ಪಾಂಡಿತ್ಯದ ಎಂತಹ ಪ್ರಚಂಡ ಸಂಗ್ರಹ ಅವನಲ್ಲಿತ್ತು ಎಂಬುದಕ್ಕೆ ಶಾಂತಿಪರ್ವ ಮತ್ತು ಅನುಶಾಸನ ಪರ್ವಗಳು ಸಾಕ್ಷಿ ನೀಡುತ್ತವೆ. ಭೀಷ್ಮನ ಮರಣವನ್ನು ಮುಂದೂಡುವುದು, ಅವನ ಜ್ಞಾನಭಂಡಾರವನ್ನು ಬುಡಮಟ್ಟ ತೋಡುವುದು ಈ ಎರಡು ಕ್ರಿಯೆ ಗಳಲ್ಲಿಯೇ ವ್ಯಾಸರು ಅವನ ಬದುಕಿನ ಶುಷ್ಕತೆಯ ದಿಗ್ದರ್ಶನವನ್ನು ಮಾತಿಲ್ಲದೆ ಚೆನ್ನಾಗಿಯೇ ಮಾಡಿದ್ದಾರೆ. ಅವನ ಕ್ಷಣಕ್ಷಣಗಳೂ ಜ್ಞಾನಶೇಖರಣೆಯಲ್ಲೇ ಕಳೆಯಿತಾದರೂ ಅವನ ಚಿಂತನಕ್ಕೆ ಅಳಿವಿಲ್ಲ. ವಿಸ್ತಾರದ ಈ ಪ್ರೀತಿಯಿಂದಲೇ ಆಳವಾಗಿ ಭಾವನೆಗಳಲ್ಲಿ ಮುಳುಗುಹಾಕುವ ಪ್ರವೃತ್ತಿಯು ಅವನಲ್ಲಿ ಸಂಕೋಚಗೊಂಡಿರಬಹುದೇ? ಭೀಷ್ಮನು ಶರಶಯ್ಯೆಯಲ್ಲಿ ಎಲ್ಲರ ಸಾವಿನ ವಿಚಾರವನ್ನು ಕೇಳಿ ತಿಳಿದನು. ಆದರೆ ಅವನೇ ಆ ಸಮಯದಲ್ಲಿ ಸಾವಿನ ಮಡಿಲಲ್ಲಿದ್ದನು. ಆಗ ಅವನಿಗೆ ಶೋಕವಾಗುವುದು ಒಂದು ರೀತಿ ಸ್ವಾಭಾವಿಕವೇ ಆಗಿತ್ತು. ದ್ರೋಣನಿಗೆ ಆಗಿರಲಿಲ್ಲವೇ? ಘಟೋತ್ಕಚನಿಗೆ ಆಗಿರಲಿಲ್ಲವೆ? ಅರ್ಜುನನಿಗೆ ಆಗಿರಲಿಲ್ಲವೆ? ದುರ್ಯೋಧನನಿಗೆ ಆಗಿರಲಿಲ್ಲವೆ? ಆದರೆ ಭೀಷ್ಮನ ಜಾತಿಯೇ ಬೇರೆ. ಕಂಬನಿ ಕಳೆದುಕೊಂಡು ಕುಳಿತ ಜಾತಿ ಅದು! ತಂದೆಯ ಪ್ರತಿಜ್ಞೆಯ ಮೂಲಕ ಅವನು ಕಣ್ಣೀರಿನ ವರದಾನವನ್ನು ಕಳೆದುಕೊಂಡನು. ಆದರೂ ಸೋಜಿಗವೇನೆಂದರೆ ತಂದೆಯ ಸರ್ವಸ್ವವನ್ನೂ ಅವನ ವಾರಸುದಾರರಿಗೆ ಕೊಡುವ ವಾಡಿಕೆಯನ್ನು ಮಾತ್ರ ಅವನು ಕೊನೆಯ ತನಕವೂ

ಬಿಡಲಿಲ್ಲ. ಕೊನೆಗೆ ಉಳಿದದ್ದು ಜ್ಞಾನ. ರಾಜಧರ್ಮದ ವಿವರಣೆಯನ್ನು ಮುಗಿಸಿ ಯುಧಿಷ್ಠಿರನಿಗೆ ಆತ ಹೇಳುತ್ತಾನೆ, "ನನ್ನ ತಂದೆ ಶಂತನು ನನಗೆ ಈ ರಾಜಧರ್ಮವನ್ನು ಹೇಳಿದ. ಅದನ್ನು ನಾನು ನಿನಗೆ ಹೇಳುತ್ತೇನೆ" ಎಂದು. ಅದೊಂದು ವಾರಸ ಸೊತ್ತು ಅವನಲ್ಲಿ ಬಾಕಿ ಉಳಿದಿತ್ತು. ಅದನ್ನು ಕುರುವಂಶದ ವಾರಸುದಾರನಿಗೆ ಕೊಟ್ಟು ಆತ ಪೂರ್ತಿ ಬರಿದಾದರೂ ಕೃಷ್ಣನ ದರ್ಶನದ ಧನ್ಯತೆಯನ್ನು ಆ ಋಣಪ್ರದಾನದಲ್ಲಿ ಅನುಭವಿಸುತ್ತ ಆತ ದೇಹವಿಟ್ಟನು.

ಭೀಷ್ಮನ ಅತಿ ದೀರ್ಘಜೀವನ, ಅದರಷ್ಟೇ ತಡೆದು ಸರಿದ ಸಾವು, ಯಾವಾಗಲೂ ತಗ್ಗಿರುವ ಅವನ ತಲೆ, ಸದಾ, ಪರರ ದುಃಖವನ್ನು ಕಂಡು ಹಳ ಹಳಿಸುವ ಒಣಕಣ್ಣು, ಸಿಟ್ಟಿನ ಉದ್ಗಾರಗಳು, – ಬಂದರೂ ಅವು ಬರಿಯ ಒಣ ತರಗೆಲೆಗಳ ಸಳಪಳ ಸಪ್ಪಳದಂತೆ – ಈ ಎಲ್ಲ ಸಂಗತಿಗಳು ವಿಶೀರ್ಣತೆಯ ದ್ಯೋತಕವಾಗಿವೆ. ಕಂಬನಿ ಕಳೆದುಹೋದ ಮೇಲಿನ ಒಂದು ಅನನುಭೂತ ಅವಸ್ಥೆಯನ್ನು ವ್ಯಾಸರು ಭೀಷ್ಮನ ರೂಪದಲ್ಲಿ ಚಿತ್ರಿಸಿದ್ದಾರೆ. ಪರಾಶರನ ಸ್ಖಲನದಿಂದ, ಶಂತನುವಿನ ನಿರ್ಲಜ್ಜ ಕಾಮವಾಸನೆಯಿಂದ, ಆಗದ ಅವೆಲ್ಲವೂ ಭೀಷ್ಮನ ನಿಷ್ಕಲ ಅಸೂಯಾರಹಿತ ವೃತ್ತಿಯಿಂದ ಹುಟ್ಟುವುದು ಎಂಥ ವಿಚಿತ್ರ! ಅವನ ಬ್ರಹ್ಮಚರ್ಯದಿಂದ, ವ್ರತನಿಷ್ಠೆಯಿಂದ, ವಿಚಿತ್ರವೀರ್ಯನ ವ್ಯಂಗವಾಗಿದ್ದ ಸಂತತಿಯು ನಿಯೋಗ ಪದ್ಧತಿಯಿಂದ ನಿರ್ಮಾಣವಾಗಬೇಕು. ಆ ವ್ಯಂಗವು ಮುಂದಿನ ಎಲ್ಲ ಘೋರ ಘಟನೆಗಳಿಗೆ ಮಾತ್ರ ಜನ್ಮವೀಯಬೇಕು; ಇದು ಎಷ್ಟೊಂದು ವಿಲಕ್ಷಣವಾದುದು!

ಮುಂದಿನ ತಲೆಮಾರಿನಲ್ಲಿ ಅಂಧತ್ವ, ಅಪಮೃತ್ಯು, ಇನ್ನೂ ವಿಲಕ್ಷಣ ವಿರೋಧೀ ಗುಣದೋಷಗಳು ನಿರ್ಮಾಣವಾಗಿ ಎಲ್ಲ ಮಹಾಭಾಗರೂ ಖಲ ಪುರುಷರೂ ಒಂದೇ ಪಾತಳಿಯ ಮೇಲೆ ಬರಬೇಕೆಂಬ ಸಂಕೇತವು ಹಿಂದೆ ಸರಿಯುತ್ತ ಕೇವಲ ಭೀಷ್ಮನಿಗೇ ಹೋಗಿ ನಾಟುತ್ತದೆ. ಪ್ರತ್ಯಕ್ಷ ಜನ್ಮದಾತೃಗಳು ಜಾರುತ್ತಾರೆ. ಆದರೆ ಪಾಲಕರು ಮಾತ್ರ ಎಲ್ಲ ಭೋಕ್ತೃ ತತ್ತ್ವವನ್ನೂ ತಪ್ಪದೆ ಭೋಗಿಸುತ್ತ ಇರುತ್ತಾರೆ. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿ ಸಂತತಿಯ ಬಯಕೆ ಎಲ್ಲ ಮಾನವೀ ಕಾಮನೆಗಳಲ್ಲಿ ಪ್ರಧಾನವಾಗಿದೆ. ಮಕ್ಕಳು, ಮೊಮ್ಮಕ್ಕಳು – ಇವರ ಮೇಲೆಯೇ ಗೃಹಸ್ಥಾಶ್ರಮದ ಶ್ರೇಯಸ್ಸು ಆಧಾರ ಪಟ್ಟಿದೆ. ಸೋಜಿಗವೇನೆಂದರೆ ಪ್ರಾಚೀನ ಸಾಹಿತ್ಯದ ಅಪಾರ ಸಂಸಾರದಲ್ಲಿ, ತಾತ ಮೊಮ್ಮಕ್ಕಳ ಪ್ರೇಮ ಪ್ರಸಂಗಗಳದ್ದಿರಲಿ, ಯಾವುದೇ ವಿಶಿಷ್ಟ ರೀತಿಯ

ಪಿತಾಮಹನ ಉಲ್ಲೇಖವೂ ಇರುವುದಿಲ್ಲ. ಭೀಷ್ಮನೊಬ್ಬನೇ ಏಕಮೇವ ಪಿತಾಮಹ. ಅದೂ ಆತ ಪಿತಾಮಹನಾಗಿರುವುದು, ತನ್ನ ಗುಣಬಾಹುಲ್ಯ ದಿಂದಲೇ ಹೊರತು ಸಂಸಾರದ ಪರಂಪರೆಯಿಂದಲ್ಲ. ಮಗನೆಂದು ಸೋದರ ನೆಂದು ಚಿಕ್ಕಪ್ಪನೆಂದು ತಾತನೆಂದು ಸಂಬಂಧವನ್ನು ಭೀಷ್ಮನು ಕಾಪಾಡಿದ ಹಾಗೆ ಬೇರೆ ಯಾರೂ ಕಾಪಾಡಲಿಲ್ಲ. ಆದಾಗ್ಯೂ ವಿಶೀರ್ಣತೆಯ ದೈವಗತಿಯಿಂದ ಕಟ್ಟಲ್ಪಟ್ಟ ಮೂಲಕ ಅವನ ಪ್ರತಿಯೊಂದು ಕೃತಿಗೆ ತಾಜಾ ಬಣ್ಣ ಬಳಿಯಲು ವ್ಯಾಸರಿಗೆ ಬರಲಿಲ್ಲ. ಬಣ್ಣ ಅಳಿಸಿದ, ಕೆಲವೆಡೆ ಅಲ್ಲಲ್ಲಿ ತುಂಡರಿಸಿದ ಪ್ರಾಚೀನ ಕಲಾಕೃತಿಯ ಹಾಗೆ ಭೀಷ್ಮನ ಆಕೃತಿಯನ್ನು ವ್ಯಾಸರು ರೂಪಿಸಿದ್ದಾರೆ. ಈ ಬಣ್ಣ ಹಾರಿದ, ನಿಶ್ಶಬ್ದ, ಆದರೆ ಅರಿವು ಪರಿಪೂರ್ಣವಿರುವ ಪಿತಾಮಹನ ಸುತ್ತಲೂ ಯುದ್ಧದ ಭೇತಾಳಕುಣಿತದಲ್ಲಿ ರಂಗು ರೇಖೆಗಳಿಂದ ಸಜ್ಜಾದ ಎಲ್ಲ ಆಕೃತಿಗಳೂ ತಿರುಗುತ್ತವೆ. ಆದ್ದರಿಂದಲೇ ಯುದ್ಧ ಮುಗಿಯುವವರೆಗೂ ಭೀಷ್ಮನು ಸಾಯಲಿಲ್ಲ. ನಾನಾ ಪ್ರಕಾರದ ನೀತಿತತ್ವಗಳನ್ನು ಇಷ್ಟು ಉದ್ದುದ್ದವಾಗಿ ಅವನ ಬಾಯಿಯಿಂದ ಹೇಳಿಸುವಲ್ಲಿ ವ್ಯಾಸರ ಉದ್ದೇಶವು, ಮೂಲದ ಆಕೃತಿ ಬಂಧವು ಸ್ಥಿರವಾಗಿ ಉಳಿಯಬೇಕೆಂಬುದಷ್ಟೇ ಇರಬೇಕು. ಆದರೆ ತೋಲ ತಪ್ಪಬಾರದು. ಉದ್ದಾಮ, ಉಚ್ಛೃಂಖಲ, ಅನಿರ್ಬಂಧ, ಸ್ಖಲಿತವಿದ್ದುದೆಲ್ಲವೂ ಒಂದೇ ಪಾತಳಿಯಲ್ಲಿರಬೇಕು. ಭೀಷ್ಮನು ಹೋದನು. ಯುಧಿಷ್ಠಿರ ರಾಜನಾದನು. ಆ ವಿಶೀರ್ಣತೆ ಹೋಯಿತು. ಅದರೊಂದಿಗೇ ಯುದ್ಧದ ಮೂಲಕ ಉಂಟಾದ ಬಿಗಿ ಸೆಳೆತವೂ ಹೋಯಿತು. ಮಹಾಭಾರತದ ನಾಟ್ಯಕ್ಕೂ ಇಳುಕಲು ಹಿಡಿಯಿತು.



# ಮಾನವರಲ್ಲಿ ಕರಗಿಹೋದ ಮಾನವ

ಮಹಾಭಾರತದಲ್ಲಿ ಸತ್ಯದ ದೈನಂದಿನ ನೀತಿತತ್ತ್ವವನ್ನು ದ್ರೌಪದಿಯು ಉದ್ವೇಗಭರದಲ್ಲಿ ಆಡಿಬಿಡುತ್ತಾಳೆ. ಆದರೆ ಆ ಆಹ್ವಾನವನ್ನು ನಾಲ್ವರು ಪುರುಷರು ನಾಲ್ಕು ರೀತಿಯಲ್ಲಿ ಸಾಕಾರವಾಗಿಸಿ ತೋರಿಸಬೇಕಾಗುತ್ತದೆ. ಕೃಷ್ಣನು ಅರ್ಧಪಾರ್ಥಿವ, ಅರ್ಧದೈವೀ ಸ್ವರೂಪದಲ್ಲಿ ಅದರ ಸ್ಪಷ್ಟೀಕರಣಕ್ಕಾಗಿ ಸಮಗ್ರ ತತ್ತ್ವಜ್ಞಾನವನ್ನು ಖರ್ಚು ಮಾಡುತ್ತಾನೆ. ಯುಧಿಷ್ಠಿರನು ಭಾವನೆಗಳಲ್ಲಿ ಮುಳುಗು ಹಾಕುತ್ತ ಹಾಕುತ್ತ ಕೊನೆಗೂ ಅದರ ಹತ್ತಿರಕ್ಕೆ ಹೋಗುತ್ತಾನೆ. ಭೀಷ್ಮನು ಬಹಳ ಮೂಕನಾಗಿ ಯುದ್ಧದ ಜ್ವಾಲೆಯಲ್ಲಿ ಸ್ವತಃ ಸುಟ್ಟು ಕಮರಿ ಹೋಗುತ್ತ ಭೂತಕಾಲದ ಆಧಾರವನ್ನು ಹಿಡಿದುಕೊಂಡು ಹಿಡಿದುಕೊಂಡು ಪಾರಂಪರಿಕ ಅಧ್ಯಾತ್ಮ ಮತ್ತು ವ್ಯವಹಾರ ಇವುಗಳಲ್ಲಿ ಅಂತರ್ಧಾನ ನಾಗುತ್ತಾನೆ. ಆ ಗೂಢಪ್ರಶ್ನೆಯ ಸುತ್ತಲೂ ಆತ ಬರೀ ಗಿರಕಿ ಹಾಕುತ್ತ

ಇರುತ್ತಾನೆ. ವಿದುರನು ಅದನ್ನು ಮನದಾಳದಲ್ಲಿ ಅರಿತಿರುತ್ತಾನೆ. ಆದರೆ ಅವನ ವೃತ್ತಿಯೇ ಎಷ್ಟು ಲೀನವಾದದ್ದೆಂದರೆ, ಪರಂಪರೆಯು ಅವನ ಅರಿವಿಗೆ ಮಾತು ಮೂಡಲು ಬಿಡುವುದಿಲ್ಲ. ವಿದುರನ ಈ ಮರ್ಯಾದಿತ ತಿಳುವಳಿಕೆಯಲ್ಲಿಯೇ ಆ ಅರ್ಧಸ್ಫುಟ ಸತ್ಯವು ಎಂದಾದರೊಮ್ಮೆ, ದಿಟ್ಟಿಸಿ ನೋಡುವವನಿಗೆ ತೋರುತ್ತದೆ. ಹುಲ್ಲಿನ ಹೂವಿನ ಅರಳಿನಂತೆ ವಿದುರನ ಮನಸ್ಸಿನ ವಿಕಸನವನ್ನು ವ್ಯಾಸರು ಕಾಣಿಸಿದ್ದಾರೆ.

ವಿದುರನೂ ಪಂಡಿತ. ಬರಿಯ ಪಂಡಿತನಷ್ಟೇ ಅಲ್ಲ, ಮಹಾಪಂಡಿತನಂತೆ. ಅವನ ವಾಣಿಯು ಮಹಾಭಾರತದಲ್ಲಿ ಉದ್ದಗಲಕ್ಕೆ ಹರಡಿದೆ; ಆದರೆ ಜಡವಾಗಿ ಬಿದ್ದಿಲ್ಲ. ಗಾಳಿಯ ಲಹರಿಯಂತೆ ನಡುನಡುವೆ ಬರುತ್ತದೆ. ಕಟ್ಟಿಹೋಗಿದ್ದ ವಾತಾವರಣದಲ್ಲಿ ಸ್ವಚ್ಛವಾಗಿ ಗಾಳಿಯಾಡುವಂತೆ ಮಾಡಿ ಹೊರಟು ಹೋಗುತ್ತದೆ. ವಿದುರನು ಸ್ವಚ್ಛಂದಿ, ಆದರೆ ಸ್ವೈರನಲ್ಲ. ನಿಯಮದ ಭೋಕ್ತ, ಆದರೆ ದಾಸನಲ್ಲ. ಅವನು ಎಲ್ಲಿ ಬರುವನೋ ಅಲ್ಲಿ ಆತ್ಮ ಪರೀಕ್ಷಣೆ ಮಾಡುವ ಸ್ವಚ್ಛ ಮನಸ್ಸು ಬರುತ್ತದೆ, ಸಾಂತ್ವನ ಬರುತ್ತದೆ. ಏಕೆಂದರೆ ಅವನು ಸತ್ತಾವಿಹೀನ ಒಳಿತಿನ ಪ್ರತೀಕವಾಗಿದ್ದಾನೆ. ಭೀಷ್ಮನ ಒಳ್ಳೆಯತನವು ಉಗ್ರವಾಗಿತ್ತು, ಯುಯುತ್ಸುವಿನ ಸಂನ್ಯಾಸದಂತಿತ್ತು. ಅವನ ಒಳ್ಳೆಯತನದ ಪ್ರತಿಕ್ರಿಯೆಯೂ ಅಷ್ಟೇ ಉಗ್ರವಾಗಿತ್ತು. ಆದರೆ ವಿದುರನ ಒಳ್ಳೆಯತನವಾದರೋ ಕೇವಲ ಸಜ್ಜನಿಕೆಯೇ ಆಗಿತ್ತು. ಅಲ್ಲಿ ಆಳ್ವಿಕೆಯಿದ್ದಿಲ್ಲ, ಪದವಿಯಿದ್ದಿಲ್ಲ, ಐಶ್ವರ್ಯ ವಿದ್ದಿಲ್ಲ. ಆದರೂ, ಯಾರ ಕೈಯಲ್ಲಿ ಆಡಳಿತ ಸೂತ್ರವಿರುತ್ತದೆಯೋ ಅವರಿಗೆ ವಿದುರನಿದಿರು ತಾವು ದುರ್ಬಲರೆಂಬ ಅರಿವು ಯಾವಾಗಲೂ ಆಗುತ್ತಿತ್ತು. ವಿಶುದ್ಧ ಒಳ್ಳೆಯತನದಲ್ಲಿ ಎಷ್ಟೊಂದು ತೇಜಸ್ಸಿರುತ್ತದೆಂಬುದಕ್ಕೆ ವಿದುರನು ಉತ್ತಮ ಉದಾಹರಣೆಯಾಗಿದ್ದಾನೆ.

ಧೃತರಾಷ್ಟ್ರ, ಪಾಂಡು ಮತ್ತು ವಿದುರ ಮೂವರೂ ಅಣ್ಣತಮ್ಮಂದಿರು. ಆದರೆ ಮೂವರಲ್ಲೂ ಭೌತಿಕನಿಯತಿಯಲ್ಲಿ ಏನೋ ಒಂದು ರೀತಿಯ ಊನ ಉಳಿದುಹೋಗಿತ್ತು. ಮೊದಲಿನವರಿಬ್ಬರೂ ರಾಣಿಯರ ಮಕ್ಕಳೆಂದು ರಾಜಪುತ್ರರು. ವಿದುರನು ದಾಸೀಪುತ್ರನೆಂದು ಹಿಂದೆಹಿಂದೆಯೇ ಉಳಿದನು. ಆದರೂ ರಾಜಪರಿವಾರದಲ್ಲಿಯೇ ಬೆಳೆದವನು. ಮೂವರ ಪೈಕಿ ಶಾರೀರಿಕವಾಗಿ ಊನವಿಲ್ಲದವನು ಅವನೇ. ಅಂಗಹೀನನಾದವನು, ಆಡಳಿತಸೂತ್ರವನ್ನೇ ಹೊಂದಿರಲಿ, ಧನವನ್ನೇ ಹೊಂದಿರಲಿ, ಪುತ್ರಪೌತ್ರರನ್ನೇ ಹೊಂದಿರಲಿ ಮನಸ್ಸಿನ ಒಳಗೊಳಗೇ ಹೇಗೆ ಕೊರಗುತ್ತಿರುತ್ತಾನೆಂಬುದನ್ನು ಧೃತರಾಷ್ಟ್ರನ

ರೂಪದಲ್ಲಿ ವ್ಯಾಸರು ತೋರಿಸಿದರು. ವಿದುರನಿಗಾದರೋ ಜೀವನದಲ್ಲಿ ನೀಚಸ್ಥಾನವಿದ್ದರೂ ಶಾರೀರಿಕ ಹಾಗೂ ಮಾನಸಿಕ ಸಾಮರ್ಥ್ಯವು ಅಗಾಧ ವಾಗಿದೆ. ಆದರೆ ಅವನ ವೃತ್ತಿಮಾತ್ರ ಕ್ಷತ್ರಿಯನದಲ್ಲ. ಅವನು ಬ್ರಾಹ್ಮಣನ ಮಗ ಆದರೆ ಬ್ರಾಹ್ಮಣನಲ್ಲ. ಅವನ ಸ್ಥಾನವು ಸೂತ, ಚಾರಣ, ಮಾಗಧ ಇಂತಹವರ ರೀತಿಯದು. ಆದರೆ ವಿದುರನು ಬರಿಯ ಆಶ್ರಿತನಾಗಿದ್ದಿಲ್ಲ ಅವನಲ್ಲಿ ಪ್ರಜ್ಞೆಯಿತ್ತು, ಮಿತಿಮೀರಿದ ಸದಿಚ್ಛೆ ತುಂಬಿತ್ತು.

ಮೂಲದಲ್ಲಿಯೇ ಆ ರಾಜಕುಲವು ಒಡೆದಿತ್ತು. ಪಾಂಡುವಿನ ಕುಟುಂಬವು ಮೊದಲಿನಿಂದಲೂ ಹೊರಗೇ ಉಳಿದಿತ್ತು. ಆದರೂ ಪಾಂಡವರ, ರಾಜ್ಯದ ಮೇಲಿನ ಆಧಿಪತ್ಯವು, ಎಲ್ಲರಿಗೂ ಮನದಾಳದಿಂದಲೂ ಭಾಸವಾಗುತ್ತಿತ್ತು. ಕೆಲವರ ಮನಸ್ಸು ಆ ಮೂಲಕ ಹೆದರಿತ್ತು, ಬಳಲಿತ್ತು. ಇನ್ನು ಕೆಲವರ ಮನಸ್ಸಿನಲ್ಲಿ ಆ ಮೂಲಕ ಆಸೆಯ ಹೊಸಚಿಗುರುಗಳೊಡೆಯುತ್ತಿದ್ದವು. ಭೀಷ್ಮ ವಿದುರ ಈ ಇಬ್ಬರು ಮಾತ್ರ ಹೊಸಕ್ಷಿತಿಜದ ಕಡೆಗೆ ಆಸೆಯಿಂದ ನೋಡುವವರಾಗಿದ್ದರು. ಏಕೆಂದರೆ ಇಬ್ಬರಿಗೂ ದುರ್ಯೋಧನನ ಬಗೆಗೆ ಹುಟ್ಟು ತಿರಸ್ಕಾರವಿತ್ತು. ದುರ್ಯೋಧನನು ಹುಟ್ಟಿದೊಡನೆ ಕತ್ತೆಯಂತೆ ಕೂಗಿದನಂತೆ. ಆ ದನಿಯು ಅಶುಭವಾದುದು. ಅದನ್ನು ಕೇಳಿದ ವಿದುರನು, “ಈ ಮಗನನ್ನು ನಾಶಮಾಡು” ಎಂದು ಧೃತರಾಷ್ಟ್ರನಿಗೆ ಹೇಳಿದ. ಆದರೆ ಪುತ್ರವಾತ್ಸಲ್ಯದಿಂದ ಧೃತರಾಷ್ಟ್ರನು ಆ ಮಾತನ್ನು ಕೇಳಲಿಲ್ಲ. ವಿದುರನು ಎಂದೂ ಯಾರಿಗೂ ಚುಚ್ಚುವಂತೆ ಮಾತಾಡುವವನಲ್ಲ. ಆದರೆ ಒಮ್ಮೊಮ್ಮೆ ಧೃತರಾಷ್ಟ್ರನ ಮತ್ತು ಅವನ ನಡುವಿನ ಸಂವಾದದಲ್ಲಿ ಈ ಸಂತಾಪದ ಹಬೆಯು ಹೊರ ಹೊಮ್ಮುತ್ತಿತ್ತು. ಧೃತರಾಷ್ಟ್ರನು ತನ್ನ ಮಾತನ್ನು ಒಪ್ಪದಿದ್ದುದಕ್ಕಾಗಿ ವಿದುರನು, ಈ ಬಗ್ಗೆ ಅವನನ್ನು ಆಕ್ಷೇಪಿಸುತ್ತಿದ್ದನು.

ಧೃತರಾಷ್ಟ್ರನು ಆ ಅಪಮಾನವನ್ನು ನುಂಗಿಕೊಂಡು, “ತಂದೆಯ ಹೃದಯ, ಸೋದರ! ತಂದೆಯ ಹೃದಯ ಹೀಗೇ ಇರುತ್ತದೆ!” ಎನ್ನುತ್ತಿದ್ದನು. ಇದಕ್ಕೆ ಮಾತ್ರ ವಿದುರನಿಗೆ ಯಾವ ಉತ್ತರವೂ ಹೊಳೆಯುತ್ತಿರಲಿಲ್ಲ. ಸುಮ್ಮನಾಗುತ್ತಿದ್ದ ಇಲ್ಲವೇ ಮಾತು ಬದಲಿಸುತ್ತಿದ್ದ. ಉತ್ತರವಿಲ್ಲದಾಗ ಆತ ಸುಮ್ಮನಾಗುತ್ತಿದ್ದ. ಏಕೆಂದರೆ ಅಂತಹ ವೇಳೆಯಲ್ಲಿ ಮಾತಾಡುವುದೆಂದರೆ ವಿತಂಡವಾದ ಹೂಡಿದಂತೆ; ಅದು ವಿದುರನಿಗೆ ಆಗದು. ಸ್ವಲ್ಪವಾದರೂ ಅತಿರಿಕ್ತವಾದ, ಸಲ್ಲದ, ಬೇಡವೆನಿಸಿದ, ಸ್ಥಳದಲ್ಲಿ ಮಾತನಾಡುವುದು ಅವನ ಸ್ವಭಾವವೇ ಅಲ್ಲ.

ಯಾವುದನ್ನೇ ಆಗಲಿ ಆತ ದೊಡ್ಡದಾಗಿ ಕಣ್ಣುತೆರೆದು ವೀಕ್ಷಿಸುತ್ತಾನೆ. ಯುದ್ಧ ಕ್ಷೇತ್ರವು ಅವನಿಗೆ ವರ್ಜ್ಯವಾಗಿತ್ತು. ಆದರಿಂದಾಗಿ ಅವನ ಕ್ರಿಯಾಶೀಲತೆಗೆ ಮೂಲದಲ್ಲಿಯೇ ಮಿತಿಯ ಕಟ್ಟು ಬಿದ್ದಿತ್ತು. ಏನಾಗುವುದೋ ಅದನ್ನು ನೋಡುವುದು, ನಿತ್ಯವೂ ಹೊಸ ಜ್ಞಾನವನ್ನು ಸಂಪಾದಿಸುವುದು – ಹೀಗೆ ಅವನ ಪರಿಪಾಠ. ಆದರೆ ಈ ಜ್ಞಾನವು ವ್ಯವಹಾರದ ಪಾತಳಿಯನ್ನು ಬಿಟ್ಟು ಇರುತ್ತಿರಲಿಲ್ಲ. ಗಜಬಜಿಸುವ ವ್ಯವಹಾರದ ಮೇಲೆ ಸರಳನೀತಿಯನ್ನು ಒರೆಹಚ್ಚಿನೋಡುವ ಆತನು ಏಕೈಕ ಪ್ರಯೋಗಶಾಲಿಯಾಗಿದ್ದನು. ಯುಧಿಷ್ಠಿರ ನಿಗೂ ಈ ಗುಣವಿತ್ತು; ಆದರೆ ಆ ಪ್ರಯೋಗದಲ್ಲಿ ಅವನಿಗೆ ಸ್ವಂತ ದುಃಖದ ಅನುಭವಗಳು ಗತಿಪ್ರಾಪ್ತಿಸಿಕೊಟ್ಟವು. ವಿದುರನದು ಹಾಗಿರಲಿಲ್ಲ; ಅವನಿಗೆ ಸ್ವಾರ್ಥವಿಲ್ಲ. ಸಂಸಾರಿಯಾಗಿದ್ದರೂ ಅವನ ವೈಯಕ್ತಿಕ ಬದುಕಿಗೆ ಮಹಾಭಾರತ ದಲ್ಲಿ ಎಲ್ಲಿಯೂ ಎಡೆದೊರೆತಿಲ್ಲ.

ಧೃತರಾಷ್ಟ್ರನು ಅಂಧನಾಗಿದ್ದುದರಿಂದ ಸಮವಯಸ್ಸಿನ ಈ ಸೋದರನು ಅವನ ಮಂತ್ರಿಯಾದನು. ಅಂಧನನ್ನು ಅವನು ಕುಚೇಷ್ಟೆಯಿಂದ ಆಡಿಕೊಳ್ಳು ತ್ತಿರಲಿಲ್ಲ. ಆದ್ದರಿಂದಲೇ ಧೃತರಾಷ್ಟ್ರನು ಅವನನ್ನೇ ಹೆಚ್ಚು ಅವಲಂಬಿಸಿರು ತ್ತಿದ್ದನು. ವಿದುರನ ಬುದ್ಧಿಯು ಚೊಕ್ಕವಾದದ್ದು. ಸತ್ಯ ಹೇಳಲು ಅವನು ಅಳುಕು ತ್ತಿರಲಿಲ್ಲ. ಆದರೂ, ಸತ್ಯವನ್ನು ಹೇಳುವಾಗ ಒಂದು ಪ್ರಕಾರದ ಜುಗುಪ್ಸೆಯು ಅವನ ಮನಸ್ಸಿನಲ್ಲಿ ಸದಾ ಸುಳಿಯುತ್ತಿತ್ತು. ಹೆಚ್ಚೇನು, ಅಪ್ರಿಯವಾದ ಆದರೆ ಪಥ್ಯವಾದ, ಮಾತನ್ನು ಹೇಳಬೇಕಾದ ಪ್ರಸಂಗ ಬರುವುದೇ ದೊಡ್ಡ ದುರ್ದೈವ ವೆಂಬುದು ಅವನ ಮನಸ್ಸಿನಲ್ಲಿ ಖಚಿತವಾಗಿ ನೆಲೆಯೂರಿತ್ತು. ಎಲ್ಲವೂ ದೈವಾಧೀನವೆಂಬ ನಿರಾಶೆ ಅವನನ್ನು ಆವರಿಸಿತ್ತು. ಆದರಿಂದಾಗಿಯೇ ಕರ್ತವ್ಯ ಮಯ ನೀತಿಯನ್ನು ಅವನು ಅತಿಶಯ ತತ್ಪರತೆಯಿಂದ ಜತನಮಾಡುತ್ತಾನೆ.

ವಿದುರನು ರಾಜಪುರುಷ; ಅತ್ಯಂತ ಆದರ್ಶನಾದ ರಾಜಪುರುಷ. ಆದರಿಂದಾಗಿ, ದೊಡ್ಡಸ್ತಿಕೆಯ ಮರ್ಮವನ್ನು ಅವನು ಬಲ್ಲ. ಆ ಗಂಟು ಗಡಬುಗಳಿಂದ ತುಂಬಿದ ರಾಜಗೃಹದಲ್ಲಿ ಅತ್ಯಂತ ಸಾವಧಾನನಾಗಿದ್ದು, ಯಾರನ್ನೂ ನೋಯಿಸದೆ, ಎಲ್ಲರಿಗೂ ಯೋಗ್ಯವಾದ ಸಲಹೆ ನೀಡುತ್ತಾನೆ. ಇಂತಹ ಪರಿಸ್ಥಿತಿಯಲ್ಲಿ ಅವನು ಶ್ರೇಷ್ಠವಲ್ಲದ ಮೌಲ್ಯಗಳೊಂದಿಗೆ ಎಂದೂ ಹೊಂದಾಣಿಕೆ ಮಾಡಿಕೊಂಡವನಲ್ಲ. ಇದೇ ಅವನ ವಿಶೇಷ. ನೈಸರ್ಗಿಕ ಪ್ರೇಮ ಮತ್ತು ಜಾಣಾಕ್ಷತೆ ಇವು ಒಂದೇ ವೃತ್ತಿಯ ಭಿನ್ನ ಆವಿಷ್ಕಾರಗಳೆಂಬುದನ್ನು ಆತ

ಗುರುತಿಸಿದ್ದ. ಎಂತಹ ತುರ್ತಿನ ಸಂದರ್ಭದಲ್ಲಿಯೇ ಆಗಲಿ, ಎಷ್ಟೇ ಕಟುವಾದ ಅನುಭವ ಬಂದರೂ, ತನ್ನ ಮನಸ್ಸಿನ ಸಮತೋಲನವನ್ನು ಅವನು ಎಂದಿಗೂ ಕೆಡಿಸಿಕೊಳ್ಳಲಿಲ್ಲ.

ವಿದುರನು ಪಾರಂಪರಿಕ ಪಾಂಡಿತ್ಯಕ್ಕೆ ಉತ್ತಮ ಪ್ರತೀಕವಾಗಿದ್ದಾನೆ. ಆದರೆ ಈ ಪಾಂಡಿತ್ಯವು ಮರ್ಯಾದಿತ ಕಕ್ಷೆಯದಾಗಿದೆ. ಅವನು ಶೂದ್ರ. ರಾಜಬಂಧು ವಾಗಿದ್ದರೂ, ಪರಂಪರೆಯು ಜ್ಞಾನದ ಯಾವ ಅಂತಸ್ತನ್ನು ಗೊತ್ತುಪಡಿಸಿತ್ತೊ ಅದನ್ನು ಉಲ್ಲಂಘಿಸುವುದರಿಂದ ಮನುಷ್ಯನಿಗೆ ಪ್ರಯೋಜನವುಂಟೆಂಬುದನ್ನು ತಿಳಿದುಕೊಳ್ಳುವುದು ಅವನಿಗೆ ಶಕ್ಯವೇ ಇದ್ದಿಲ್ಲ. ಅವನ ಜ್ಞಾನದ ಕಕ್ಷೆಯೂ ವ್ಯಾವಹಾರಿಕ ಆಚಾರಗಳ ನೀತಿಯ ಕಕ್ಷೆಯಾಗಿತ್ತು, ಸರ್ವಸಾಮಾನ್ಯ ಸುಜ್ಞತೆ ಯದಾಗಿತ್ತು. ಸಮದರ್ಶಿಯಾದ ಮನುಷ್ಯನ ನೈಸರ್ಗಿಕ ಪ್ರೇರಣೆಯಿಂದ ಅದಕ್ಕೆ ತೇಜಸ್ಸು ದೊರಕಿತ್ತು.

ವಿದುರನ ವಾಣಿಯನ್ನು ವ್ಯಾಸರು ಅತಿಶಯ ಯೋಜಕತೆಯಿಂದ ಉಪಯೋಗಿಸಿದ್ದಾರೆ. ವಾಸ್ತವವಾಗಿ ವಿದುರನ ವಾಣಿಯೆಂದರೇನು? ಸುಭಾಷಿತಗಳ ನಾಣ್ಣುಡಿಗಳ ಬಲು ದೊಡ್ಡ ಹೆಣಿಕೆ. ಜಾಣನಾದ ಮನುಷ್ಯನು ಸುಭಾಷಿತಗಳನ್ನು ಸತತವಾಗಿ ಸಂಗ್ರಹಿಸಬೇಕು ಎಂದು ಅವನು ಸ್ಪಷ್ಟವಾಗಿಯೇ ಹೇಳುತ್ತಾನೆ. ಯಾವನಲ್ಲಿ ಈ ಸಂಗ್ರಹವು ದೊಡ್ಡದೋ ಅವನಿಗೆ ಸಮಾಜದಲ್ಲಿ ಪ್ರತಿಷ್ಠೆಯಿತ್ತೆಂಬುದನ್ನು ಬೇರೆ ಹೇಳಬೇಕೆ? ಆದರೆ ವ್ಯಾಸರು, ವಿದುರನನ್ನು, ಸುಭಾಷಿತಗಳನ್ನು ಮನಬಂದಂತೆ ಬಿತ್ತುವ ಯಂತ್ರವನ್ನಾಗಿ ಮಾಡುವುದಿಲ್ಲ. ವಿದುರನೀತಿಯು ಮಹಾಭಾರತದಲ್ಲಿ ಬಹಳ ಜಾಗವನ್ನು ಆಕ್ರಮಿಸಿಕೊಂಡಿದೆ. ಆದರೂ ಮಹಾಭಾರತದ ನಾಟಕದಲ್ಲಿ ಅದನ್ನು ಎಷ್ಟೊಂದು ಚಾತುರ್ಯದಿಂದ ತಂದಿರಿಸಲಾಗಿದೆಯೆಂದರೆ, ಗೀತೆಯಂತೆ ಅದರ ಅಸ್ತಿತ್ವವೂ ಆವಶ್ಯಕವೆಂದು ಸಿದ್ಧವಾಗುತ್ತದೆ. ಆದರೆ ಅದರ ಅಂತರಂಗವು ಮಾತ್ರ ಗೀತೆಗಿಂತ ಬಹಳ ಬೇರೆಯಾದುದು. ಗೀತೆಯ ಉಪಯೋಗದಂತೆಯೇ ಸಂಭ್ರಾಂತ ಕೇಳುಗನಿಗೆ ಆಶ್ವಾಸನೆ ನೀಡುವ ಸಲುವಾಗಿ ಅದರ ಉಪಯೋಗವಾಗಿದೆ. ಆದರೆ, ಗೀತೆಯ ಧ್ಯೇಯವು ಯುದ್ಧಕರ್ಮವಾದರೆ, ವಿದುರನೀತಿಯ ಧ್ಯೇಯವು ಸಾರ್ವಕಾಲೀನ ಶಾಂತಿಮಯ ಜೀವನವಾಗಿದೆ. ಗೀತೆಯು ಅರ್ಜುನನಿಗೆ ಆಶೆಯ ಸ್ಫುರಣವನ್ನು ನೀಡುತ್ತದೆ; ಆದರೆ ವಿದುರವಾಣಿಯಾದರೋ, ಮಹಾಭಾರತದಲ್ಲಿ, ಭಗ್ನ ಹೃದಯಿಯಾದ ಧೃತರಾಷ್ಟ್ರನಿಗೆ, ಅವನ ಮೂರ್ಖತ್ವದ ಪರಿಪಾಕವನ್ನು ಕೂಡ

ಶಾಂತವಾಗಿ ಸಹಿಸಲು ಬರುತ್ತದೆಯೆಂಬುದನ್ನೂ ಆ ಅನುತಾಪವಿಧಿಯು ಸಮೃದ್ಧ ತಪಶ್ಚರ್ಯೆಯ ಒಂದು ಭಾಗವಾಗಿದೆಯೆಂಬುದನ್ನೂ ತೋರಿಸಿಕೊಡಲು ಬಂದಿದೆ. ಅರ್ಜುನನಿಗೆ ಗೀತೆಯು ದಕ್ಕಿತೋ ಇಲ್ಲವೋ ಎಂಬುದು ಅನುಗೀತೆಯ ಮೂಲಕ ಚರ್ಚೆಯು ವಿಷಯವಾಗಬಲ್ಲುದು. ವಿದುರನ ಜಾಣತನದ ಮಾತುಗಳನ್ನು ಧೃತರಾಷ್ಟ್ರನು ಮೊದಲಿಗೆ ಕಡೆಗಣಿಸಿದನು. ಆದರೆ ಕೊನೆಗೆ ನಾಲ್ಕೂ ಕಡೆಯಿಂದ ವಿನಾಶವು ನುಂಗಲು ಎದ್ದು ಬಂದಾಗ ಅವೇ ಅವನಿಗೆ ಆಧಾರವಾದವು. ಕೃಷ್ಣ ಮತ್ತು ಅರ್ಜುನ ದೂರ ದೂರ ಉಳಿಯ ಹತ್ತಿದರು. ಅಂತ್ಯಕಾಲದಲ್ಲಿ ಕೃಷ್ಣನು ಏಕಾಕಿಯಾಗಿದ್ದನು. ಆದರೆ ಧೃತರಾಷ್ಟ್ರ ಮತ್ತು ವಿದುರ ಮಾತ್ರ ಒಟ್ಟೊಟ್ಟಿಗೇ ಇದ್ದರು. ಅವರ ಅಂತ್ಯವು ಕೂಡ ಒಟ್ಟಿಗೇ ಆಯಿತು. ಧೃತರಾಷ್ಟ್ರನ ಶೋಕವು ಚೆನ್ನಾಗಿ ನಂದಿ, ಹೃದಯಗರ್ಭವೂ ಶಾಂತಿಯಿಂದ ತುಂಬಿದ್ದನ್ನು ಕೊನೆಗೆ ವಿದುರನು ನೋಡಿದನು. ಇದೇ ವಿದುರನ ಜೀವನದ ಪರಿಪೂರ್ಣತೆ. ಒಬ್ಬ ರಾಜನ ಜೀವನದೊಂದಿಗೆ ಈ ರಾಜಪುರುಷನ ಜೀವನವೂ ಕಳೆಯಿತು; ಅದರೊಂದಿಗೇ ಮುಗಿದೂ ಹೋಯಿತು. ಆದರೆ ವಿದುರನ ವಿಶೇಷವೆಂದರೆ ಅಲ್ಲಿಗೇ ಅದು ಮುಗಿಯಲಿಲ್ಲ. ಇತರರಂತೆ ಆ ಜೀವನವು, ಕೊನೆಯುಸಿರು ನಿಂತುದರಿಂದ ಮುಗಿಯಲಿಲ್ಲ. ಬೀಜವನ್ನು ಮಣ್ಣಿನಲ್ಲಿ ನೆಡಬೇಕು, ಮಣ್ಣಿನಿಂದ ಮುಚ್ಚಬೇಕು ಎಂಬ ರೀತಿಯಲ್ಲಿ ಅವನ ಕೊನೆಯಾಯಿತು. ಮಹಾಭಾರತದಲ್ಲಿಯ ಎಲ್ಲರ ಅಂತ್ಯಗಳಿಗಿಂತ ಅವನ ಅಂತ್ಯವು ಅತ್ಯಂತ ಮನೋಜ್ಞವಾಗಿದೆ. ಮೃತ್ಯುವು ಭಯಕಾರಿಯಲ್ಲವೆಂದು ಎಲ್ಲ ತತ್ತ್ವಜ್ಞಾನಗಳೂ ಸಾರುತ್ತವೆ. ಆದರೆ ಆನಂದಪರ್ಯವಸಾಯಿಯಾದ ಮೃತ್ಯುವಿನ ಉದಾಹರಣೆಯು ಮಾತ್ರ ಬಹಳ ದುರ್ಲಭ. ವಿದುರನ ಹೊರತಾಗಿ ಇಂತಹ ಮೃತ್ಯು ನನಗೆ ಇನ್ನೆಲ್ಲಿಯೂ ಓದಿದ್ದು ನೆನಪಾಗುವುದಿಲ್ಲ.

ಧೃತರಾಷ್ಟ್ರ ಗಾಂಧಾರಿಯರೊಡನೆ ವಿದುರನು ಕಾಡಿನಲ್ಲಿ ತಪಸ್ಸು ಮಾಡುತ್ತಿರುತ್ತಾನೆ. ಇತರರ ಸಾವು, ಸಮಾಧಿಯಲ್ಲಿ ಅಥವಾ ನೈಸರ್ಗಿಕ ರೀತಿಯಲ್ಲಿ ಒದಗಿ ಬರುತ್ತದೆ. ಆದರೆ ಯುಧಿಷ್ಠಿರನನ್ನು ನೋಡಿ ವಿದುರನಿಗೆ ಆನಂದವು ಉಕ್ಕುತ್ತದೆ. ಆ ಆನಂದದಿಂದ ಅವನ ವೃತ್ತಿಗಳು ಹೊರಹರಿಯುತ್ತವೆ. ಆ ಆನಂದದಲ್ಲಿ ಭಕ್ತಿಯ ಉಮ್ಮಳವಿರುವುದಿಲ್ಲ. ಏಕೆಂದರೆ ಯುಧಿಷ್ಠಿರನು ಅವನನ್ನು ಪಿತೃ ಸಮಾನನಾಗಿ ಭಾವಿಸುತ್ತಿದ್ದನು. "ಅವನು ಒಬ್ಬ ಭಕ್ತ, ಗುರು, ಪಾಲಕ, ತಂದೆ, ತಾಯಿ, ಸಖ, ಅಪಾರ ಬುದ್ಧಿಶಾಲಿ, ದೀರ್ಘದೃಷ್ಟಿಯುಳ್ಳವನು" ಎಂಬುದಾಗಿ ಅವನು ವಿದುರನನ್ನು ವರ್ಣಿಸಿದ್ದುಂಟು. ಇದಲ್ಲದೆ

ಅವನು ತನ್ನ ಮೇಲೆ ಮಾತೃಮಮತೆಯ ಪ್ರೇಮವನ್ನು ಬೀರುತ್ತಿದ್ದನೆಂಬುದರ ನೆನಪು ಯುಧಿಷ್ಠಿರನಿಗೆ ಸದಾ ಇರುತ್ತದೆ. ಯುಧಿಷ್ಠಿರ ವಿದುರರ ನಡುವೆ ಒಂದು ದೃಢವಾದ ಪ್ರೇಮಬಂಧನವನ್ನು ವ್ಯಾಸರು ನಿರ್ಮಾಣ ಮಾಡಿದ್ದಾರೆ. ಕೃಷ್ಣಾರ್ಜುನರ ನಡುವಿನ ಸಂಬಂಧದ ಬಗ್ಗೆ ಅವರು ವಿಶೇಷ ಗೌರವ ತೋರಿದ್ದಾರೆ. ಆ ರೀತಿಯ ಗೌರವವನ್ನು ಇವರ ಸಂಬಂಧದ ಬಗ್ಗೆ ತೋರಿಲ್ಲ. ಕೃಷ್ಣಾರ್ಜುನರು ಒಬ್ಬರು ಮತ್ತೊಬ್ಬರ ಹೃದಯವಾಗಿದ್ದರು. ಅಂತಹ ನಂಟು ಇವರಿಬ್ಬರ ನಡುವೆ ಇರಲಿಲ್ಲ. ಏಕೆಂದರೆ ಇವರಿಬ್ಬರೂ ಸಮವಯಸ್ಕರಲ್ಲ. ಒಂದು ತಲೆಮಾರಿನ ಅಂತರವಿದೆ. ಈ ಅಂತರವನ್ನು ವ್ಯಾಸರು ಜೋಪಾನ ಮಾಡಿದ್ದಾರೆ. ಆದರೆ ಹಾಗೆ ಮಾಡುವಲ್ಲಿ ಎರಡು ಸಮಾನಧರ್ಮೀ ಮನಸ್ಸುಗಳನ್ನು ಕೊನೆಗೆ ಏಕರೂಪವಾಗಿಸುವ ಅಪೂರ್ವ ಕೌಶಲವನ್ನು ಅವರು ಪ್ರದರ್ಶಿಸಿದ್ದಾರೆ. ಇದು ತೀರ ಸಹಜ ರೀತಿಯಲ್ಲಿ ಕೂಡಿಬಂದಂತೆ ತೋರಿಸಿ ದ್ದಾರೆ. ವ್ಯಾಸರ, ಈ ಸಹಜತೆಯಿಂದೊಡಗೂಡಿದ ಕಲಾತ್ಮಕತೆಯೊಂದಿಗೆ ಯಾವುದು ತಾನೆ ಸರಿದೂಗಬಲ್ಲುದು?

ಯುಧಿಷ್ಠಿರ ಮತ್ತು ವಿದುರರ ಸಮಾನ ವಿಚಾರಗಳ ಅನೇಕ ಸಂದರ್ಭಗಳು ಮಹಾಭಾರತದಲ್ಲಿವೆ. ಯುದ್ಧಕ್ಕೆ ಮುಂಚೆ ಯುಧಿಷ್ಠಿರನು, "ಸಂಧಾನದ ಮಾತುಕತೆಗಾಗಿ ಬರುತ್ತೇನೆ" ಎಂದು ಸಂಜಯನ ಮೂಲಕ ಧೃತರಾಷ್ಟ್ರನಿಗೆ ನಿರೂಪ ಕಳಿಸಿದನು. ಸಂಜಯನು ಕೂಡ, "ಹಾವು, ಹಳೆಯದಾದ, ಜೀರ್ಣವಾದ, ದುರ್ಬಲವಾದ, ಪೊರೆಯನ್ನು ಬಿಡುತ್ತದೆ; ಅದೇ ರೀತಿ ಆ ಅಜಾತಶತ್ರುವು ನಿನ್ನ ಬಗೆಗೆ ಪಾಪ ವಿಚಾರ ಬಿಟ್ಟು ಮಾಧುರ್ಯವನ್ನಿಟ್ಟುಕೊಂಡು ನಡೆಯುತ್ತಾನೆ. ನೀನು ಕೂಡ ದೊಡ್ಡ ಮನಸ್ಸು ಮಾಡಿ ಪಾಂಡವರೊಡನೆ ಸಂಧಾನ ಮಾಡಿಕೊ. ಮೂಢತನ ಮಾಡಬೇಡ; ಬೆಳಿಗ್ಗೆ ಯುಧಿಷ್ಠಿರನೊಡನೆ ಮಾತುಕತೆ ನಡೆಯಿಸು. ಯುದ್ಧದಲ್ಲಾಗುವ ಪ್ರಾಣಹಾನಿಯ ಪಾಪವು ನಿನ್ನ ತಲೆಗೆ ಬರಬಹುದು, ಮರೆಯಬೇಡ" – ಎಂದು ಧೃತರಾಷ್ಟ್ರನಿಗೆ ಹೇಳುತ್ತಾನೆ.

ರಾತ್ರಿ ಧೃತರಾಷ್ಟ್ರನಿಗೆ ನಿದ್ದೆ ಬರದು. ವಿದುರನಿಗೆ ಕರೆ ಕಳುಹಿಸಿದನು. ತನಗೆ ನಿದ್ದೆ ಬಾರದೆಂದನು. ಆಗ ವಿದುರ ಹೇಳುತ್ತಾನೆ, "ನಿನ್ನ ಮನದಲ್ಲಿ ಕೆಟ್ಟ ವಿಚಾರವೇನೂ ಇಲ್ಲವಷ್ಟೆ? ಅದು ಇದ್ದರೆ ನಿದ್ದೆ ಬರದು. ನಿನಗೆ ಪರದ್ರವ್ಯದಲ್ಲಿ ಲೋಭ ಹುಟ್ಟಿಲ್ಲವಷ್ಟೇ? ಕರ್ಣ, ದುಶ್ಶಾಸನ, ಶಕುನಿ, ದುರ್ಯೋಧನರ ಕೈಗೆ ಕಾರುಭಾರನ್ನು ಒಪ್ಪಿಸಿ, ಯಶಸ್ಸಿನ ಇಚ್ಛೆ ಏತಕ್ಕೆ ಮಾಡುತ್ತೀ?" – ಎಂಬುದಾಗಿ.

ರಾತ್ರಿ ಬೆಳೆಯುತ್ತ ಹೋಯಿತು. ಆ ಪೆಟ್ಟು ಧೃತರಾಷ್ಟ್ರನಿಗೆ ತಾಕಿತು. ಆತ ಸುಮ್ಮನೆ ಕುಳಿತ. ಯಾವಾಗ ಯಾವಾಗ ವಿದುರನು ಜಾಣತನವನ್ನು ಬೋಧಿಸುತ್ತಿದ್ದನೋ ಆಗಲೆಲ್ಲ ಹಿಂಜರಿಯುವುದು ಧೃತರಾಷ್ಟ್ರನಿಗೆ ಮೈಗಂಟಿದ ಚಟವಾಗಿ ಬಿಟ್ಟಿತ್ತು. ಆದರೆ ಇಂದಿನ ರಾತ್ರಿಯು ವಿದುರನ ದೃಷ್ಟಿಯಿಂದ ತೀರ ಬೇರೆ ರೀತಿಯ ರಾತ್ರಿಯಾಗಿತ್ತು. ಇಲ್ಲಿಯೇ ಯುದ್ಧದ ಇಲ್ಲವೇ ಶಾಂತಿಯ ಅಡಿಪಾಯ ನಿರ್ಮಾಣವಾಗಲಿತ್ತು. ವಿದುರನ ಮನಸ್ಸೂ ಪ್ರಕ್ಷುಬ್ಧವಾಗುತ್ತದೆ. ಜಾಣ ಯಾರು, ಮೂರ್ಖ ಯಾರು, ಎಂಬಲ್ಲಿಂದ ಹಿಡಿದು ವ್ಯಾವಹಾರಿಕ ನೀತಿಯ ತನಗೆ ತಿಳಿದಿದ್ದ ಎಲ್ಲ ಅಂಗಗಳನ್ನೂ ಅವನು ಸುಸಂಗತಿ–ವಿಸಂಗತಿಗಳ ವಿಚಾರಮಾಡದೆ ಒಂದರ ಹಿಂದೆ ಒಂದರಂತೆ ಹೇಳಿಬಿಡುತ್ತಾನೆ. ಯಾರಿಗೆ ಗೊತ್ತು, ಅದರಲ್ಲಿಯ ಯಾವ ಒಂದು ವಿಷಯವು ಕೈಬಿಟ್ಟು ಹೋದರೂ ಅಷ್ಟೆ, ತಾನು ಈ ಕುರುಡನಿಗೆ, ಈ ತನ್ನ ದುರ್ಬಲ ರಾಜನಿಗೆ, ಅಣ್ಣನಿಗೆ, ಹೇಳಲಿಲ್ಲ ಎಂದಾಗಬಾರದು. ಆ ಎಲ್ಲ ಪಾರಂಪರಿಕ ಸುಭಾಷಿತಗಳ ಸ್ವರೂಪದಲ್ಲಿಯ ತತ್ತ್ವಜ್ಞಾನವನ್ನೂ ಆತ ತಲ್ಲೀನನಾಗಿ ನಿರೂಪಿಸಿದನು.

ಆದರೆ ಇಲ್ಲಿಯೂ ಒಂದು ಭಾಗವು ವಿದುರನ ವ್ಯಕ್ತಿತ್ವದ ದಿಗ್ದರ್ಶನ ಮಾಡುವಂತಿದೆ. ಯುಧಿಷ್ಠಿರನಲ್ಲಿ ಕೂಡ ಇದೇ ವೈಶಿಷ್ಟ್ಯ ಕಂಡುಬರುತ್ತದೆ. ಇಬ್ಬರ ಜೀವನದಲ್ಲಿಯ ಭೂಮಿಕೆಗಳು ಮಾತ್ರ ಬೇರೆ ಬೇರೆ. ಅವರಲ್ಲಿಯ ಸಾಮ್ಯವೆಂದರೆ ವಿದುರನು ಮಾಡಿದ ಕ್ಷಮೆಯ ವಿವೇಚನೆ. ಅವನು ಹೇಳುತ್ತಾನೆ – "ಕ್ಷಮಾವಂತರಲ್ಲಿ ಒಂದೇ ದೋಷ. ಜನರು ಅವರನ್ನು ದುರ್ಬಲರೆನ್ನುತ್ತಾರೆ. ಆದರೆ ಅದನ್ನು ದೋಷವೆಂದು ಭಾವಿಸಬಾರದು. ಕ್ಷಮೆಯು ಅಶಕ್ತರ ಗುಣ ಮತ್ತು ಸಾಮರ್ಥ್ಯದ ಭೂಷಣ. ಕ್ಷಮೆಯಲ್ಲಿ ವಶೀಕರಣ ಸಾಮರ್ಥ್ಯವಿರುತ್ತದೆ. ಕ್ಷಮೆಯಿಂದ ಏನುತಾನೆ ಸಿಕ್ಕುವುದಿಲ್ಲ? ಯಾರ ಕೈಯಲ್ಲಿ ಶಾಂತಿಯ ಖಡ್ಗವಿರುತ್ತದೆಯೊ ಅವನು ಏನನ್ನು ತಾನೆ ಮಾಡಲಾರ?" ಯುಧಿಷ್ಠಿರನು ದ್ರೌಪದಿಯನ್ನುದ್ದೇಶಿಸಿ ಕ್ಷಮೆಯನ್ನು ಕುರಿತು ಮಾಡಿದ ಭಾಷ್ಯದಂತೆಯೇ ಈ ಕ್ಷಮಾಸೂತ್ರ ಕೂಡ ಇದೆ. ಇಬ್ಬರ ಪಲ್ಲವಿಯೂ ಒಂದೇ "ಹುಲ್ಲಿಲ್ಲದ ಸ್ಥಳದಲ್ಲಿ ಬೆಂಕಿಬಿದ್ದರೆ ಅದು ತನ್ನಷ್ಟಕ್ಕೇ ನಂದಿಹೋಗುತ್ತದೆ" – ಎಂಬುದು.

ಕೃಷ್ಣ ಸಂಧಾನಕ್ಕೆ ಮುಂಚೆ ದುರ್ಯೋಧನನ ಯುದ್ಧ ಮಾಡುವ ನಿರ್ಧಾರವನ್ನೂ, ಭೀಮನ ಬಗೆಗೆ ಧೃತರಾಷ್ಟ್ರನಿಗಿದ್ದ ದ್ವೇಷವನ್ನೂ ದೃಷ್ಟಿಯಲ್ಲಿಟ್ಟುಕೊಂಡು ವಿದುರನು ಯುದ್ಧವನ್ನು ಕುರಿತಾದ ತನ್ನ ಅಭಿಪ್ರಾಯವನ್ನು

ವ್ಯಕ್ತಪಡಿಸುತ್ತಾನೆ. "ಇಬ್ಬರೂ ಯುದ್ಧ ಮಾಡುವಾಗ ಅವರಲ್ಲಿ ಒಬ್ಬ ಸತ್ತರೂ ಜಯವಾಗುವುದಿಲ್ಲ"ವೆನ್ನುತ್ತಾನೆ. ಈ ಮಾತು, "ಯುದ್ಧದಲ್ಲಿ ಒಳಿತೇನಿದೆ?" ಎಂಬ ಯುಧಿಷ್ಠಿರೋಕ್ತಿಯೊಂದಿಗೆ ಹೊಂದಿಕೆಯಾಗುತ್ತದೆ.

ಯುದ್ಧ ಮುಗಿದ ಮೇಲೆ ಯುಧಿಷ್ಠಿರನಿಗೆ ವಿರಕ್ತಿ ಮೂಡಿತು; ತಪಸ್ಸು ಮಾಡಲೆಂದು ಅರಣ್ಯಕ್ಕೆ ಹೋಗಲು ಅವನು ಹಟಹಿಡಿದನು. ಆಗ ಭೀಮಾರ್ಜುನರು, ಧರ್ಮಕ್ಕಿಂತ, ರಾಜನಿಗೆ, ಅರ್ಥಕಾಮಗಳು ಆವಶ್ಯಕ ವೆಂಬುದನ್ನು ಹೇಳಿದರು. ಆಗ ಸೋದರರಲ್ಲಿ ತುಮುಲವಾದ ವಿವಾದ ನಡೆಯಿತು. ಆ ಸಂದರ್ಭದಲ್ಲಿ ಯುಧಿಷ್ಠಿರನು ರಾಜ್ಯತ್ಯಾಗ ಮಾಡಿ ಕಾಡಿಗೆ ಹೋಗಬೇಕೆಂದು ವಿದುರನಿಗೆನಿಸಲಿಲ್ಲ. ಆದರೂ, ಅವನು ಧರ್ಮಕ್ಕೇ ಶ್ರೇಷ್ಠ ಸ್ಥಾನವಿತ್ತನು; "ರಾಜನೇ, ಧರ್ಮವೇ ಎಲ್ಲಕ್ಕಿಂತಲೂ ಶ್ರೇಷ್ಠವಾದ ಗುಣ; ಅರ್ಥವು ಮಧ್ಯಮವಾದದ್ದು ಮತ್ತು ಕಾಮವು ಎಲ್ಲಕ್ಕಿಂತ ಕೆಳಗಿನದು" ಎಂದನು. ಇದರಿಂದ ಭೀಮನಿಗೆ ಸಮಾಧಾನವಾಗಲಿಲ್ಲ ನಿಜ. ಆದರೆ, ಯುಧಿಷ್ಠಿರನು ರಾಜ್ಯವನ್ನು ತ್ಯಜಿಸಿ ಹೊರಟುಹೋಗುವುದು ವಿದುರನಿಗೆ ಕೂಡ ಹಿಡಿಸಲಿಲ್ಲವೆಂಬುದನ್ನು ಅವನು ಅರ್ಥಮಾಡಿಕೊಂಡನು. ವಿದುರನಿಗೂ, ಯುಧಿಷ್ಠಿರನು ತನ್ನ ಮತದಂತೆ ನಡೆಯಲು ಹಚ್ಚುವ ನಿಶ್ಚಯವನ್ನು ಅವನು ಮಾಡಿದ್ದನು. ಸರಳಹೃದಯಿಯಾದ ಭೀಮನು ಮೊದಲ ಬಾರಿಗೇ ಕಾವ್ಯಮಯ ವಾಣಿಯಲ್ಲಿ ನುಡಿದನು, "ಹೂವಿನಲ್ಲಿ ಮಧು ಹೇಗೋ ಹಾಗೆ ಮನುಷ್ಯರಲ್ಲಿ ಕಾಮವಿರುತ್ತದೆ. ಕಾಮವೇ ಧರ್ಮಾರ್ಥಯೋನಿಯಾಗಿರುತ್ತದೆ. ಯಾರಲ್ಲಿ ಕಾಮವಿರುವುದಿಲ್ಲವೋ ಅವರು ಅರ್ಥವನ್ನು ಇಚ್ಛಿಸುವುದಿಲ್ಲ. ಯಾರಲ್ಲಿ ಕಾಮವಿರುವುದಿಲ್ಲವೋ ಅವರಿಗೆ ಧರ್ಮದ ವಾಸನೆ ಹಿಡಿಸದು. ಎಂದರೆ, ಕಾಮವು ಮಹತ್ವದ್ದು. ವೈಶ್ಯ, ರೈತ, ಗೋವಳ, ಬಡಗಿ, ಸಿಂಪಿಗ, ಭಿಕ್ಷುಕ – ಎಲ್ಲರೂ ಕಾಮದಿಂದಾಗಿಯೇ ಕರ್ಮಕ್ಕೆ ಪ್ರವೃತ್ತರಾಗುತ್ತಾರೆ" – ಎಂಬುದಾಗಿ.

ಭೀಮನ ಈ ವಾದವನ್ನು ಅಲ್ಲಗಳೆಯುವುದು ಕಠಿಣವಾಗಿತ್ತು. ಧರ್ಮದ ವಿವರಣೆಯನ್ನು ಹೆಚ್ಚು ವಿವರವಾಗಿ ಮಾಡುವುದನ್ನು ವಿದುರನು ಬೇಕೆಂದೇ ತಪ್ಪಿಸಿಕೊಂಡನು. ಏಕೆಂದರೆ, ತಾನು ಶೂದ್ರ, ಅಧ್ಯಾತ್ಮ ವಿದ್ಯೆಯ ಉದ್ಗಾರದ ಹಕ್ಕು ತನಗಿಲ್ಲ – ಎಂಬುದನ್ನು ಅವನು ಈ ಮೊದಲೇ ಧೃತರಾಷ್ಟ್ರನಿಗೆ ಸ್ಪಷ್ಟವಾಗಿ ಹೇಳಿದ್ದನು. ಸುಭಾಷಿತಗಳು, ನಾಣ್ಣುಡಿಗಳು, ದೃಷ್ಟಾಂತಗಳು ಇವುಗಳ ಮೂಲಕ ನಾನಾ ತರಹದ ಆಚಾರ ಧರ್ಮಗಳ ಊಹಾಪೋಹಗಳನ್ನು ಅವನು

ಮಾಡಿದ್ದನು, ಅದರಿಂದ ಧೃತರಾಷ್ಟ್ರನು ಅತಿಶಯ ಸಂತುಷ್ಟನಾಗಿದ್ದನು. "ನನಗೆ ಇನ್ನೂ ಗಹನವಾದ ಧರ್ಮತತ್ತ್ವವನ್ನು ಹೇಳು" ಎಂದು ಅವನು ಕೇಳಿದಾಗ, "ನಾನು ಶೂದ್ರ; ಈಗ ಹೇಳಿದ್ದಕ್ಕಿಂತ ಹೆಚ್ಚು ಹೇಳುವ ಹಕ್ಕು ನನಗಿಲ್ಲ" ಎಂದು ವಿದುರನು ಉತ್ತರಿಸಿದ್ದನಲ್ಲದೆ, ಸನತ್ಸುಜಾತನನ್ನು ಕರೆಯಿಸಿ ಅವನಿಂದ ಆಧ್ಯಾತ್ಮ ವಿದ್ಯೆಯ ನಿರೂಪಣೆ ಮಾಡಿಸಿದ್ದನು. ಆದರೆ ಈಗಿನ ಸನ್ನಿವೇಶವು ಬೇರೆಯಾಗಿತ್ತು. ಇಲ್ಲಿ ಯುಧಿಷ್ಠಿರನೇ ನಿರ್ಣಯ ತೆಗೆದುಕೊಳ್ಳಬೇಕಾಗಿತ್ತು; ಅದರಂತೆ ಅವನು ತೆಗೆದುಕೊಂಡನು. ಕಾಮವು ಜೀವನದ ಮೂಲವಾದರೂ ಜೀವನದ ಧ್ಯೇಯವು ಮೋಕ್ಷವೇ ಆಗಿರುತ್ತದೆ – ಎಂಬ ತತ್ತ್ವವನ್ನು ಅವನೇ ಉಚ್ಚರಿಸಿದನು. ಕಾಮದ ಸ್ಥಾನದ ಬಗ್ಗೆ ಇಬ್ಬರೂ ಸೋದರರಲ್ಲಿ ಒಪ್ಪಂದ ವಾಯಿತು. ಧರ್ಮದ ಉಚ್ಚತರ ಸ್ಥಾನದ ಬಗೆಗೂ ಈಗ ಮತಭೇದ ಉಳಿಯಲಿಲ್ಲ; "ನೀನು ಹೇಳಿದಂತೆ ನಾನು ಮಾಡುತ್ತೇನೆಂ"ದು ಯುಧಿಷ್ಠಿರನು ಭೀಮನಿಗೆ ಹೇಳಿದ.

ಇಂತಹ ಈ ವಿದುರನು ಮನಸ್ಸಿನಿಂದ ಸತತವೂ ಯುಧಿಷ್ಠಿರನಿಗೆ ಹತ್ತಿರವಾಗಿಯೇ ಉಳಿದನು; ಕೊನೆಗೆ, ಅವಸಾನ ಕಾಲದಲ್ಲಿ, ಯುಧಿಷ್ಠಿರನ ಮುಖದತ್ತ ಏಕಾಗ್ರತೆಯಿಂದ ನೋಡುತ್ತ, ಅವನ ದೃಷ್ಟಿಯಲ್ಲಿ ತನ್ನ ದೃಷ್ಟಿಯನ್ನು ನೆಟ್ಟು, ಅವನ ಮತ್ತು ತನ್ನ ಮನಸ್ಸುಗಳು ಒಂದಾದುದನ್ನು ಅರಿತು ತನ್ನ ಪ್ರಾಣವನ್ನು ಯುಧಿಷ್ಠಿರನಲ್ಲಿ ವಿಸರ್ಜಿಸಿದನು. ಸಸ್ಯವು ಬೆಳಕಿನತ್ತ ವಾಲುತ್ತದೆ; ಹಾಗೆ ವಿದುರನು ಯುಧಿಷ್ಠಿರನತ್ತ ತಾನಾಗಿಯೇ ವಾಲಿದನು. ಒಂದು ಶಬ್ದವನ್ನೂ ಉಚ್ಚರಿಸದೆ, ಈ ಪ್ರಾಣಮಿಲನ ನಡೆಯಿತು. ಒಂದು ಜ್ಯೋತಿಯಲ್ಲಿ ಇನ್ನೊಂದು ಜ್ಯೋತಿಯು ಮಿಲನವಾಗುವುದು ಎಷ್ಟು ಸ್ವಾಭಾವಿಕವೋ ಪ್ರಶಸ್ತವೋ ಅಷ್ಟೇ ಸ್ವಾಭಾವಿಕವಾಗಿ ಪ್ರಶಸ್ತವಾಗಿ ಈ ಎರಡು ಜೀವಗಳ ಅಭಂಗ ಐಕ್ಯ ನಡೆದುಹೋಯಿತು. ಭಕ್ತನು ಈಶ್ವರನಲ್ಲಿ ಲೀನವಾಗುತ್ತಾನೆ; ಪ್ರೇಮಿಗಳು ಒಬ್ಬರಲ್ಲಿ ಒಬ್ಬರು ಕರಗಿಹೋಗುತ್ತಾರೆ; ವ್ಯಕ್ತಿಯು ಗುರಿಯಲ್ಲಿ ವಿಲೀನವಾಗುತ್ತಾನೆ; ಈ ಘಟನೆಗಳು ವಿರಳವಾದರೂ ಅಪರಿಚಿತವಲ್ಲ. ಆದರೆ ವಿದುರನ ಮರಣವನ್ನು ಮೃತ್ಯುವಿನಲ್ಲಿಯ ಶಾಂತಿಯ ಏಕಮೇವ ಪ್ರತೀಕವಾಗಿ ಕಾಣಿಸುವುದರಲ್ಲಿ ವ್ಯಾಸರು ತೋರಿದ ಜಾಣ್ಮೆಗೆ ಸಾಟಿಯೇ ಇಲ್ಲ. ಸ್ವಂತ ಅಸ್ತಿತ್ವದ ಅಸ್ಪಷ್ಟವಾದ ಕುರುಹೂ ಹಿಂದೆ ಉಳಿಯದಂತೆ ತಾನು ಸಾಯಬೇಕೆಂಬುದು ವಿದುರನ ಮನೀಷೆಯಾಗಿದ್ದಿರಬೇಕು. ಏಕೆಂದರೆ,

ದುರ್ಯೋಧನನಿಗೆ ಉಪದೇಶ ಮಾಡುವಾಗಲೂ ಧೃತರಾಷ್ಟ್ರನನ್ನು ಅನುಲಕ್ಷಿಸಿ ವಿದುರ ಹೇಳುತ್ತಾನೆ, "ಹಕ್ಕಿಯ ಹೆಜ್ಜೆ ಆಕಾಶದಲ್ಲಿ ಕಾಣುವುದಿಲ್ಲ; ಪ್ರಜ್ಞಾವಂತ ಮುನಿಯ ಹೆಜ್ಜೆಗಳು ಭೂಮಿಯ ಮೇಲೆ ಕಾಣುವುದಿಲ್ಲ" – ಎಂಬುದಾಗಿ.

ಈ ಪ್ರಸಂಗದಲ್ಲಿ ದಾಂತ (ಜಿತ) ಪುರುಷನ ಲಕ್ಷಣಗಳನ್ನು ವಿದುರನು ವಿಸ್ತಾರವಾಗಿಯೇ ವರ್ಣಿಸಿದ್ದಾನೆ. ಇದರಿಂದ ಇತರ ಪಾರಂಪರಿಕ ನೀತಿಗಳನ್ನೂ ಅವನು ಹೇಳಿದಂತೆಯೇ ಆಗಿದೆ. ಆದರೆ ಈ ಪಾರಂಪರಿಕ ದೃಷ್ಟಾಂತವು ತನ್ನ ಜೀವನದಲ್ಲಿ ಇಂಥ ವಿಲಕ್ಷಣ ರೀತಿಯಲ್ಲಿ ಸಾಕಾರವಾದೀತು ಎಂದು ವಿದುರನಿಗೆ ಅನಿಸಿರಬಹುದೇ? ಅಮೂರ್ತಕಾಮನೆಗೆ ಅವನ ಮರಣವೇ ಇಂಥ ಅಭಿನವರೂಪವನ್ನು ಕೊಟ್ಟಿತು. ಈ ಮಾನವತಾಪ್ರೇಮಿ, ಸರಳಹೃದಯಿ, ವಿದುರನ ವಿಸರ್ಜನೆ ಮಾನವನಲ್ಲಿಯೇ ಆಗಬೇಕೆಂಬ ಈ ಭಾಗ್ಯವು ಎಷ್ಟು ವಿಲಕ್ಷಣವಾಗಿದೆ, ಪ್ರೇರಕವಾಗಿದೆ! ಸಂಪೂರ್ಣವಾಗಿ ಮಾನವಮಯನಾದ ಸಂತನು ವಿದುರನ ಹೊರತು ಬೇರೆ ಯಾರಿರುವರು? ಅಧ್ಯಾತ್ಮದ ತೌಡು ಕುಟ್ಟದೆಯೇ ಸನಾತನ ಆಚಾರಮಯ ನೀತಿಯನ್ನು ಅವನು ಬ್ರಹ್ಮಜ್ಞಾನಕ್ಕಿಂತ ಮಿಗಿಲಾಗಿ ಶೃಂಗರಿಸಿದನು. ಮಾನವ ಪ್ರಾಣಿಯಲ್ಲಿ ಸನಾತನ ಸದಾಚಾರವೂ ಜೀವನದಷ್ಟೇ ವಿಶಾಲವೂ ಕಾಲಾತೀತವೂ ಆಗಿದೆ. ಮೃತ್ಯುವಿನಷ್ಟೇ ಕಾಲಾತೀತವೂ ಗೂಢವೂ ಆಗಿದೆ. ಗೂಢವಾಗಿದ್ದರೂ ಅಂತಃಕರಣದ ಸಕಲ ಪ್ರೇರಣೆಗಳಿಂದ ಅದನ್ನು ಮಾನವನು ಸಾಧ್ಯ ಮಾಡಿಕೊಳ್ಳುವಂತೆ ಇದೆ. ಮಾನವ ರೊಳಗಿನ ಈ ನಿಶ್ಶಬ್ದ ಶ್ರದ್ಧೆಯನ್ನು ವಿದುರನು ಪ್ರತ್ಯಕ್ಷವಾಗಿ ಅನುಭವಿಸಿದನು ಮತ್ತು ಮಾನವತೆಗೆ ಅದರ ಬಾಗಿಲನ್ನು ತೆರೆದುಕೊಟ್ಟನು. ಮಾನವನ ಮೂಲವು ಮಾನವನೇ; ಧ್ಯೇಯವೂ ಮಾನವನೇ. ಇದೇ ವಿದುರನ ಜೀವನದ ಸಾರವಾಗಿದೆ.



# ಕಾಮಿನಿ

ಮಹಾಭಾರತದಲ್ಲಿ, ಚಡಪಡಿಸುವ ಮನಸ್ಸುಗಳಿಗೇನೂ ಕೊರತೆಯಿಲ್ಲ. ಜೀವಜಂತುಗಳ ಅಂಗೋಪಾಂಗಗಳ ಮೂಲಕ ಹಾದುಹೋಗುವ, ಜೀವನದ ಎಲ್ಲ ಕ್ಷಿತಿಜಗಳನ್ನೂ ಸಮಭಾವದಿಂದ ಸ್ಪರ್ಶಿಸುವ, ಸುಖದುಃಖಗಳನ್ನು ಒಂದೇ ತೆಕ್ಕೆಯಲ್ಲಿ ಹಿಡಿಯುವ, ನಿಯತಿಯ ಉಗ್ರ ಮಧುರ ಪ್ರಜ್ಞೆಯನ್ನು ವ್ಯಾಸರು, ಮೊದಲಿಂದ ಕೊನೆಯ ತನಕವೂ ನಿರಂತರವಾಗಿ ಆಟವಾಡಿಸಿದ್ದಾರೆ. ಆದರೆ, ಈ ಪ್ರಜ್ಞೆಯ ಮೂರ್ತಸ್ವರೂಪವನ್ನು ಒಂದು ವ್ಯಕ್ತಿಯ ರೂಪದಲ್ಲಿ ಎರಕ ಹೊಯ್ದು, ಅದರೊಳಗಿಂದ ಸ್ತ್ರೀಜಾತಿಯ ಸನಾತನ ತೇಜಸ್ಸನ್ನೂ ದೌರ್ಬಲ್ಯ ವನ್ನೂ ಅವರು ದ್ರೌಪದಿಯ ರೂಪದಿಂದ ಮನೋಜ್ಞವಾಗಿ ಮೂಡಿಸಿದ್ದಾರೆ. ಪ್ರೀತಿ–ರತಿ, ಭಕ್ತಿ–ಮೈತ್ರಿ, ಸಂಯಮ–ಆಸಕ್ತಿ ಈ ಭಾವನೆಗಳ ದ್ವಂದ್ವದೊಳಗಿನ ಸೂಕ್ಷ್ಮತ್ರೂಕವು ದ್ರೌಪದಿಯ ವ್ಯಕ್ತಿತ್ವದಲ್ಲಿ ಕಂಡುಬರುವಂತೆ ಇತರ ಯಾವ

ಪೌರಾಣಿಕ ಸ್ತ್ರೀಯ ವ್ಯಕ್ತಿತ್ವದಲ್ಲೂ ಕಂಡುಬರುವುದಿಲ್ಲ. ಆದ್ದರಿಂದಲೇ ದ್ರೌಪದಿಯದು ಒಂದು ಅತಿಶಯ ಸ್ಫುರಣಶೀಲ ಮನಸ್ಸಾಗಿದೆ. ಅದರಲ್ಲಿ ವಿಲಕ್ಷಣವಾದ ಪಾಶವೀಚೈತನ್ಯವಿದೆ; ಊಹಿಸಲಾಗದ ಬುದ್ಧಿಮತ್ತೆಯಿದೆ; ಅತಿಶಯ ಶುದ್ಧವಾಸನೆಗಳ ಆಶ್ಚರ್ಯಕರ ಉತ್ಕಟತೆಯಿದೆ. ಬಹಳಷ್ಟು ಸಲ ಅದು ಪ್ರಚಂಡ ಪ್ರಕ್ಷೋಭೆಯ ರೂಪ ತಾಳುತ್ತದೆ. ಅದರಿಂದಾಗಿ, ದ್ರೌಪದಿಯ ಮನಸ್ಸಿನ ಚಡಪಡಿಕೆಯು, ಮಹಾಭಾರತದಲ್ಲಿಯ ವಿಲಕ್ಷಣ ಸುಂದರ ಅಶಾಂತತೆಯ ಮೂಲಸ್ರೋತವಾಗಿದೆ.

ಈ ಅಶಾಂತತೆಯನ್ನು ವ್ಯಾಸರು ಅತಿ ಸುಂದರ ರಮಣೀಯ ದೇಹದಲ್ಲಿ ಅಡಗಿಸಿಟ್ಟಿದ್ದಾರೆ. ಅವಳ ಕಡುಗಪ್ಪು ಕುರುಳುಗಳ ತೆರೆಗಳಂತೆಯೇ ಕ್ರೋಧದ ತಳಕಾಣದ ತೆರೆಗಳು ಕೂಡ ಅವಳ ಸುತ್ತ ಸುತ್ತುವಂತೆ ಮಾಡಿದ್ದಾರೆ. ದ್ರೌಪದಿಯ ವ್ಯಕ್ತಿತ್ವವು ಆ ಮೂಲಕ ಏನೋ ಬೇರೆಯದೇ ಆಗಿದೆ ಗಾಳಿಯ ಹೊಡೆತಕ್ಕೆ ತತ್ತರಿಸುವ ಬೆಳಕಿನ ಕುಡಿಯಂತೆ ಕಾಣಿಸುತ್ತಾಳೆ ಅವಳು. ಹೆಚ್ಚೇನು, ಗಾಳಿ ಬೀಸುತ್ತಿರುವ ತನಕ ತತ್ತರಿಸುತ್ತ ಉರಿದು, ಸಂಕಟದ ಗಾಳಿ ಕುಗ್ಗಿದೊಡನೆ ಆರಿ ಶಾಂತವಾದ ದೀಪದಂತೆ ಅವಳು ನನ್ನ ಕಣ್ಣೆದುರು ನಿಲ್ಲುತ್ತಾಳೆ. ದ್ರೌಪದಿಯ ಜನನವು – ಅದೂ ಯಜ್ಞದ ಅಗ್ನಿಯಲ್ಲೇ ಆದದ್ದು – ಅವಳ ಸಮಗ್ರ ವ್ಯಕ್ತಿತ್ವಕ್ಕೆ ಪ್ರತೀಕವಾಗಿದೆ. ಭೀಷ್ಮನ ಅಂತ್ಯಕ್ಕೆ ಸಂಬಂಧಿಸಿದ ದೈವಿಕಯೋಜನೆಯಲ್ಲಿ ದ್ರೌಪದಿಯೂ ಶಿಖಂಡಿಯಷ್ಟೇ ಮಹತ್ವ ಹೊಂದಿದ್ದಾಳೆ. ಅವಳ ಜನ್ಮವು ಭೋಗಕ್ಕಾಗಿ ಆಗಿಲ್ಲ; ಸುಡುವುದಕ್ಕಾಗಿಯೇ ಆಗಿದೆ. ಆದಾಗ್ಯೂ, ದ್ರೌಪದಿಯು ಕೇವಲ ದೈವಿಕ ಶಕ್ತಿಯ ಮಾನವ ಪ್ರತೀಕವಲ್ಲ. ಆಕೆ ಸಂಪೂರ್ಣ ಮಾನವಳೇ ಆಗಿದ್ದಾಳೆ. ಉತ್ಕಟ, ವಿರಾಟ ಮತ್ತು ಪ್ರಾಕೃತಿಕ ಸ್ತ್ರೀತ್ವದ ಆವಿಷ್ಕಾರವು ದ್ರೌಪದಿಯಲ್ಲಿಯಂತೆ ಬೇರೆಡೆ ದೊರೆಯುವುದು ಕಠಿಣ.

ಈ ಯಾಜ್ಞಸೇನಿಯು ಬಹಳ ಸುಂದರಿ. ಮಹಾಭಾರತದ ಎಲ್ಲ ನಾಯಕಿಯರೂ ಸುಂದರಿಯರೇ. ಊರ್ವಶಿ, ದೇವಯಾನಿ, ಶರ್ಮಿಷ್ಠೆ, ಶಕುಂತಲೆ, ದಮಯಂತಿ, ತಪತಿ, ಸತ್ಯವತಿ, ಕುಂತಿ, ಗಾಂಧಾರಿ, ಸುಭದ್ರೆ – ಇವರಲ್ಲಿ ಯಾರು ತಾನೆ ತಮ್ಮ ಚೆಲುವಿಕೆಗೆ ಪ್ರಸಿದ್ಧರಾಗಿಲ್ಲ? ಅವರೆಲ್ಲರ ಸೌಂದರ್ಯದ ಹಿರಿಮೆಯನ್ನೂ ವ್ಯಾಸರು ಎತ್ತಿಹಿಡಿದಿದ್ದಾರೆ. ಆದರೂ ದ್ರೌಪದಿಯ ಸೌಂದರ್ಯ ಮಾತ್ರ ಅಲೌಕಿಕವಾಗಿದ್ದು ಈ ಎಲ್ಲರದ್ದಕ್ಕಿಂತ ಭಿನ್ನವಾಗಿದೆ. ಕುಂತಿಯ ಸೌಂದರ್ಯದಿಂದ ಸುಭದ್ರೆಯ ಸೌಂದರ್ಯವನ್ನು ಬೇರ್ಪಡಿಸಲು

ಬರುವುದಿಲ್ಲ. ಶಕುಂತಲೆ ಮತ್ತು ತಪತಿ ಈ ಸಂಗಮೋತ್ಸುಕ ಕುಮಾರಿಯರ ಸೌಂದರ್ಯವು ವ್ಯಾಸರಿಗೆ ಸಮಾನವಾಗಿ ಕಂಡಿದೆ. ಈ ಸ್ತ್ರೀಯರ ಸೌಂದರ್ಯದ ಭಿನ್ನತೆಯನ್ನು ಹೆಕ್ಕಿತೆಗೆದು ಹೇಳುವುದು ವ್ಯಾಸರಿಗೆ ಸಾಧ್ಯವಾಗಲಿಲ್ಲ. ಸೌಂದರ್ಯ ಒಂದೇ; ಆದರೆ, ಅದಕ್ಕೆ ದೊರೆತ ದೇಹಗಳ ಆಕಾರ ವಿಭ್ರಮ ಗಳಷ್ಟೇ ಬೇರೆ ಬೇರೆ. ಈ ವಿಭ್ರಮಗಳು ತಾತ್ಕಾಲಿಕವಾದವು ಮತ್ತು ಆಯಾಸ್ಥಾನಗಳಲ್ಲಿಯೇ ಕಾಣಿಸಿಕೊಂಡಂತಹವು. ಪ್ರಿಯನ ಸಹವಾಸದಲ್ಲಿಯೇ ಆ ಸೌಂದರ್ಯದ ಸಫಲತೆಯಿತ್ತು, ಪರಿಣತಿಯಿತ್ತು. ಆ ಕ್ಷೇತ್ರದ ಹೊರಗೆ ಆ ಸೌಂದರ್ಯದ ಪ್ರಯೋಜನವಿದ್ದಿಲ್ಲ. ಆದರೆ ದ್ರೌಪದಿಯ ಸೌಂದರ್ಯ ವನ್ನಾದರೊ, ವ್ಯಾಸರು ಒಂದು ವಿಲಕ್ಷಣ ಅನುಭೂತಿಯ ಪ್ರಜ್ಞೆಯಲ್ಲಿ ನಿರ್ಮಿಸಿದ್ದಾರೆ. ದ್ರೌಪದಿಯ ಭೂಮಿಕೆಯು ಪ್ರಧಾನ ಭೂಮಿಕೆಯಾಗಿದೆ ಯೆಂಬ ಅರಿವಿನಿಂದ ಅವಳ ಆಕೃತಿಯು ನಿರ್ಮಾಣವಾಗಲಿಲ್ಲ. ಹೆಚ್ಚೇನು, ಅವಳ ಪ್ರಧಾನ ಭೂಮಿಕೆ ಹಾಗೂ ಅವಳ ಸೌಂದರ್ಯ ಇವುಗಳ ನಡುವಿನ ಸಂಬಂಧ ಕೂಡ ಅಷ್ಟೇನೂ ಗಾಢವಾಗಿಲ್ಲ–ಸೀತೆಯದು ಇರುವಂತೆ. ಸೀತೆಯ ರೂಪದ ಮೂಲಕವೇ ರಾಮಾಯಣದೊಳಗಿನ ಸಂಘರ್ಷವು ಉತ್ಪನ್ನ ವಾಯಿತು. ಆದರೆ ದ್ರೌಪದಿಯ ಸೌಂದರ್ಯದಿಂದಾಗಿ ಮಹಾಭಾರತದಲ್ಲಿಯ ವಿಗ್ರಹಕ್ಕೆ ಚಾಲನೆ ದೊರೆತಿಲ್ಲ; ದ್ರೌಪದಿಯು ಆ ಸಂಘರ್ಷದ ಕೇಂದ್ರ ಬಿಂದುವಾಗಿದ್ದಿಲ್ಲ; ರಾಜಸತ್ತೆಯು ಆದರ ಕೇಂದ್ರವಾಗಿತ್ತು.

ಮಹಾಭಾರತದೊಳಗಿನ ನಾಟ್ಯವು ದಾಯಾದಕಲಹದಿಂದಾದದ್ದೇ ಹೊರತು, ನಾಯಕಿಗಾಗಿ ನಡೆದ ಸ್ಪರ್ಧೆಯಿಂದಾದುದಲ್ಲ. ದ್ರೌಪದಿಯ ಬದುಕಿನಲ್ಲಿ ಸ್ಪರ್ಧೆ ಇಲ್ಲವೆಂಬುದಿದೆಯೆ? ಸ್ವಯಂವರದಲ್ಲಿ ಅಣ್ಣತಮ್ಮಂದಿರು ಅವಳನ್ನು ಹಂಚಿಕೊಂಡರು. ಅದರ ತಳದಲ್ಲಿ ಕುಂತಿಯ ಆಣತಿಗಿಂತಲೂ ಆಕೆಯು ಒಬ್ಬನಿಗೇ ಹೆಂಡತಿಯಾದರೆ ಇತರರ ಮನಸ್ಸು ಕೆಡಬಹುದು, ಸೋದರರ ಒಗ್ಗಟ್ಟು ಒಡೆಯಬಹುದು, ಹಾಗೆ ಆಗಬಾರದು–ಎಂಬ ಕಾರಣವೇ ಹೆಪ್ಪುಗಟ್ಟಿ ಕುಳಿತಿತ್ತು. ಜಯದ್ರಥ ಕೀಚಕ ಮುಂತಾದವರ ವರ್ತನೆಯಲ್ಲೂ ಸ್ಪರ್ಧೆಗಿಂತ ಬೇರೆ ಇನ್ನೇನಿದೆ? ಆದರೆ ಸ್ಪರ್ಧೆಯು ದ್ರೌಪದಿಯ ಜೀವನದಲ್ಲಿಯೂ ಕೇಂದ್ರಬಿಂದುವಾದದ್ದಿಲ್ಲವೆಂದಾಗ, ಅದು ಮಹಾಭಾರತದ ಕೇಂದ್ರಬಿಂದು ಹೇಗಾದೀತು? ಸಭೆಯಲ್ಲಿಯ ದ್ರೌಪದಿಯ ವಿಡಂಬನೆಯು ಸ್ವಯಂವರದ ಪ್ರಸಂಗದಿಂದ ರಾಜಸೂಯಯಾಗದವರೆಗೆ ಸ್ಪರ್ಧೆಯ ಭ್ರಮೆಯನ್ನು ನೆಲೆನಿಲ್ಲಿಸಿಬಿಟ್ಟಿತು. ಅನಂತರ ರಜಸ್ವಲೆಯಾಗಿದ್ದ ಅವಳನ್ನು

ಸಭೆಗೆ ತಂದು ಆ ಸ್ಪರ್ಧೆಯ ನಾಟಕಕ್ಕೆ ಉಪನಾಟಕದ ಸ್ವರೂಪವನ್ನೂ ಕೊಡಲಾಯಿತು. ಜಯದ್ರಥ ಮತ್ತು ಕೀಚಕ ಇರದಿದ್ದರೆ ಈ ಉಪನಾಟಕವು ನೀರಸವಾಗುತ್ತಿತ್ತು. ಕೃಷ್ಣನಿಲ್ಲದಿದ್ದರೆ ಸ್ಪರ್ಧೆಯೊಳಗಿನ ಬಯಕೆಯ ಕಮನೀಯ ರೂಪವು ಪ್ರಕಟವಾಗುತ್ತಿರಲಿಲ್ಲ.

ದ್ರೌಪದಿಯ ಸೌಂದರ್ಯದ ಸ್ವರೂಪವೂ ಬೇರೆ, ಬಣ್ಣವೂ ಬೇರೆ. ಇತರ ನಾಯಕಿಯರು ಗೌರವರ್ಣದವರು. ಕೆಲವರು ತಾವರೆಯಂತೆ ಗುಲಾಬಿಯಂತೆ ತಿಳಿಗೆಂಪು ಬಣ್ಣದವರು; ಕೆಲವರು ಬೆಳ್ದಾವರೆಯ ಬಣ್ಣದವರು; ಇನ್ನು ಕೆಲವರು ಹಳದಿಯ ಕಮಲಗಳಂತಹವರು. ಯಾಜ್ಞಸೇನಿಯದು ಎಲ್ಲವೂ ಬೇರೆಯೇ. ಭಾರತೀಯ ಶ್ಯಾಮವರ್ಣ ಸೌಂದರ್ಯದ ಪರಾಕಾಷ್ಠೆ ಆಕೆ. ಅವಳ ರೂಪದ ಮೂಲ ಶಚೀದೇವಿಯಲ್ಲಿದೆ ಮತ್ತು ಕೇವಲ ರೂಪರಾಶಿಯೇ ಶಚಿಯ ವೈಶಿಷ್ಟ್ಯ. ಅವಳ ಈ ಪಾರ್ಥಿವ ರೂಪವು ನೀಲಮಣಿಯ ಕಾಂತಿಯನ್ನು ತಾಳಿ ಅವತರಿಸಿತು. ದ್ರೌಪದಿಯ ಕಣ್ಣುಗಳು ಕಮಲದ ದಳಗಳಂತೆ ವಿಶಾಲವಾದವು ಕಾಂತಿಯುತವಾದವು. ತಲೆಗೂದಲು ಉದ್ದಕ್ಕೆ ಗುಂಗುರು ಗುಂಗುರಾಗಿ ಇತ್ತು. ಅವಳ ಎಲ್ಲ ಸೌಂದರ್ಯದ ರಹಸ್ಯವೂ ಅವಳ ಅಂಗೋಪಾಂಗಗಳ ಪ್ರಮಾಣಬದ್ಧತೆಯಲ್ಲಿ ಅಡಗಿದೆ. ಆಕೆ ಎತ್ತರವಾಗಿಲ್ಲ, ಕುಳ್ಳಾಗಿಲ್ಲ; ಬಡಕಲಾಗಿಲ್ಲ, ದಪ್ಪವಾಗಿಯೂ ಇಲ್ಲ. ತೇಜಸ್ಸು–ಕೋಮಲತೆಗಳು ಅವಳ ಅಂಗಾಂಗಗಳಲ್ಲಿ ತುಂಬಿತುಳುಕುತ್ತಿವೆ. ಅವಳ ಪ್ರತಿಯೊಂದು ವಿಭ್ರಮವೂ ಆಕರ್ಷಕವಾದುದು, ಬಯಕೆಯನ್ನು ಉಂಟುಮಾಡುವಂತಹದು. ಅವಳತ್ತ ನೋಡಿದವನು ಅವಳನ್ನು ಹೊಂದಲು ಬಯಸದೇ ಇರುವುದು ಸಾಧ್ಯವೇ ಇರಲಿಲ್ಲ. ಸೈರಂಧ್ರಿರೂಪದ ಅವಳ ಸೌಂದರ್ಯವನ್ನು ಕುರಿತು ಸುದೇಷ್ಣೆ ತೆಗೆದ ಉದ್ಗಾರವು ಉಲ್ಲೇಖನೀಯವಾಗಿದೆ. "ಅಮ್ಮಯ್ಯ! ನಿನ್ನನ್ನು ನನ್ನ ಮನೆಯಲ್ಲಿ ದಾಸಿಯಾಗಿ ಹೇಗೆ ಇಟ್ಟುಕೊಳ್ಳಲಿ? ನಿನ್ನ ಅತಿಶಯ ಮೋಹಕ ಲಾವಣ್ಯವನ್ನು ನಾನು ಎಲ್ಲಿಯೂ ಈ ವರೆಗೆ ನೋಡಿಲ್ಲ; ನಿನ್ನನ್ನು ಕಂಡರೆ ಹೆಂಗಸರೂ ಮೋಹಿತರಾಗುತ್ತಾರೆ; ಅಂಥದರಲ್ಲಿ ಗಂಡಸರ ಕತೆಯೇನು? ನೀನೇನಾದರೂ ನನ್ನ ಗಂಡನ ಕಣ್ಣಿಗೆ ಬಿದ್ದದ್ದೇ ಆದರೆ ನನ್ನ ರಾಣಿಪದವಿಯು ಕೊನೆಗೊಂಡಂತೆಯೇ! ಆದ್ದರಿಂದ ಇಲ್ಲಿರಬೇಡ ಹೊರಡು" ಎನ್ನುತ್ತಾಳೆ ಆಕೆ.

ಇಂತಹ ಈ ಕಾಮಕಲಿಕೆ ದ್ರೌಪದಿಯು ಜನ್ಮತಃ ಉರಿಯುವ ಉರಿಸುವ ರೂಪವನ್ನು ತಾಳಿಬಂದವಳು. ಅವಳ ಭಾವಸಂಪನ್ನವಾದ ಉಕ್ಕೇರಿ

ಬರುವಂತಹ ಪ್ರವೃತ್ತಿಗಳು ಅತಿಶಯ ಗಂಭೀರ. ಅವಳ ಬುದ್ಧಿಯು ಅತಿಶಯ ಚಪಲ ಮತ್ತು ಸುಸಂಸ್ಕೃತ. ಅವಳ ವಾಸನೆಗಳು ಕೋಮಲ ಮತ್ತು ಪ್ರಾಕೃತಿಕ. ಅವಳನ್ನು ಕನ್ಯೆ ಇಲ್ಲವೇ ಕುಮಾರಿಯಾಗಿ ತೋರಿಸದೆ ಒಮ್ಮೆಲೇ ತರುಣಿಯಾಗಿ ತೋರಿಸುವಲ್ಲಿ ವ್ಯಾಸರು ಹೆಣ್ಣಿನ ಅಸಂಕೀರ್ಣ ಮತ್ತಯೌವನದ ಒಂದು ಉತ್ಕೃಷ್ಟ ಪ್ರತೀಕವನ್ನೇ ನಿರ್ಮಿಸಿದ್ದಾರೆ. ಅವಳ ತಾರುಣ್ಯವು ಅವಳ ರೂಪದ ರಮ್ಯ ಭೀಷಣ ಪರಿಪಾಕ; ಅವಳ ಜೀವನದಿಂದ ಬೇರೆ ಮಾಡಲು ಬಾರದಂತಹುದು. ಜಯದ್ರಥ ವಧೆಯು ರೂಪವಿಧಾನದಲ್ಲಿಯ ಕೊನೆಯ ಉಚ್ಚಬಿಂದು. ಅನಂತರ ಯುದ್ಧವಾಗುತ್ತದೆ. ಆ ಯುದ್ಧದಲ್ಲಿ ದ್ರೌಪದಿಗೆ ಸ್ಥಾನವೇ ಇರುವುದಿಲ್ಲ. ಯುದ್ಧದಲ್ಲಿ ಅವಳ ಮಕ್ಕಳು ಮಡಿದರು. ಆದರೂ ಪುತ್ರವಿಯೋಗದ ಎಲ್ಲ ಶೋಕನಾಟಕವನ್ನೂ ವ್ಯಾಸರು ಸುಭದ್ರೆಯ ಸುತ್ತಲೂ ಆಡಿಸಿದರು. ದ್ರೌಪದಿಯು ಆಮೇಲೆ ಕೇವಲ ರಾಣಿಯಾಗಿ ಉಳಿದಳು. ಅನಂತರ ವ್ಯಾಸರು, ಆ ರೂಪವನ್ನು ಪ್ರೌಢತ್ವದ ಸಾಫಲ್ಯದ ಆವರಣದಲ್ಲಿ ಶಾಶ್ವತವಾಗಿ ಮುಚ್ಚಿಹಾಕಿಬಿಟ್ಟರು.

ದ್ರೌಪದಿಯು ಮೂಲತಃ ತರುಣಿ; ಆದರಲ್ಲಿಯೂ ಸಂಗಮೋತ್ಸುಕೆ – ಮಹಾಭಾರತದ ಉಳಿದೆಲ್ಲ ಸುಂದರ ನಾಯಕಿಯರಂತೆಯೆ. ಆದರೆ ಅವರೆಲ್ಲರಿಗಿಂತ ಭಿನ್ನವಾದ ವೈಶಿಷ್ಟ್ಯವು ದ್ರೌಪದಿಯಲ್ಲಿದೆ. ಪುರುಷರ ಮೇಲೆ ಪ್ರಭಾವ ಬೀರಬಲ್ಲೆನೆಂಬ ಸ್ತ್ರೀ ಸಹಜ ಅಭಿಮಾನವು ಅವಳ ಪ್ರತಿಯೊಂದು ಪ್ರವೃತ್ತಿಯೊಳಗಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಪ್ರಕಟವಾದದ್ದು ಕಂಡುಬರುತ್ತದೆ. ಮಹಾಮಾನಿನಿ ದ್ರೌಪದಿಯ ಸ್ವಭಾವದ ಕೇಂದ್ರಬಿಂದುವು ಇದೇ ಆಗಿದೆ. ಯಾವ ಪುರುಷನಿಗೆ ತನ್ನನ್ನು ಕುರಿತು ಏನೆನ್ನಿಸುತ್ತದೆ, ಅವನ ಆಕರ್ಷಣೆಯನ್ನು ದೂರವಿರಿಸಬೇಕೋ ಹತ್ತಿರ ತರಿಸಬೇಕೋ – ಈ ನಿರ್ಣಯವನ್ನು ಅವಳ ಬಹುಬೇಗ ಕೈಗೊಳ್ಳಬಲ್ಲವಳಾಗಿದ್ದಳು. ಕರ್ಣನಿಗೆ ಒಮ್ಮೆಲೆ ನಕಾರ ನೀಡಿದಳು. ತನ್ನನ್ನು ಗೆದ್ದಾಗ ಒಬ್ಬ ದರಿದ್ರ ಬ್ರಾಹ್ಮಣ ಪುತ್ರನಂತಿದ್ದರೂ ಅರ್ಜುನನನ್ನು ವರಿಸಿದಳು. ಇಷ್ಟೇ ಅಲ್ಲ; ಕುಂತಿಯ ಮಾತನ್ನು ನಿಜಮಾಡುವ ಯೋಗಾಯೋಗವನ್ನೇ ಸಾಧಿಸಿ, ಐದು ಜನರನ್ನೂ ವರಿಸಲು ಅವಳು ಹರ್ಷವ್ಯಕ್ತಪಡಿಸಿದಳು. ತಾರುಣ್ಯವು ಅವಳ ನರನಾಡಿಗಳಲ್ಲಿ ಹರಿದಾಡುತ್ತಿತ್ತು; ಅದಕ್ಕೆ ಯೋಗ್ಯವಾದ ವಾಸನೆಗಳೂ ಅವಳಲ್ಲಿ ಉದ್ದೀಪನಗೊಂಡಿದ್ದವು. ಐದು ಜನ ಗಂಡಂದಿರಿದ್ದ ಪತಿವ್ರತೆ, ಪ್ರಪಂಚದಲ್ಲಿ, ದ್ರೌಪದಿಯನ್ನು ಬಿಟ್ಟರೆ ಬೇರೆ ಯಾರೂ ಇಲ್ಲ.

ದ್ರೌಪದಿಯ ಪಾತಿವ್ರತ್ಯವು ಖೊಟ್ಟಿಯಾಗಿರಲಿಲ್ಲ. ಆದರೆ ಅವಳ ವಾಸನೆಗಳು ಅವಳ ಪ್ರಣಯಭಾವನೆಗಳು ಅತ್ಯಂತ ಸ್ವನಿಯಂತ್ರಿತವಾಗಿದ್ದವು. ತೀವ್ರವೂ ಚತುರವೂ ಆದ ಸ್ವಬುದ್ಧಿ, ಪ್ರಾಕೃತಿಕ ವಾಸನೆ, ರೂಪ ಗರ್ವಿತೆ-ಇವುಗಳ ಮೇಳಗೂಡಿಸುವುದಾದರೆ ಅದಕ್ಕೆ ದ್ರೌಪದಿಯಷ್ಟು ಸಮರ್ಪಕ ಪ್ರತೀಕ ಇನ್ನೊಂದಿಲ್ಲ. ಆದ್ದರಿಂದಲೇ ವ್ಯಾಸರು ಅವಳ ಪ್ರಣಯಾನುಭವದ ಕೆಲವು ಅತ್ಯಂತ ಕೋಮಲ ಛಾಯೆಗಳನ್ನಷ್ಟೇ ಸೂಚಿಸಿ ಹೆಚ್ಚಿನ ವಿವರಣೆಯನ್ನು ಕಲ್ಪನೆಗೇ ಬಿಟ್ಟುಕೊಡುವುದು. ಆ ಗೂಢ ನಾಟಕದ ಸವಿಸ್ತಾರವಾದ ಉಲ್ಲೇಖವನ್ನು ಮಾಡುವುದೆಂದರೆ ಅದರಲ್ಲಿಯ ಆಕರ್ಷಣೆಯ ಶತರಂಗೀ ಭಾವವನ್ನು ಹಗುರಗೊಳಿಸಿದಂತೆಯೇ.

ದ್ರೌಪದಿಗೆ ಐವರು ಪತಿಗಳು. ಯಾವುದೋ ಪ್ರಾಂತದಲ್ಲಿಯ ಯಾವುದೋ ಜಾತಿಯೊಳಗಿನ ಬಹುಪತಿತ್ವ ಪದ್ಧತಿಯನ್ನು ಉಲ್ಲೇಖಿಸಿ ಕೆಲವರು ಇದಕ್ಕೆ ಆ ಆಧಾರವನ್ನು ಅನ್ವಯಿಸುವ ಪ್ರಯತ್ನ ಮಾಡಿದ್ದಾರೆ. ಆದರೆ ನನಗೆ ಹಾಗೆನಿಸುವುದಿಲ್ಲ. ಮಹಾಭಾರತದಲ್ಲಿ ದ್ರೌಪದಿಗೆ ಯೋಗಾಯೋಗದಿಂದ ಬಂದಿರುವ ಈ ಸ್ಥಿತಿಯಲ್ಲಿ ನನಗೆ ಒಂದು ವಿಶಿಷ್ಟ ಅಭಿಪ್ರಾಯವು ಕಾಣಿಸುತ್ತದೆ. ಇನ್ನು ಈ ಅಭಿಪ್ರಾಯವನ್ನು ವ್ಯಾಸರು ಕೇವಲ ಸೂಚನಾ ಮಾತ್ರವಾಗಿ ನಿರೂಪಿಸಿ ವಿವರಣೆಯನ್ನು ಕೈಬಿಟ್ಟಿದ್ದಾರೆ. ಕುಂತಿ ಮತ್ತು ದ್ರೌಪದಿ – ಅತ್ತೆ, ಸೊಸೆ; ಎಂದರೆ ಒಂದೇ ವಂಶದ ವರ್ಧಮಾನ ಹೊಣೆಗಾರಿಕೆಯುಳ್ಳ ಇಬ್ಬರು ಸ್ತ್ರೀಯರು. ಕುಂತಿಗಾದರೋ ವರಗಳು ದೊರೆತಿದ್ದವು; ಅವುಗಳ ಮೂಲಕವಾಗಿ ತನ್ನ ಕಾಮಪೂರ್ತಿಗಾಗಿ ದೇವತೆಗಳನ್ನು ಕರೆಯುವುದು ಅವಳಿಗೆ ಸುಲಭಸಾಧ್ಯವಾಯಿತು. ಪರಂಪರೆಯಿಂದ ಬಂದ ಸುಭಾಷಿತವೊಂದರಲ್ಲಿ, "ದ್ರೌಪದಿಯು ಐದು ಮಂದಿಗೆ ಕಾಮ್ಯಳಾದಳು; ಕುಂತಿಯೂ ಹಾಗೆಯೇ" ಎಂಬುದಾಗಿ ಹೇಳಿದೆ. ತಿಳಿಯದೆಯೇ ಈ ಸುಭಾಷಿತವು ಇವರೀರ್ವರ ಮಾನಸಿಕ ಹಾಗೂ ದೈಹಿಕ ಸಾಧರ್ಮ್ಯದ ಉಲ್ಲೇಖವನ್ನು ಮಾಡಿದೆ. ಈ ಇಬ್ಬರ ಮನಸ್ಸುಗಳ ರಚನೆ ಈ ವಿಷಯದಲ್ಲಿ ಒಂದೇ ಆಗಿತ್ತು. ಈ ರೀತಿಯಿಂದ ಹುಟ್ಟಿದ ಕುಂತಿಯ ಸಂತತಿಯನ್ನು ಜೋಪಾನ ಮಾಡುವ ಕೆಲಸವು ದ್ರೌಪದಿಯಂಥವರಿಂದಲೇ ಆಗಬೇಕು. ಇದೊಂದು ಯೋಗಾಯೋಗವಲ್ಲ; ಒಂದು ಅನುಕ್ತ ಸಂಕೇತ. ಯಾರ ಗಮನಕ್ಕೂ ಬಾರದ ರೀತಿಯಲ್ಲಿ ವ್ಯಾಸರು ಇದನ್ನು ಬಳಸಿರಬೇಕೆಂದು ಕಾಣುತ್ತದೆ. ಏಕೆಂದರೆ ಇದರ ಮೇಲೆ ಸ್ವಲ್ಪ ಒತ್ತುಕೊಟ್ಟರೂ ಕುಂತಿ ದ್ರೌಪದಿಯರ ವ್ಯಕ್ತಿತ್ವದಲ್ಲಿಯ ಸಮಗ್ರ ಸೌಂದರ್ಯವೂ ಔಚಿತ್ಯವೂ ನಷ್ಟವಾಗಿ

ಬಿಡುತ್ತಿತ್ತು. ಆದ್ದರಿಂದಲೇ ಅವರು ಕುಂತಿಯ ಸುತ್ತಲೂ ನಿರಂತರ ದುಃಖ ಗಳನ್ನೇ ಇಟ್ಟರು. ದ್ರೌಪದಿಯು ಇಂದ್ರಾಣಿಯ ರೂಪವೆಂದು ತೋರಿಸಿದರು. ಇಂದ್ರರು ಅನೇಕ; ಆದರೆ ಇಂದ್ರಾಣಿ ಒಬ್ಬಳೇ. ಈ ಪುರಾತನ ಸಂಕೇತವನ್ನು ವ್ಯಾಸರು ದ್ರೌಪದಿಯಲ್ಲಿ ಎಷ್ಟು ಚತುರತೆಯಿಂದ ಬಳಸಿದ್ದಾರೆ! ಪಾಂಡವರು ಕುಂತಿಯ ಮಕ್ಕಳು. ಆದ್ದರಿಂದಲೇ ಅವರಿಗೆ ದ್ರೌಪದಿಯೊಂದಿಗೆ ಹೀಗೆ ಸಮಾನ ಸಂಬಂಧ ಕಲ್ಪಿಸುವುದು ಇಷ್ಟವೆನಿಸಿತು, ಶಕ್ಯವೂ ಆಯಿತು. ಇದೂ ಅಷ್ಟೇ ನಿಜ.

ದ್ರೌಪದಿಯ ಸ್ವಭಾವದಲ್ಲಿಯ ಸಕಾಮತೆಯ ಈ ತಂತು ಪರಂಪರೆಯಲ್ಲಿ, ಅವಳ ಮನಸ್ಸು ಕರ್ಣನ ಮೇಲೆ ಹೋಗಿತ್ತು; ಕೊನೆಯ ತನಕ ಅವಳು ಅವನನ್ನು ಮರೆಯಲಾರದೆ ಹೋದಳು. ಆ ಮೂಲಕ ಕೊನೆಗೆ ಅವಳ ದೇಹಪಾತ ವಾಯಿತು; ಅವಳು ಸದೇಹಿಯಾಗಿ ಸ್ವರ್ಗಕ್ಕೆ ಹೋಗಲಾರದವಳಾದಳು; ಎಂಬಂತಹ ಅಭಿಪ್ರಾಯವನ್ನು ಕಾಪಾಡಿಕೊಂಡು ಬಂದಿರುವುದು ಕಾಣುತ್ತದೆ. ಕೃಷ್ಣನ ವಿಷಯದಲ್ಲಿ ಹೇಗೋ ಹಾಗೆಯೇ ದ್ರೌಪದಿಯ ವಿಷಯದಲ್ಲೂ ಪರಂಪರೆಯು, ಮಹಾಭಾರತಕ್ಕಿಂತ ಭಿನ್ನವಾದ ಒಂದು ಸ್ವತಂತ್ರ ಹಾಗೂ ವಿಶಿಷ್ಟ ದೃಷ್ಟಿಯನ್ನು ಇಟ್ಟುಕೊಂಡಿದೆ. ಆದರೆ, ಕೃಷ್ಣನ ಚರಿತ್ರೆಯನ್ನು ಸಮೃದ್ಧಗೊಳಿಸಿರುವಂತೆ ದ್ರೌಪದಿಯದನ್ನು ಮಾಡಿಲ್ಲ. ಕರ್ಣನ ವಿಷಯದಲ್ಲಿ ಅವಳಿಗೆ ಬಂದ ದೂಷಣೆಯನ್ನು ಪರಂಪರೆಯು, ಅವಳು ಕೃಷ್ಣನ ತಂಗಿಯೆಂಬ ಅಂಶದಿಂದ ಮುಚ್ಚಿದೆ.

ವ್ಯಾಸರು ಮಾತ್ರ ಕೃಷ್ಣದ್ರೌಪದಿಯರ ಸಂಬಂಧಕ್ಕೆ ಯಾವುದೇ ವಿಶಿಷ್ಟ ಒತ್ತು ಕೊಟ್ಟಿಲ್ಲವಾದರೂ ಅದರಲ್ಲಿ ಒಂದು ಅನಾಮಿಕವಾದ ನಾಜೂಕು ರಂಗನ್ನು ತುಂಬಿದ್ದಾರೆ. ದ್ರೌಪದಿಯ ನೀಲಮಣಿಯಂತಹ ಕಾಂತಿಯ ಚಿತ್ರವು ಕಣ್ಣ ಮುಂದೆ ಪ್ರತ್ಯಕ್ಷವಾಗಿ ನಿಲ್ಲಿಸಲು ಬರುವಂತಹುದಲ್ಲ; ಅದು ಒಂದೇ ಸಮನೆ ಭಾಸವಾಗುತ್ತಿರುತ್ತದೆ. ಇತರರ ಕಾಂತಿಗಿಂತ ಈ ಕಾಂತಿಯು ಏನೋ ಒಂದು ರೀತಿ ಬೇರೆಯಾಗಿದೆಯೆಂಬುದು ನಿರಂತರವಾಗಿ ಅನುಭವಕ್ಕೆ ಬರುತ್ತಿರುತ್ತದೆ. ಅದೇ ಪ್ರಕಾರ ಇವರಿಬ್ಬರ ಪರಸ್ಪರ ಆಕರ್ಷಣೆಯ ಸಂಬಂಧದಲ್ಲೂ ಒಂದು ವಿಶೇಷತೆಯಿದೆ. ಭಕ್ತಿ, ಪ್ರಣಯ ಮತ್ತು ಸಖ್ಯ– ಈ ಮೂರೂ ಭಾವನೆಗಳ ಮಿಲನವನ್ನು ಈ ಆಕರ್ಷಣೆಯಲ್ಲಿ ಕಾಣುತ್ತೇವೆ. ದ್ರೌಪದಿಯು ಮದುವೆಯಾದವಳು; ಅದರಲ್ಲೂ ಆರ್ಯಧರ್ಮವನ್ನು ಅನುಸರಿಸುವ ಪತಿವ್ರತೆ. ಅದ್ದರಿಂದಲೇ ಈ ನಾಟಕಕ್ಕೆ ಒಂದು ವಿಲಕ್ಷಣ ಪಾತಳಿಯುಂಟಾಗು ತ್ತದೆ. ತುಂಬ ನವುರಾದ ನೆಯ್ಗೆಯ ನಂಟು ಇದು. ಅದರೆ ಅತಿದೃಢವಾದದ್ದು,

ಅಷ್ಟೇ ವಿಲಕ್ಷಣ ಕೋಮಲವಾದದ್ದು. ಈ ನಂಟಿನ ಮೇಲೆ ವ್ಯಾಸರು ಸುಖವನ್ನು ನಾಜೂಕಾಗಿ ಸಿಂಪಡಿಸಿದ್ದಾರೆ. ಕೃಷ್ಣನ ಸಾನ್ನಿಧ್ಯದಲ್ಲಿ ದ್ರೌಪದಿಯು ತನ್ನಷ್ಟಕ್ಕೆ ತಾನೇ ಅರಳುತ್ತಾಳೆ. ಆಂತರಿಕ ಜಟಿಲತೆಯ ಇವಳು ಮನಬಿಚ್ಚಿ ವ್ಯವಹರಿಸುತ್ತಾಳೆ. ಅವನ ಕಡೆಗೆ ವಾಲುತ್ತಾಳೆ; ಪಾಂಡವರಂತೆಯೇ ತಾನೂ ಅವನನ್ನು ಅವಲಂಬಿಸುತ್ತಾಳೆ, ಆದರೆ ಪಾಂಡವ ಪತ್ನಿಯೆಂದಲ್ಲ ಕೃಷ್ಣನ ಗೆಳತಿಯೆಂದು.

ವಾಸ್ತವವಾಗಿ ಕೃಷ್ಣನು ದ್ರೌಪದಿಗೆ ಮೈದುನನಾಗುತ್ತಾನೆ. ವಯಸ್ಸಿನಲ್ಲಿ ಅವನು ಅರ್ಜುನನಿಗಿಂತ ಸ್ವಲ್ಪ ಹಿರಿಯ. ಪಾಂಡವರು ಅವನನ್ನು ಶ್ರೇಷ್ಠನೆಂದು ಭಾವಿಸಿ ಅವನ ಆಜ್ಞೆಯಂತೆ ವರ್ತಿಸುತ್ತಿದ್ದರು. ಇಂತಹ ಅವನ ಮತ್ತು ದ್ರೌಪದಿಯ ನಡುವಿನ ಇಷ್ಟೊಂದು ಸಲುಗೆಯು ಆಶ್ಚರ್ಯ ಹುಟ್ಟಿಸುತ್ತದೆ. ಮೈದುನನೊಂದಿಗಿನ ಇಂತಹ ನಂಟು ನಮಗೆ ಅರ್ಥವಾಗುತ್ತದೆ. ಮದುವೆಗೆ ಮುಂಚೆ ಕೃಷ್ಣನಿಗೂ ಅವಳಿಗೂ ಏನಾದರೂ ಸಂಬಂಧವಿತ್ತೆ? ಈ ನೆಂಟು ಏತರಿಂದ ಉಂಟಾಯಿತು? ಇದಕ್ಕೆ ಉತ್ತರವನ್ನು ವ್ಯಾಸರು ಕೊಡಲ್ಲಿಲ್ಲ. ಕೃಷ್ಣ–ದ್ರೌಪದಿ ಅಥವಾ ಕೃಷ್ಣ–ಕೃಷ್ಣೆಯರ ನಡುವಿನ ಈ ನಂಟಿನ ಉಗಮಸ್ಥಲದ ಬಗ್ಗೆ ವ್ಯಾಸರು ಮುಗ್ದತೆಯನ್ನಿಟ್ಟುಕೊಂಡಿದ್ದಾರೆ. ದ್ರೌಪದಿಯ ಸಮಗ್ರ ವ್ಯಕ್ತಿತ್ವವನ್ನು ಪೂರ್ಣಪುರುಷ ಕೃಷ್ಣನ ವ್ಯಕ್ತಿತ್ವವನ್ನೂ ಲಕ್ಷ್ಯದಲ್ಲಿ ತೆಗೆದುಕೊಂಡಾಗ, ಈ ಸಂಬಂಧದ ಬಗೆಗೆ ಅನೇಕ ಊಹೆಗಳನ್ನು ಮಾಡುವುದು ಸಾಧ್ಯವಾಗುತ್ತದೆ. ವ್ಯಾಸರು ಮುಗ್ಧತೆಯನ್ನು ಕಾಪಾಡಿಕೊಂಡಿರದಿದ್ದರೆ, ಈ ಇಬ್ಬರ ಮೈತ್ರಿಯು ಹೆಚ್ಚು ಕಲಾಪೂರ್ಣವೂ, ಯಾವುದೇ ಸಂಬಂಧಕ್ಕೆ ಕಟ್ಟುಬೀಳದಂತಹುದೂ, ಶರೀರದ ಅಥವಾ ಸಮಾಜದ ನಂಟಿನ ಬಂಧನಕ್ಕೆ ಸಿಲುಕದಂತಹುದೂ ಆದ ಗೆಳೆತನವಾಗುವ ಸಂಭವವಿತ್ತು. ಪ್ಲೇಟೋ ವರ್ಣಿಸಿದ ಪ್ರೀತಿಗಿಂತ ಇದು ತುಸು ಭಿನ್ನವೂ, ಹೆಚ್ಚು ಭವ್ಯವೂ ಆಗುತ್ತಿತ್ತು. ಆದರೆ ಆರಂಭದ ಇತಿಹಾಸದ ಬಗ್ಗೆ ವ್ಯಾಸರು ಮೌನತಾಳಿರುವುದರಿಂದ, ಮುಂದೆ ಬರುವ ಸಣ್ಣಪುಟ್ಟ ಉಲ್ಲೇಖಗಳಿಂದಷ್ಟೇ ಈ ವಿಲಕ್ಷಣ ಮೈತ್ರಿಯ ರಹಸ್ಯವನ್ನು ಅರ್ಥಮಾಡಿಕೊಳ್ಳಬೇಕಾಗಿದೆ.

ದ್ರೌಪದಿ ಮತ್ತು ಕೃಷ್ಣರ ನಡುವೆ ಮದುವೆಗೆ ಮುಂಚೆ ಯಾವುದೇ ರೀತಿಯ ಸಂಬಂಧವಿದ್ದಂತೆ ಕಾಣುವುದಿಲ್ಲ. ದ್ರೌಪದಿಯ ಸ್ವಯಂವರಕ್ಕೆ ಹೋದವರಲ್ಲಿ ಕೃಷ್ಣನೂ ಒಬ್ಬ. ಆತ ಪ್ರೇಕ್ಷಕನಾಗಿ ಹೋಗಿರಲಿಲ್ಲವೆಂಬುದನ್ನು ಹೇಳಬೇಕಾಗಿಲ್ಲ. ಅರ್ಜುನನು ಅಲ್ಲಿ ಇಲ್ಲದಿದ್ದರೆ ಕೃಷ್ಣನು ಅವಳನ್ನು ವರಿಸುತ್ತಿರಲಿಲ್ಲವೆಂದು

ಹೇಳುವಂತಿಲ್ಲ. ಅರ್ಜುನನು ಅಲ್ಲಿ ಇರಬಹುದೆಂಬ ಕಲ್ಪನೆ ಅವನಿಗೆ ಇರಲೇ ಇಲ್ಲ. ಆದರೆ ಯೋಗಾಯೋಗದಿಂದ ಪಾಂಡವರು ಬ್ರಾಹ್ಮಣ ವೇಷದಿಂದ ಅಲ್ಲಿಗೆ ಬಂದರು; ಕೃಷ್ಣ ಅವರನ್ನು ಗುರುತಿಸಿದ. ತನ್ನ ಮತ್ತು ಅರ್ಜುನನ ನಡುವಿನ ಸಖ್ಯದಿಂದಾಗಿಯೇ ಕೃಷ್ಣನು ಈ ಸಲ ಸ್ಪರ್ಧೆಯ ಕಣಕ್ಕೆ ತಾನು ಇಳಿಯದೆ, ಅರ್ಜುನನಿಗೆ ಪಣವನ್ನು ಗೆಲ್ಲಲು ಪ್ರೋತ್ಸಾಹ ಕೊಟ್ಟುದು. ಆದರೆ ಕೃಷ್ಣೆಯ ರೂಪದ, ಅವಳ ಸ್ವರದ, ಪ್ರಭಾವವೇ ಅತಿ ವಿಲಕ್ಷಣ. ಸ್ವಯಂವರದಲ್ಲಿ ಅವಳು, "ನಾನು ಸೂತಪುತ್ರನನ್ನು ವರಿಸಲೊಲ್ಲೆ" ಎಂದಳು. ಬಹುಶಃ ಅವಳ ಆ ದನಿಯೇ ಕೃಷ್ಣನನ್ನು ಮೋಹಗೊಳಿಸಿರಬೇಕು. ಏಕೆಂದರೆ ಕೃಷ್ಣನು ನಾದಲುಬ್ಧನು; ದ್ರೌಪದಿಯ ದನಿಯಾದರೋ ವೀಣೆಯ ಮಧುರಾಲಾಪದಲ್ಲಿ ಗಾಂಧಾರದ ಸುಂದರ ಮೂರ್ಛನೆ ಮಿಡಿಯುವಂತಿತ್ತು ಎಂದು ವ್ಯಾಸರು ವರ್ಣಿಸಿದ್ದಾರೆ. ಕೀಚಕ ವಧೆಯ ವೇಳೆಯಲ್ಲಿ ಈ ದನಿಮೋಹಿನಿಯೇ ಭೀಮನನ್ನು ಗುಂಗಿನಲ್ಲಿ ಕೆಡವಿದುದು. ದ್ರೌಪದಿಯು ಅಡವಿಯಲ್ಲಿ ಸಿಟ್ಟಿಗೆದ್ದು ಮಾತಾಡುವಾಗಲೂ ಯುಧಿಷ್ಠಿರನಿಗೆ ಅವಳ ದನಿಯ ಸವಿಯು ಅನುಭವಕ್ಕೆ ಬರುತ್ತಿತ್ತು. ಅವಳ ರೂಪದ ಪ್ರಲೋಭನೆಯು ಕೃಷ್ಣನಿಗೆ ಅವಳ ಮದುವೆಯ ನಂತರ ಮೊದಲಿನ ಸ್ವರೂಪದಲ್ಲಿ ಉಳಿಯಲಿಲ್ಲವೆಂಬುದು ನಿಜ. ಆದರೆ ಅವರಿಬ್ಬರ ನಡುವಿನ ಆಕರ್ಷಣೆಯ ಕೊಂಡಿಯು ಅವಳ ದನಿಯ ಮಾಧುರ್ಯದಲ್ಲಿ ಇರಲಿಲ್ಲವೆಂದು ಹೇಳುವಂತಿಲ್ಲ. ಏಕೆಂದರೆ ಮತ್ತೆ ಮತ್ತೆ ಸಂಭಾಷಣೆ ನಡೆಸಿದ ಹೊರತು ಗೆಳೆತನವು ಬೆಳೆಯುವುದಿಲ್ಲ. ದ್ರೌಪದಿಯ ಮದುವೆಯ ನಂತರ ಈ ಗೆಳೆತನವು ಹೇಗೆ ಉದ್ಭವಿಸಿತು ಹೇಗೆ ಬೆಳೆಯಿತು ಎಂಬುದರ ಬಗ್ಗೆ ಎಲ್ಲಿಯೂ ಹೇಳಿಲ್ಲ. ಆದಾಗ್ಯೂ, ವಸ್ತ್ರಾಪಹರಣದ ಪ್ರಸಂಗದಲ್ಲಿ ದ್ರೌಪದಿಯು ಭಕ್ತಳಾಗಿ ನಿಂತು, ಕೃಷ್ಣನನ್ನು ಕರೆಯುತ್ತಾಳೆ. ಅವನು, ದೈವೀಭೂಮಿಕೆಯಲ್ಲಿ ವಸ್ತ್ರಗಳನ್ನು ಒದಗಿಸಿ ಅವಳ ಮಾನವನ್ನು ಕಾಪಾಡುತ್ತಾನೆ. ಈ ದೊಡ್ಡ ಚಮತ್ಕಾರದೊಂದಿಗೆ ವ್ಯಾಸರು, ಅವನ ಪಾರ್ಥಿವ ಭೂಮಿಕೆಯ ಒಂದು ಸ್ತರವನ್ನು ಮುಚ್ಚಿಹಾಕಿದ್ದಾರೆ. ಆದರೆ ಆ ಸ್ತರದ ಗರ್ಭದಲ್ಲಿರುವ ಮನಸ್ಸುಗಳೆರಡರ ಭಾವನೆಗಳ ಕೋಮಲ ಕುಡಿಯನ್ನು ಹತ್ತಿಕ್ಕುವುದು ವ್ಯಾಸರಿಗೆ ಸಾಧ್ಯವಾಗಿಲ್ಲ. ಏಕೆಂದರೆ, ಪುಷ್ಟವಾಗಿ ಬೆಳೆದ ಅದರ ಚಿಗುರುಗಳು ವನಪರ್ವದಲ್ಲಿ ಕಣ್ಣಿಗೆ ಬೀಳುತ್ತವೆ.

ತನ್ನ ಮತ್ತು ದ್ರೌಪದಿಯ ನಡುವಿನ ಸಂಬಂಧದ ಬಗ್ಗೆ ಕೃಷ್ಣನು ಸ್ಪಷ್ಟವಾಗಿ ಎಲ್ಲಿಯೂ ಉದ್ಗಾರ ತೆಗೆದಿಲ್ಲ. ಇರುವ ಉದ್ಗಾರಗಳೆಲ್ಲ ದ್ರೌಪದಿಯವೇ.

ಮೊದಲ ಕ್ರಿಯೆ ಅವಳದ್ದು; ಅನಂತರ ಅವನದು. ಕೃಷ್ಣನನ್ನು ಕರೆಯುವ ಪ್ರಸಂಗವು ಇದರ ಪ್ರತೀಕವಾಗಿದೆ. ದ್ರೌಪದಿಯು ಕರೆದಳೆಂದು ಅವನು ಬಂದ. ಅವಳ ಮೊರೆ; ಅವನ ಪ್ರತ್ಯುತ್ತರ. ವನವಾಸದಲ್ಲಿ ಅವನನ್ನು ಕಂಡ ಅವಳಿಗೆ ತಡೆದುಕೊಳ್ಳುವುದಾಗುವುದಿಲ್ಲ. ತನ್ನೆಲ್ಲ ವ್ಯಥೆಯನ್ನೂ ಅವನ ಮುಂದೆ ತೋಡಿಕೊಂಡಳು; "ಕೃಷ್ಣಾ, ಪ್ರಣಯದ ಮೂಲಕ ನಾನು ನನ್ನ ದುಃಖವನ್ನು ನಿನ್ನ ಮುಂದೆ ಇಟ್ಟಿದ್ದೇನೆ" ಎನ್ನುತ್ತಾಳೆ.

ಕೃಷ್ಣನನ್ನು ಕಂಡೊಡನೆ ಉಕ್ಕಿ ಬಂದ ದುಃಖದ ಪ್ರಚಂಡ ಉಮ್ಮಳದ ಆವೇಗದಲ್ಲಿ ಅವಳು ಹೇಳುತ್ತಾ ಹೋದಳು: "ಕೃಷ್ಣಾ, ಪಾಂಡವರ ಭಾರ್ಯೆ, ನಿನ್ನ ಸಖಿ ಮತ್ತು ಧೃಷ್ಟದ್ಯುಮ್ನನ ತಂಗಿ; ಇಂತಹ ನನ್ನನ್ನು ಸಭೆಗೆ ಎಳೆತಂದರಾದರೂ ಹೇಗೆ?" ಇಷ್ಟಕ್ಕೇ ನಿಲ್ಲಿಸಲಿಲ್ಲ; ತುಂಬ ಬೇಸರದಿಂದ ಹೇಳುತ್ತಾಳೆ, 'ನನಗೆ ಪತಿಗಳಿಲ್ಲ, ಪುತ್ರರಿಲ್ಲ, ಆಪ್ತರಿಲ್ಲ, ಬಾಂಧವರಿಲ್ಲ, ತಂದೆಯಿಲ್ಲ ಮತ್ತು ಕೃಷ್ಣಾ ನೀನೂ ಇಲ್ಲವೋ" ಎಂಬುದಾಗಿ. "ನೀನೂ ಇಲ್ಲವೋ" ಎಂಬ ಈ ಮಾತಿನಲ್ಲಿ, ಅವನನ್ನು ಕುರಿತ ಒಂದು ಅನನುಭೂತ ಭಾವನೆಯನ್ನು ಅವಳು ವ್ಯಕ್ತಮಾಡಿದ ಳೆಂಬುದರಲ್ಲಿ ಸಂಶಯವಿಲ್ಲ.

ಇಷ್ಟೇ ಅಲ್ಲ; ಇನ್ನೊಮ್ಮೆ ಅವಳು ಹೇಳುತ್ತಾಳೆ, "ಕೃಷ್ಣಾ, ನಾಲ್ಕು ಕಾರಣಗಳಿಗಾಗಿ ನೀನು ಯಾವಾಗಲೂ ನನ್ನ ರಕ್ಷಣೆ ಮಾಡುವೆ. ಬಂಧುತ್ವದ ಸಂಬಂಧದ ಮೂಲಕ, ನಿನ್ನ ದೊಡ್ಡಸ್ತಿಕೆಯ ಮೂಲಕ, ಗೆಳೆತನದ ಮೂಲಕ ಮತ್ತು ಪ್ರಭುತ್ವದ ಮೂಲಕ"–ಎಂಬುದಾಗಿ.

ಆ ಮೇಲೆ ಬಹಳ ಕಾಲದ ನಂತರದ ಸಂಗತಿ. ಯುದ್ಧ ಮುಗಿದು ಅಶ್ವಮೇಧವು ಆರಂಭವಾಗುವುದರಲ್ಲಿದೆ. ಪಾಂಡವರ ರಾಜ್ಯವು ಪ್ರಸ್ಥಾಪಿತ ವಾಗಿದೆ. ಪಾಂಡವರು, ದ್ರೌಪದಿ ಮತ್ತು ಕೃಷ್ಣ ಇವರ ನಡುವೆ ಸುಖಸಲ್ಲಾಪಗಳು ನಡೆದಿವೆ. ಆ ಸಮಯದಲ್ಲಿ ಯುಧಿಷ್ಠಿರನು ಕೃಷ್ಣನನ್ನು ಕುರಿತು ಒಂದು ಪ್ರಶ್ನೆ ಕೇಳುತ್ತಾನೆ. ಯುದ್ಧ ಮುಗಿಯಿತು. ಪಾಂಡವರು ಸುಖವನ್ನು ಕಂಡರು. ಆದರೂ ಅಶ್ವಮೇಧದ ಸಿದ್ಧತೆಗಾಗಿ ಅರ್ಜುನನು ದೇಶವಿದೇಶಗಳಲ್ಲಿ ಅಲೆಯ ಬೇಕಾಯಿತು. ಮತ್ತೆ ಯುದ್ಧಕ್ಕೆ ಸನ್ನದ್ಧನಾಗಬೇಕಾಯಿತು. ಅವನ ಆ ಕಷ್ಟವನ್ನು ಕಂಡ ಯುಧಿಷ್ಠಿರನ ಮನಸ್ಸು ಕಲಕಿಹೋಯಿತು. ಅದಕ್ಕಾಗಿ ಈ ಪ್ರಶ್ನೆ. ಅವನು ಕೇಳುತ್ತಾನೆ, "ಕೃಷ್ಣಾ, ಎಲ್ಲ ಪಾಂಡವರ ಪೈಕಿ, ಅರ್ಜುನನು ಭಾರಿ ದುಃಖವನ್ನು ಸಹಿಸಿದನು. ಅವನ ಹಿಂದೆಯೇ ಏಕೆ ಈ ಕರಕಷ್ಟ? ಅವನ ದೇಹದಲ್ಲಿ

ಅಂತಹದೇನಿದೆ? ಅವನಿಗೇ ಏಕೆ ಈ ದುಃಖಪರಂಪರೆಯನ್ನು ಸಹಿಸಬೇಕಾದ ಪ್ರಸಂಗ ಬರುತ್ತದೆ? ಏಕೆ ಅವನು ಹೀಗೆ ನಿರರ್ಥಕವಾಗಿ ಅಲೆದಾಡ ಬೇಕಾಗುತ್ತದೆ?" ಎಂಬುದಾಗಿ. ಕೃಷ್ಣನ ವಿನೋದಪ್ರವೃತ್ತಿಯು ಆಗ ಉಕ್ಕೇರಿ ಬಂದಂತೆ ಕಾಣುತ್ತದೆ. ಆ ಪ್ರಶ್ನೆಯ ಗಾಂಭೀರ್ಯವನ್ನು ಹಾರಿಸಿಯೋ ಎಂಬಂತೆ ಆತ ಹೇಳುತ್ತಾನೆ, "ಏಕೂ ಇಲ್ಲ; ಅವನ ಮೀನಖಂಡಗಳು ಇತರರ ಮೀನಖಂಡಗಳಿಗಿಂತ ದೊಡ್ಡದಾಗಿವೆ ಅಲ್ಲವೆ; ಅದಕ್ಕಾಗಿ ಅವನು ಅಲೆಯುತ್ತಲೇ ಇರಬೇಕಾಗುತ್ತದೆ. ಬೇರೇನೂ ಇಲ್ಲ" – ಎಂಬುದಾಗಿ.

ಯಾರ ಮೀನ ಖಂಡಗಳು ದಪ್ಪವಿರುತ್ತವೆಯೋ ಅವರು ಅಲೆಯುತ್ತಿರ ಬೇಕಾಗುತ್ತದೆ ಎಂಬ ಈ ಸಾಮಾನ್ಯ ಸಾಮುದ್ರಿಕ ಸಂಕೇತವನ್ನು ಅರ್ಜುನನನ್ನು ಕುರಿತು, ಅದೂ ಕೃಷ್ಣನು ಅನ್ವಯಿಸಿದುದು ದ್ರೌಪದಿಗೆ ಹಿಡಿಸಲಿಲ್ಲ. ಅದನ್ನರಿತ ಮುಖಭಾವವನ್ನು ಅವಳು ತೋರಿಸಿದಳು. ವ್ಯಾಸರ ಮಾತುಗಳಲ್ಲೇ ಹೇಳುವು ದಾದರೆ, "ಕೃಷ್ಣೆ ದ್ರೌಪದಿಯು ಕೋಪದಿಂದ ಕೃಷ್ಣನ ಕಡೆಗೆ ವಕ್ರಕಟಾಕ್ಷವನ್ನು ಬೀರಿದಳು. ಅವಳ ಆ ಪ್ರಣಯವನ್ನು ಕೃಷ್ಣನೂ ಸ್ವೀಕರಿಸಿದ. ಕೃಷ್ಣನು ಅವಳ ಸಖ; ಅರ್ಜುನನಿಗೂ ಸಖ. ಅವನು ಕೆಲಮಟ್ಟಿಗೆ ಮೂರ್ತಿಮಂತ ಅರ್ಜುನನೇ ಆಗಿದ್ದನು." ಈ ಚಿಕ್ಕದಾದ ಆದರೆ ಅತಿ ಹಗುರಾದ ನವಿರಾದ ಒಂದೇ ಜೀವಂತ ಪ್ರಸಂಗವನ್ನು ದ್ರೌಪದಿಯ ಬಗೆಗೆ ಉಲ್ಲೇಖಿಸಿ ವ್ಯಾಸರು ಕೃಷ್ಣದ್ರೌಪದಿಯರ ನಡುವಿನ ಸಂಬಂಧದ ಸಮಾರೋಪ ಮಾಡಿದ್ದಾರೆ. ಭಕ್ತಿಯ ಆವರಣದಡಿಗೆ ಅವರ ಸಂಬಂಧದ ಮೊದಲ ದರ್ಶನವೂ ಅರ್ಜುನನ ಸಖ್ಯದ ನೆಪದಿಂದ ಅದರ ಕೊನೆಯ ಅಡ್ಡ ಇಣುಕು ನೋಟವೂ ಒದಗುತ್ತದೆ. ಈ ರೀತಿಯಾಗಿ ಒಂದು ರಹಸ್ಯಮಯ, ಆದರೆ ಕೊನೆಯ ಪಕ್ಷ ವಿಶುದ್ಧ, ಪ್ರಣಯಪೂರ್ಣ, ಅಶರೀರಿ ಯಾದಂತಹ ಮೈತ್ರಿಯ ಅರ್ಥಸ್ಫುಟ ದರ್ಶನವನ್ನು ವ್ಯಾಸರು ಒದಗಿಸಿದ್ದಾರೆ. ಕೃಷ್ಣನಿಗೆ ದ್ರೌಪದಿಯ ಈ ವೃತ್ತಿಯ ಅರಿವು ಚೆನ್ನಾಗಿಯೇ ಇತ್ತು. ಆದ್ದರಿಂದಲೇ ಏನೋ ಕರ್ಣನಿಗೆ ಪ್ರಲೋಭನೆಯನ್ನೊಡ್ಡುವಾಗ ಅವನು "ನೀನು ಪಾಂಡವರ ಅಣ್ಣನಾಗಿ ಅವರ ಪಕ್ಷಕ್ಕೆ ಬಾ; ದ್ರೌಪದಿಯು ನಿನ್ನನ್ನು ವರಿಸಬಹುದು" ಎಂದು ಹೇಳುವುದು. ಪರಂಪರೆಯು ಕರ್ಣನ ಸಂಬಂಧದಲ್ಲಿ ದ್ರೌಪದಿಯ ಆಕರ್ಷಣೆ ಯನ್ನು ಕುರಿತು ಯಾವ ಅಭಿಪ್ರಾಯವನ್ನು ನಿರ್ಮಿಸಿದೆಯೋ ಅದರ ಬೀಜವು ಇಂತಹ ಉಲ್ಲೇಖಗಳಲ್ಲಿ ಇಲ್ಲವೆಂದು ಹೇಳುವುದು ಹೇಗೆ?

ಪ್ರಿಯೆ, ಸುಂದರಿ, ಪತಿವ್ರತೆ ಮತ್ತು ಪಂಡಿತೆ – ಈ ನಾಲ್ಕು ಭೂಮಿಕೆಗಳಲ್ಲಿ ದ್ರೌಪದಿಯ ವ್ಯಕ್ತಿತ್ವವನ್ನು ವ್ಯಾಸರು ವರ್ಣಿಸಿದ್ದಾರೆ. ಅವಳು

ತೇಜಸ್ವಿನಿಯಾಗಿದ್ದಳು; ಮಾನಿನಿಯಾಗಿದ್ದಳು. ಆದರೂ ತನ್ನ ಪ್ರತಿಷ್ಠೆಯ ಅವಗುಂಠನವನ್ನು ಅವಳು ಬಿಟ್ಟಿರಲಿಲ್ಲ. ಕುಲೀನ ಹೆಣ್ಣಿನ, ನಾಲ್ಕು ಗೋಡೆಗಳ ನಡುವಿನ ಬಂಧನದ ಜೀವನವನ್ನು ಅವಳು ಶಿರೋಧಾರ್ಯವಾಗಿ ಒಪ್ಪಿದ್ದಳು. ಅಂತಃಪುರದ ಪರಿಸರದಲ್ಲೇ ಅವಳ ವ್ಯಕ್ತಿತ್ವವು ಅರಳಿತು. ಅವಳನ್ನು ಸಭೆಗೆ ತಂದವನು ದುಃಶಾಸನ; ಅದೂ ಸಲ್ಲದ ಸಮಯದಲ್ಲಿ, ಸಲ್ಲದ ವೇಷದಲ್ಲಿ. ಸ್ವಯಂವರದಲ್ಲಿ ರಾಜಮಹಾರಾಜರ, ರಾಜಕುಲದವರ, ಕಣ್ಣಿಗೆ ಬಿದ್ದ ಕೃಷ್ಣೆಯು ಕೌರವರ ಸಭೆಯಲ್ಲಿ ಜೂಜಿನಲ್ಲಿ ಸೋತ ಪತಿಯ ಪತ್ನಿ, ಕೌರವರ ದಾಸಿ ಎಂದು ಎಳೆದು ತರಲ್ಪಡುತ್ತಾಳೆ. ಕೂದಲು ಹಿಡಿದು ಅವಳನ್ನು ದುಃಶಾಸನನು ಎಳೆಯುತ್ತಾನೆ. ಅವಳ ವಿಡಂಬನೆ ಮಾಡಲು ನೋಡುತ್ತಾನೆ. ಆ ವೇಳೆ ಯಲ್ಲಂತೂ ಅವಳು ಇತರ ಯಾವುದೇ ಹೆಣ್ಣಿನಂತೆ ಗೋಗರೆಯುತ್ತಾಳೆ. ಮುಂದೆ ಕೃಷ್ಣನು ಅವಳ ಮಾನವನ್ನು ಕಾಪಾಡುತ್ತಾನೆ. ಸಭೆಯು ತಟಸ್ಥವಾಗುತ್ತದೆ. ಆಗ ಅವಳು ಯುಧಿಷ್ಠಿರನನ್ನು ಉದ್ದೇಶಿಸಿ, ಸಭೆಯನ್ನು ಅನುಲಕ್ಷಿಸಿ ಒಂದು ಪ್ರಶ್ನೆ ಕೇಳುತ್ತಾಳೆ, " ನೀನು ಮೊದಲು ಯಾರನ್ನು ಪಣವಾಗಿ ಒಡ್ಡಿದ್ದೆ? ನಿನ್ನನ್ನೋ ನನ್ನನ್ನೋ?" ಎಂಬುದಾಗಿ.

ಈ ಪ್ರಶ್ನೆಯ ಉತ್ತರವು ಸುಲಭವಿತ್ತು; ಆದರೆ ತೀರ್ಮಾನವು ಅಷ್ಟೇ ಕಠಿಣವಿತ್ತು. ಯುಧಿಷ್ಠಿರನು ಮೊದಲು ತನ್ನನ್ನೇ ಪಣವಾಗಿ ಒಡ್ಡಿಕೊಂಡಿದ್ದ; ಅನಂತರ ದ್ರೌಪದಿಯನ್ನು ಒಡ್ಡಿದ್ದ. ಚತುರಳಾದ ದ್ರೌಪದಿಯು, ಒಡನೆಯೇ ಮತ್ತೊಂದು ಪ್ರಶ್ನೆ ಹಾಕಿದಳು, ಸ್ವತಃ ಸೋತವನಿಗೆ ಇನ್ನೊಬ್ಬರ ಮೇಲೆ ಎಷ್ಟರಮಟ್ಟಿಗೆ ಅಧಿಕಾರ ನಡೆಯಿಸಲು ಬರುತ್ತದೆ? ಎಂಬುದಾಗಿ. ಯುಧಿಷ್ಠಿರನ ಅಧಿಕಾರವಂತೂ ಈಗ ಬಯಲೇ ಆಗಿತ್ತು.

ಇದೇ ಸಭೆಯಲ್ಲಿ ದ್ರೌಪದಿಯು ದುಃಖದ ಮೊದಲ ಉಮ್ಮಳವನ್ನು ನುಂಗಿದಳು; ಮತ್ತು ಅವಳೊಳಗಿನ ಹೆಣ್ಣು ಜಾಗ್ರತವಾದಳು. ಈಗ ಕಾಮಿನಿ ಯೆಂದಲ್ಲ; ಆದರೆ ಜೀವಂತ ಅಸ್ಥಿಮಾಂಸಗಳ ಹೆಣ್ಣೆಂದು. ಶೋಕದ ಕ್ಷೋಭೆಯ ಆ ಪ್ರಚಂಡ ಉಕ್ಕಿನಿಂದ ಜ್ವಾಲಾಮುಖಿಯು ಪ್ರಖರ ತೇಜಸ್ಸಿನ ರಸವನ್ನು ಕಾರುವಂತೆ, ಯಾವ ಶಬ್ದಗಳ ತೇಜಸ್ಸನ್ನು ಅಳೆಯಲು ಹಿಮಾಲಯವೂ ಕುಬ್ಜವೆನಿಸಬಹುದೋ ಅಂಥ ಆ ಶಬ್ದಗಳು ಅವಳ ಬಾಯಿಯಿಂದ ಹೊರ ಹೊಮ್ಮಿದವು. ಮಾನವನ ಲೌಕಿಕ ಅಭಿಮಾನದ ಪದರಗಳು ತಟತಟನೆ ಹರಿದು ಬಿದ್ದವು. ಬೀಜದ ಹೊರಪದರಗಳು ಬಿರಿಯುವಂತೆ ಬಿರಿದವು; ಪ್ರಪಂಚದಲ್ಲಿ ಈ ವರೆಗೆ ಬಂದಿರುವ ಯಾವ ಸೂಕ್ತಿಯೂ ಸರಿಸಾಟಿಯಾಗದಂತಹ,

ಉಪನಿಷತ್ತುಗಳನ್ನು ನಾಚಿಸುವಂತಹ ಉದ್ಗಾರಗಳು ನಳನಳಿಸುವ ಕುಡಿಗಳಂತೆ ಅದರಿಂದ ಹೊರಹೊಮ್ಮಿದವು. ಸರ್ವವೇದನೆಗಳೂ ಘೋರ ಅಪಮಾನ ಗಳೂ ಕರಗಿಹೋದವು. ಅದರೊಳಗಿಂದ, ಸತ್ಯದ ಪ್ರತೀತಿಯ ಸುಂದರ ಪ್ರತಿಮೆಯು ಸಾಕಾರವಾಗಿ ಮೂಡಿತು. ಸ್ವತಃ ಅಗ್ನಿಯಿಂದ ಹೊರಬಂದ ಈ ಕಾಮಿನಿಯ ಮುಖದಿಂದ ಶೋಕಕ್ಷೋಭೆಯ ಬೆಂಕಿಯು ಭುಗಿಲೆದ್ದಾಗ ಈ ಉದ್ಗಾರಗಳು ಹೊರಡಬೇಕೆಂಬ ಈ ಯೋಗಾಯೋಗವು ವಿಲಕ್ಷಣವಾದುದು. ಅವಳು ಹೇಳಿದಳು, "ಎಲ್ಲಿ ವೃದ್ಧರಿರುವುದಿಲ್ಲವೋ ಅದು ಸಭೆಯಲ್ಲ; ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರು ವೃದ್ಧರಲ್ಲ; ಯಾವುದರಲ್ಲಿ ಸತ್ಯ ವಿರುವುದಿಲ್ಲವೋ ಅದು ಧರ್ಮವಲ್ಲ; ಯಾವುದರಲ್ಲಿ ಕಪಟತೆ, ದುಷ್ಟತ್ವಗಳು ಇರುತ್ತವೆಯೋ ಅದು ಸತ್ಯವಲ್ಲ" – ಎಂಬುದಾಗಿ.

ಸತ್ಯದ ಈ ಮರ್ಮಸ್ಪರ್ಶಿಯಾದ ವ್ಯಾಖ್ಯೆಯನ್ನು ದ್ರೌಪದಿಯ ಹೊರತು ಬೇರೆ ಯಾರು ತಾನೆ ಮಾಡಬಲ್ಲವರಾಗಿದ್ದರು? ಕೌರವರ ಸಭೆಯಲ್ಲಿ ಅಂದು ಎಲ್ಲ ಸಂಕೇತಗಳೂ ತಮಗೆ ತಾವೇ ಕುಸಿದು ಬಿದ್ದಿದ್ದವು. ಒಳ್ಳೆಯತನವು ಅಂಜಿಕುಳಿತಿತ್ತು. ಕ್ರೌರ್ಯಕ್ಕೆ ನ್ಯಾಯದ ರೂಪ ಬಂದಿತ್ತು. ಲಜ್ಜೆ, ಗೌರವ – ಹೆಚ್ಚೇನು ಸಾದಾ ಸಭ್ಯತೆಯು ಕೂಡ – ಹಾಂ ಹಾಂ ಎನ್ನುವುದರೊಳಗೆ ಕರ್ಪೂರದಂತೆ ಆರಿಹೋಗಿದ್ದವು. ಆ ಸಮಯದಲ್ಲಿ ಧರ್ಮ ಮತ್ತು ಸತ್ಯಗಳ ನಿಜಸ್ವರೂಪವನ್ನು ದ್ರೌಪದಿಯ ವೇದನಾಭರಿತ ಮನಸ್ಸು ಗುರುತಿಸಿತು. ಆ ಒಂದು ಕ್ಷಣದಲ್ಲಿ ಅವಳ ವಾಣಿಯು ಋಷಿವಾಣಿಯಾದಂತೆನಿಸಿತು. ಸತ್ಯದೊಳಗಿನ ಕರುಣೆಯ ತತ್ತ್ವವನ್ನು ಅವಳು ನಿಸ್ಸಂದಿಗ್ಧವಾದ ಶಬ್ದಗಳಲ್ಲಿ ಎಲ್ಲ ಪಂಡಿತರಿಗೂ, ವೀರರಿಗೂ, ಜಿಜ್ಞಾಸುಗಳಿಗೂ ಸಾರಿ ಹೇಳಿದಳು. ವಿಚಾರ ಮಾಡಿದಷ್ಟೂ ಈ ವಾಣಿಯ ನಾದವು ಹೆಚ್ಚು ಹೆಚ್ಚು ಗಂಭೀರವಾಗುತ್ತದೆ.

ದ್ರೌಪದಿಯ ಪ್ರಶ್ನೆಗೆ ಸಾದಾ ಉತ್ತರವನ್ನು ಕೊಡುವ ಆಶ್ವಾಸನೆಯು ವಿಕರ್ಣನಿಗೊಬ್ಬನಿಗಷ್ಟೇ ತೋರಿತು. ಅವನು ಸೋದರರಿಗೆ ಛೀಮಾರಿ ಹಾಕಿದನು, ದ್ರೌಪದಿಯು ದಾಸಿಯಲ್ಲವೆಂಬ ತೀರ್ಮಾನವನ್ನು ಕೊಟ್ಟನು. ಧೃತರಾಷ್ಟ್ರನ ಮೇಲೂ ಅದು ಪರಿಣಾಮ ಬೀರಿತು. ಆತ ದ್ರೌಪದಿಗೆ ಮೂರು ವರಗಳನ್ನು ಕೊಟ್ಟ. ಆದರೆ, ಮಾನಿಯಾದ ದ್ರೌಪದಿಯು ಕೇವಲ ಎರಡೇ ವರ ಗಳನ್ನು ಕೇಳಿಕೊಂಡಳು. ತನ್ನ ಗಂಡಂದಿರ ಬಂಧವಿಮೋಚನೆಯನ್ನಷ್ಟೇ ಕೇಳಿ ಕೊಂಡಳು. ಅದಕ್ಕಿಂತ ಹೆಚ್ಚಿನದನ್ನು ಬೇಡುವುದು ಸರಿಯಲ್ಲವೆಂದು ಸ್ಪಷ್ಟವಾಗಿ ಹೇಳಿದಳು. "ಪಾಂಡವರ ಗತಿಯು ಹೆಣ್ಣಿನಿಂದ ನಿರ್ಧಾರವಾಯಿತಲ್ಲ" ಎಂದು

ಉದ್ವೇಗದ ಉದ್ಗಾರವನ್ನು ತೆಗೆದ ಭೀಮನು, ವಿಕರ್ಣನ ಉಪಕಾರವನ್ನು ಮಾತ್ರ ಮರೆಯಲಿಲ್ಲ. ದುರ್ಯೋಧನನ ಅವಸಾನಕಾಲದಲ್ಲಿ ಅವನನ್ನು ಒದೆಯುವವನೂ, ಅವನ ಶ್ರಾದ್ಧಕ್ಕೆ ಚಿಕ್ಕಾಸನ್ನೂ ಕೊಡಬೇಡವೆಂದು ಯುಧಿಷ್ಠಿರನಿಗೆ ಹೇಳುವವನೂ ಆದ ಅವನು, ವಿಕರ್ಣನು ಸತ್ತಾಗ ಮಾತ್ರ ಅಳುತ್ತಾನೆ.

ವನವಾಸದಲ್ಲಿರುವ ಕಾಲದಲ್ಲಿ ದ್ರೌಪದಿಯು, ಸಂತಾಪದ ಭರದಲ್ಲಿ, ಯುಧಿಷ್ಠಿರನನ್ನು ಕುರಿತು ಬಹಳಷ್ಟು ಬಿರುನುಡಿಗಳನ್ನು ಆಡಿದಳು. ಪಾಂಡವರ ಆ ದಾರಿದ್ರ್ಯ ಸ್ಥಿತಿಯನ್ನು ನೋಡುವುದು ಅವಳಿಂದಾಗಲಿಲ್ಲ. ಎಂದರೆ ಆ ಅಸಹ್ಯತೆಯ ಹಿಂದೆ ಅವಳ ಗಂಡಂದಿರ ದಾರಿದ್ರ್ಯವೇ ಮುಳ್ಳಾಗಿ ನಿಂತಿತ್ತು, ಎಂದು ಅರ್ಥವೇ ಹೊರತು ಅವಳು ಭೋಗಲೋಲುಪಳಾಗಿದ್ದಳು ಎಂದಲ್ಲ. ಪಾಂಡವರನ್ನು ಅವಳು ಮದುವೆಯಾದಾಗಲೂ ಅವರು ದರಿದ್ರರೇ ಆಗಿದ್ದರು. ಮೊದಲ ರಾತ್ರಿ, ಅವರ ಕಾಲ ಬುಡದಲ್ಲಿ ಅವಳು ನೆಲದ ಮೇಲೆಯೇ ಮಲಗಿದ್ದಳು. ಅವಳ ಗೃಹಿಣೀತನವು ಬಹಳವಾಗಿ ಅರಳಿಕಾಣುವುದು ವನವಾಸದ ಅವಧಿಯಲ್ಲಿಯೇ. ಸತ್ಯಭಾಮೆಗೆ ಪತ್ನಿಯ ಕರ್ತವ್ಯವನ್ನು ಅವಳು ಬೋಧಿಸುವುದು ಇಲ್ಲಿಯೇ. ಸೇವಾಧರ್ಮದ ಮಹತ್ತನ್ನು ಆಕೆ ಹಾಡುತ್ತಾಳೆ. ಆದರೂ ವನವಾಸದಿಂದಾಗಿ ಅವಳು ವಿರಕ್ತಳಾಗಲಿಲ್ಲ. ವಿರಕ್ತಿಯು ಮೂಲತಃ ದ್ರೌಪದಿಯ ಗುಣವೇ ಅಲ್ಲ. ಸಿಂಗಾರವಾಗಬೇಕೆಂಬ ಬಯಕೆಯು ಇತರ ಹೆಣ್ಣುಗಳಲ್ಲಿಯಂತೆಯೇ ಅವಳಲ್ಲಿಯೂ, ವನವಾಸದಲ್ಲಿಯೂ ಹೊಚ್ಚಹೊಸ ದಾಗಿಯೇ ಇತ್ತು. ಅಲ್ಲಿ ಅವಳು ಗಂಡಂದಿರಿಂದ ಆಭರಣಗಳನ್ನಾಗಲಿ ವಸ್ತ್ರಗಳನ್ನಾಗಲಿ ಬೇಡುವುದಿಲ್ಲ. ಅವಳು ಕೇಳಿದ್ದು ರಂಗುರಂಗಿನ ಸಹಸ್ರದಳ ಕಮಲಗಳನ್ನು. ಅವನ್ನು ತರಲು ಭೀಮನು ಗಂಧಮಾದನ ಪರ್ವತಕ್ಕೆ ಹೋಗುತ್ತಾನೆ. ದ್ರೌಪದಿಯ ಹಟ, ಯಾವುದಕ್ಕೇ ಇರಲಿ ಅದನ್ನು ಪೂರೈಸಲು ಭೀಮನು ಸದಾ ಸಿದ್ಧನಿರುತ್ತಾನೆ. ವಿರಾಟಪರ್ವದಲ್ಲಿ ಅವನು ಅವಳಿಗೆ ಹೇಳಿಯೇ ಬಿಡುತ್ತಾನೆ, "ನಿನಗೆ ಯಾವುದು ದುಃಖವುಂಟುಮಾಡುತ್ತದೆ, ಯಾವುದು ನೋವುಂಟುಮಾಡುತ್ತದೆ, ಯಾವುದು ಬೇಕು, ಯಾವುದು ಬೇಡ ಈ ಎಲ್ಲವನ್ನೂ ನನಗೆ ಹೇಳು. ನಿನ್ನ ದುಃಖವನ್ನು ನನ್ನಷ್ಟು ಚೆನ್ನಾಗಿ ಮತ್ತಾರೂ ಅರ್ಥಮಾಡಿಕೊಳ್ಳಲಾರರು" ಎಂಬುದಾಗಿ.

ಒಬ್ಬೊಬ್ಬ ಗಂಡನ ಜೊತೆಯಲ್ಲೂ ದ್ರೌಪದಿಯ ವರ್ತನೆಯು ಸ್ವಲ್ಪ ಸ್ವಲ್ಪ ಭಿನ್ನವೇ ಆಗಿದೆ. ಯುಧಿಷ್ಠಿರನಿಗೆ ಅವಳು ಆಜ್ಞಾಂಕಿತ ದಾಸಿ, ಆದರೆ ಮನಸ್ಸಿನಲ್ಲಿ ಅವನ ಬಗ್ಗೆ ಅಪಾರ ಕೋಪವಿದೆ. ಅವರಿಬ್ಬರ ನಡುವೆ ವನದಲ್ಲಿ ನಡೆಯುವ ಸಂಭಾಷಣೆಯು ಗಂಡಹೆಂಡಿರ ಪಿಸುಮಾತಲ್ಲ; ಎಲ್ಲರೆದುರಿಗೆ ನಡೆಯುವ ವಿವಾದ. ಅರ್ಜುನನಿಗೆ ಅವಳು ಪ್ರೇಯಸಿ. ಅವನ ಸಂಬಂಧದ ಸೆಳೆತ ಸ್ವಾಭಾವಿಕವೂ ಹೌದು. "ಐದು ಮಂದಿಯು ಭಿಕ್ಷೆಯನ್ನು ಹಂಚಿಕೊಳ್ಳು ವುದರ" ಅರ್ಥ ಏನಾಯಿತೆಂದು ಕುಂತಿಯೂ ಸ್ವಲ್ಪ ಹೊತ್ತು ಹಳಹಳಿಸುತ್ತಾಳೆ. "ನಾನು ಏನು ಹೇಳಿದೆ? ಅರ್ಜುನನು ನಿನ್ನನ್ನು ಗೆದ್ದ; ನೀನು ನಿಜವಾಗಿಯೂ ಅವನವಳೇ ಆಗಬೇಕು. ಮೊದಲೇ ಇದು ಗೊತ್ತಾಗಿದ್ದಿದ್ದರೆ ನಾನು ಹೇಳು ತ್ತಿರಲಿಲ್ಲ"–ಎನ್ನುತ್ತಾಳೆ. ಆದರೆ ಅರ್ಜುನ ದ್ರೌಪದಿಯರ ಪ್ರೇಮಪ್ರಸಂಗವಿರಲಿ ಅವರ ಸಂವಾದವನ್ನು ಕೂಡ ವ್ಯಾಸರು ಎಲ್ಲಿಯೂ ಉಲ್ಲೇಖಿಸಿಲ್ಲ. ಭೀಮನಿಗೆ ಅವಳು ಸ್ವಾಮಿನಿ. ಅವಳ ಸಂತಾಪದಲ್ಲಿ, ಕ್ಷೋಭೆಯಲ್ಲಿ ಭೀಮನು ನೆರವಾದಂತೆ ಇತರರು ನೆರವಾಗಲಿಲ್ಲ. ನಕುಲ ಸಹದೇವರನ್ನು ಮಮತೆಯಿಂದ ನೋಡಿ ಕೊಳ್ಳುವವಳಾಗಿದ್ದಳು. "ನನ್ನ ಈ ಇಬ್ಬರು ಮಕ್ಕಳಿಗೆ ನೀನೇ ಸ್ವತಃ ಉಣ ಬಡಿಸು" ಎಂದು ವನವಾಸಕ್ಕೆ ಹೊರಟಾಗ ಅವಳಿಗೆ ಕುಂತಿಯು ಹೇಳುತ್ತಾಳೆ. ಆದರೆ ನಾಯಕರೆಂಬ ದೃಷ್ಟಿಯಿಂದ ಮಹಾಭಾರತದಲ್ಲಿ ಇವರಿಗೆ ಮಹತ್ವವೇ ಇಲ್ಲದ್ದರಿಂದ ದ್ರೌಪದಿಯು ಮತ್ತು ಇವರ ಸಂಬಂಧಕ್ಕೆ ವಿಶೇಷ ಮಹತ್ವವಿಲ್ಲ.

ಯುಧಿಷ್ಠಿರನು ಅವಳ ಬಗ್ಗೆ ಬಳಸಿದ "ಪ್ರಿಯೆ, ಪರಮದರ್ಶನೀಯೆ ಮತ್ತು ಪತಿವ್ರತೆ" ಎಂಬ ವಿಶೇಷಣಗಳಿಗೆ, ಯಾವ ಪತಿಯ ಸಂಬಂಧದಲ್ಲಿಯೇ ಆಗಲಿ ಬಾಧೆ ಬಂದಿಲ್ಲ. ಆದರೆ 'ಪಂಡಿತೆ'ಯೆಂಬುದು ಮಾತ್ರ, ಮುಂದೆ ಅವಳು ಯುಧಿಷ್ಠಿರನೊಂದಿಗೆ ನಡೆಸುವ ಸಂಘರ್ಷದ ಸಂಬಂಧದಲ್ಲಿ ಪೂರ್ಣಪರೀಕ್ಷೆಗೆ ಒಳಗಾಗುತ್ತದೆ. ಲೌಕಿಕ ದೃಷ್ಟಿಯಿಂದ ಅವಳು ಏನೇನು ಹೇಳಿದಳೋ ಅದೆಲ್ಲ ಚತುರತೆಯಲ್ಲಿ ಸೇರುತ್ತದೆಯಾದರೂ, ನಿಜವಾದ ಪಾಂಡಿತ್ಯವೂ ಒಳ್ಳೆಯ ಅರಿವೂ ಅದಕ್ಕಿಂತ ಎಷ್ಟೋ ಭಿನ್ನವಾಗಿರುತ್ತದೆಯೆಂಬುದನ್ನು ಯುಧಿಷ್ಠಿರನೇ ಅವಳಿಗೆ ಆಗಾಗ್ಗೆ ಕಾಣಿಸಿಕೊಡುವ ಪ್ರಯತ್ನಮಾಡುತ್ತಿದ್ದನು. ಅವನು ಎಷ್ಟೆಷ್ಟು ಶಾಂತನಾಗಿ ಸಹನೆಯಿಂದ ವರ್ತಿಸುತ್ತಿದ್ದನೋ, ಅವಳು ಅಷ್ಟಷ್ಟು ಕೆರಳು ತ್ತಿದ್ದಳು. ಅವಳು ಕೆರಳಿದೊಡನೆ ಭೀಮನು ಅವಳ ಪಕ್ಷ ವಹಿಸುತ್ತಿದ್ದನು. ಆದರೆ ಕೊನೆಗೆ ಯುಧಿಷ್ಠಿರನ ಧೋರಣೆಯೇ ಬಲವಾಗುತ್ತಿತ್ತು. ಸತ್ಯದ ದರ್ಶನವು ದ್ರೌಪದಿಗೆ ಒಂದು ಕ್ಷಣದ ಉದ್ರೇಕದಲ್ಲಿ ಆಯಿತು. ಆದರೆ ಆ ಸತ್ಯವು ದೈನಂದಿನ

ಆಚರಣೆಯಲ್ಲಿ ಅವಳಿಗೆ ದಕ್ಕಲಿಲ್ಲ. ಆ ನಿಟ್ಟಿನಲ್ಲಿ ಸಾಗುವ ಪ್ರಯತ್ನ ಮಾಡಿದವನು ಯುಧಿಷ್ಠಿರನೊಬ್ಬನೇ.

ವನವಾಸ ಸಮಯದಲ್ಲಿ ದ್ರೌಪದಿಯು ಯುಧಿಷ್ಠಿರನಿಗೆ ಚುಚ್ಚುವಂತೆ ಮಾತಾಡುತ್ತಿದ್ದಳು. ಸಭೆಯ ಸನ್ನಿವೇಶದಲ್ಲಿಯೂ ಪ್ರಾತಿಕಾಮಿಯೊಂದಿಗೆ ಅವನು ಅವಳಿಗೆ "ನೀನು ರಜಸ್ವಲೆಯಾಗಿದ್ದರೂ, ಏಕವಸ್ತ್ರಧಾರಿಯಾಗಿದ್ದರೂ ಸಭೆಗೆ ಬಾ, ಎಲ್ಲರೆದುರಿಗೆ ನಿಲ್ಲು" ಎಂದು ನಿರೂಪ ಕಳುಹಿಸಿದನು. ಆ ವೇಳೆಗೆ ಅವಳು ಮೂಢಳಾದಳು. ಸಭೆಗೆ ತಾನು ಹೋಗಲಿಲ್ಲ. ಅವಳನ್ನು ಒಯ್ಯುವ ಧೈರ್ಯವು ಪ್ರಾತಿಕಾಮಿಗೂ ಆಗಲಿಲ್ಲ. ಅವಳ ಪ್ರಶ್ನೆಯ ಗುರಿ ಯುಧಿಷ್ಠಿರನ ಮೇಲೆಯೇ ಇತ್ತು. ಆದರೆ ತನ್ನ ವರದಿಂದಲೇ ಅವನು ದಾಸ್ಯಮುಕ್ತನಾದನೆಂಬುದನ್ನು ಮಾತ್ರ ಅವಳು ಎಂದೂ ಅವನಿಗೆ ನೆನಪು ಮಾಡಿಕೊಡಲು ಹೋಗಲಿಲ್ಲ. ಇಷ್ಟಾದರೂ ಅವನ ಮೇಲಿನ ಸಿಟ್ಟು ಮಾತ್ರ ಕೊನೆಯ ತನಕವೂ ಹೋಗಲೇ ಇಲ್ಲ. ವನವಾಸದ ಸಮಯದಲ್ಲಿ ಅವನನ್ನು ಕುರಿತು ಹೀಗೆ ಹೇಳುತ್ತಾಳೆ : "ದುರ್ಯೋಧನನ ಹೃದಯವು ನಿಜವಾಗಿಯೂ ಕಬ್ಬಿಣದ್ದು. ನಿನ್ನಂತಹ ಧರ್ಮಪರನೂ ಶ್ರೇಷ್ಠನೂ ಆದ ಮನುಷ್ಯನಿಗೆ ಅವನು ತಾಕುವ ಮಾತನ್ನು ಆಡಿದನು. ನೀನು ರಾಜಾಧಿರಾಜ. ಇಂದು ಹೀಗೆ ಕಾಡಿನಲ್ಲಿ ಚಾಪೆಯ ಮೇಲೆ ಕುಳಿತಿದ್ದೀಯೆ. ನಿನ್ನನ್ನು ಈ ಸ್ಥಿತಿಯಲ್ಲಿ ಕಂಡು ಯಾರಿಗೆ ಸಂತಾಪವೆನಿಸಲಾರದು? ಭೀಮನಂತಹ ರಾಜಪುತ್ರನೂ ಅರ್ಜುನನಂತಹ ಯೋಧನೂ ಇಂದು ಹಸಿವೆ ಬಾಯಾರಿಕೆಗಳಿಂದ ವ್ಯಾಕುಲರಾಗಿದ್ದಾರೆ, ದೀನರಾಗಿದ್ದಾರೆ. ಆ ಕಿರಿಯರಿಬ್ಬರೂ ಮಣ್ಣಿನಲ್ಲಿ ಹೊರಳಾಡುತ್ತಿದ್ದಾರೆ. ಇದನ್ನು ನೋಡಿದರೆ ಯಾರಿಗೆ ತಾನೆ ಸಂತಾಪವಾಗಲಾರದು? ದ್ರುಪದನ ಮಗಳು, ಪಾಂಡುವಿನ ಸೊಸೆ, ಧೃಷ್ಟದ್ಯುಮ್ನನ ತಂಗಿ ಮತ್ತು ನಿಮ್ಮ ರಾಣಿ – ಇಂತಹ ನಾನು ವನವಾಸಿಯಾದದ್ದು ನೋಡಿ ನಿನಗೆ ಸಿಟ್ಟು ಏಕೆ ಬರುವುದಿಲ್ಲವೋ ಯಾರಿಗೆ ಗೊತ್ತು? ತಮ್ಮಂದಿರನ್ನು ಈ ಸ್ಥಿತಿಯಲ್ಲಿ ನೋಡಿಯೂ ನಿನಗೆ ಹೇಗೆ ಖೇದವಾಗದು? ಕ್ಷತ್ರಿಯನಿಗೆ ಕ್ರೋಧವು ಅಗತ್ಯ. ಆದರೆ ನಿನ್ನದೆಲ್ಲ ಜಗತ್ತಿಗೆ ಹೊರತಾದದ್ದೇ. ಶತ್ರುಗಳನ್ನು ಕ್ಷಮಿಸಬೇಡ. ಕ್ಷಮೆ ತೋರುವುದು ಯಾರಿಗೆ? ಹಿಂದೆ ಯಾರು ಉಪಕಾರ ಮಾಡಿದರೋ ಅವರ ಅಪರಾಧವನ್ನು ಕ್ಷಮಿಸಬೇಕು.ತಿಳಿವಳಿಕೆಯಿಲ್ಲದವರ, ಆಶ್ರಿತರ ಅಪರಾಧವನ್ನು ಕ್ಷಮಿಸಬೇಕು. ಅರಿಯದೆ ಮಾಡಿದ ಅಪರಾಧವನ್ನು ಕ್ಷಮಿಸಬೇಕು. ಆದರೆ ದುರ್ಯೋಧನನು

ಸತತವಾಗಿ ಅಪರಾಧ ಮಾಡುತ್ತಾನೆ. ಆತ ಲೋಭಿ, ಪಾಪಿ, ಅವನನ್ನು ಕ್ಷಮಿಸ ಬೇಡ. ಕ್ಷತ್ರಿಯನು ಸಮಯಕ್ಕೆ ತಕ್ಕಂತೆ ಮೃದುವಾಗಬೇಕು, ಉಗ್ರನಾಗಬೇಕು. ಮೃದುತ್ವದಿಂದ ಸಾಧಿಸಿದ್ದು ತೀವ್ರಾತ್‌ತೀವ್ರತರವಾಗಿರುತ್ತದೆಂದು ನನಗೆ ಗೊತ್ತು. ಆದರೆ ಇರಬೇಕಾದಲ್ಲಿ ಮಾತ್ರ ಮೃದುತ್ವ ಉಚಿತ. ಉಗ್ರತೆಯಿರ ಬೇಕಾದಲ್ಲಿ ಮೃದುತ್ವದಿಂದೇನು ಪ್ರಯೋಜನ?" – ಎಂಬುದಾಗಿ. ಪ್ರಹ್ಲಾದ, ಬಲಿ ಇವರ ಸಂವಾದದ ಆಧಾರವನ್ನು ಹಿಡಿದು ಆ ಕ್ರುದ್ಧಪಂಡಿತೆಯು ಪತಿಯನ್ನು ಪೇಚಿಗೆ ಸಿಲುಕಿಸಿದಳು.

ಯುಧಿಷ್ಠಿರನು ತನ್ನ ದಿನನಿತ್ಯದ ಶಾಂತದಾಂತ ಧಾಟಿಯಲ್ಲಿ ಹೇಳುತ್ತಾನೆ : "ಏನು ಬೇಕಾದ್ದು ಆದರೂ ಕ್ಷಮೆಯು ಎಲ್ಲಕ್ಕೂ ಶ್ರೇಷ್ಠ. ಜಗತ್ತು ನಿಂತಿರುವುದೇ ಕ್ಷಮೆಯ ಮೇಲೆ. ನನಗೆ ರಾಜ್ಯವನ್ನು ಕೊಡಿ ಎಂದು ಲೋಭವನ್ನು ಪ್ರದರ್ಶಿಸಿ ನಾನು ಬುದ್ಧಿಯನ್ನು ಕಳೆದುಕೊಳ್ಳಲಾರೆ. ಕಾಲವು ಕಠಿಣವಾಗಿದೆ. ಭರತವಂಶಕ್ಕೆ ಇಳಿಗಾಲದ ಕಳೆ ತಾಗಿದೆ. ಈ ಅವನತಿಯ ಗತಿಯನ್ನು ಇನ್ನು ಈ ಮುಂದೆ ತಡೆಯಲು ಆಗುವಂತಿಲ್ಲ. ಇದು ನನಗೆ ನಿಚ್ಚಳವಾಗಿ ಕಾಣತ್ತಿದೆ. ಆದ್ದರಿಂದ ನಾನು ತಾಳ್ಮೆ ಕಳೆದುಕೊಳ್ಳುವುದಿಲ್ಲ" ಎಂಬುದಾಗಿ.

ಅವನು ಕಾಶ್ಯಪಗಾಥೆಯನ್ನು ಆಧರಿಸಿದ ಕ್ಷಮೆಯ ಸೂತ್ರವನ್ನು ಹೇಳುತ್ತಲೇ ದ್ರೌಪದಿಯು ಇನ್ನೂ ರೇಗಿದಳು. ವಿಧಾತನಿಗೆ ದೋಷವಿಟ್ಟಳು. "ನಿನ್ನನ್ನು ಭ್ರಮೆಗೆ ನೂಕಿದ ಆ ವಿಧಾತನಿಗೆ ನಮಸ್ಕಾರ. ಧರ್ಮವನ್ನು ನಾವು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆಯಂತೆ. ನೀನು ಯಜ್ಞಯಾಗಗಳನ್ನು ಮಾಡಿದೆ; ದಾನಮಾಡಿದೆ; ಸತ್ಯವನ್ನು ಪಾಲಿಸಿದೆ; ಅದರ ಫಲ ಇದೇ ತಾನೆ? ಮನುಷ್ಯನು ನೆರಳಿನ ಬೆನ್ನಿಗೆ ಹೋಗುವ ಹಾಗೆ ನೀನು ಧರ್ಮದ ಬೆನ್ನಿಗೆ ಹೋದೆ. ಅದರ ಫಲವೇನು? ದುಃಖ" – ಎಂದಳು.

ಇದಕ್ಕೆ ಯುಧಿಷ್ಠಿರನು ಮತ್ತೆ ಸಾವಕಾಶವಾಗಿ ಅವಳಿಗೆ ಹೀಗೆ ಉತ್ತರ ಕೊಡುತ್ತಾನೆ. "ದ್ರೌಪದಿ, ನಿನ್ನ ಮಾತುಗಳು ಸವಿಯಾಗಿವೆ, ಸರಿಯಾಗಿವೆ. ಆದರೆ, ನಿನ್ನದೊಂದು ತಪ್ಪಿದೆ. ನೀನು ವಿಧಾತನಿಗೆ ದೋಷ ಹೊರಿಸಬೇಡ. ನಿನ್ನ ಮಾತಿನಲ್ಲಿ ನನಗೆ ನಾಸ್ತಿಕತನವು ಕಂಡುಬರುತ್ತಿದೆ. ಫಲದ ಇಚ್ಛೆಯನ್ನು ಇಟ್ಟುಕೊಂಡು ನಾನು ಧರ್ಮವನ್ನು ಮಾಡುವುದಿಲ್ಲ. ಯಾವನು ಬಹಳ ಕೆಳಮಟ್ಟದವನಾಗಿರುತ್ತಾನೋ ಅವನು ಮಾತ್ರ ಧರ್ಮವನ್ನು ಮಾರಿಕೊಳ್ಳು ತ್ತಾನೆ. ದೇವರ ವಿಷಯದಲ್ಲಿ ನಿನಗೆ ಶಂಕೆ ಬೇಡ; ಅವನ ಮೇಲೆ ದೋಷ

ಹೊರಿಸಬೇಡ, ಧರ್ಮವು ಫಲ ಕೊಡದಿದ್ದಲ್ಲಿ ಜಗತ್ತೇ ಮುಳುಗಿಹೋದೀತು. ಲೋಕದ ಜನರು ಪಶುಗಳಂತೆ ನಡೆದಾರು. ವಿದ್ಯೆಯು ಸಾಧ್ಯವಾಗದು. ತಪ, ಜ್ಞಾನ, ದಾನಗಳೆಲ್ಲ ನಿಷ್ಫಲವಾದಾವು. ನಿರ್ವಾಣದ ಅರ್ಥ ಉಳಿಯದೆ ಹೋದೀತು. ಇವು ಎಲ್ಲಿಯ ವರೆಗೆ ಇರುವವೋ ಅಲ್ಲಿಯ ವರೆಗೆ ದೇವತೆಗಳಿರುತ್ತಾರೆ. ಅವರ ಕಾರ್ಯ ಅಗಾಧ. ಆದ್ದರಿಂದ ನೀನು ಅವರನ್ನು ನಿಂದಿಸಬೇಡ" ಎಂಬುದಾಗಿ.

ಈ ಸರಳ ಸಾಮಾನ್ಯ ಉತ್ತರವನ್ನು ಕೇಳಿ ದ್ರೌಪದಿಯು ಬಹಳವಾಗಿ ಗಡಬಡಿಸಿ, "ನಾನು ಧರ್ಮವನ್ನು ನಿಂದಿಸುವುದಿಲ್ಲ. ಈಶ್ವರನನ್ನಂತೂ ನಾನು ಹೇಗೆ ತಾನೇ ನಿಂದಿಸಲಿ? ಆದರೆ ನಾನು ಬಹಳ ದೀನಳೂ ದುಃಖಿಯೂ ಆಗಿದ್ದೇನೆ. ಆದ್ದರಿಂದಲೇ ಬಡಬಡಿಸುತ್ತಿದ್ದೇನೆ, ಅಳುತ್ತಿದ್ದೇನೆ ಎಂದು ತಿಳಿ" ಎಂದು ಹೇಳಿದಳು. ಆದರೆ ಇಂಥ ಸ್ಥಿತಿಯಲ್ಲಿಯೂ ತಾನು ಏನೂ ಮಾತಾಡದಿದ್ದರೆ ಈ ಮನುಷ್ಯನು ಹೀಗೆಯೇ ವ್ಯಥೆಪಡುತ್ತ ಉಳಿಯಬಹುದೆಂಬ ಶಂಕೆ ಬಂದಿತೋ ಎಂಬಂತೆ ದ್ರೌಪದಿಯು ಬೃಹಸ್ಪತಿ ನೀತಿಯ ವಚನಗಳನ್ನು ಯುಧಿಷ್ಠಿರನಿಗೆ ಹೇಳಲಾರಂಬಿಸಿದಳು. "ಈಶ್ವರನೂ ಸೃಷ್ಟಿಯ ಕಾರ್ಯ ಮಾಡಬೇಕಾಗುತ್ತದೆ. ಜೀವಜಂತುಗಳೂ ಬದುಕಲು ಹೆಣಗಬೇಕಾಗುತ್ತದೆ. ಹಸಿಮಣ್ಣಿನ ಗಡಿಗೆಯು ನೀರಿನಲ್ಲಿ ಕರಗಿಹೋಗುತ್ತದೆ. ಅದೇ ರೀತಿ ಯಾವನು ಏನೂ ಮಾಡದೆ ಒರಗಿರುತ್ತಾನೆಯೋ, ಅಂತಹವನು ನಾಶಹೊಂದುತ್ತಾನೆ. ಎಳ್ಳಿನಲ್ಲಿ ಎಣ್ಣೆಯಿರುತ್ತದೆ; ಮರದಲ್ಲಿ ಬೆಂಕಿಯಿರುತ್ತದೆ. ಆದರೆ ಅವನ್ನು ಹೊರತೆಗೆಯಲು ಯೋಜನೆ ಬೇಕಾಗುತ್ತದೆ, ಕರ್ಮ ಬೇಕಾಗುತ್ತದೆ. ಅವಿದ್ದರೆ ಮಾತ್ರವೇ ಪರಮೇಶ್ವರನು ಸಿದ್ಧಿಯನ್ನು ಕೊಡುವುದು. ಸೋಮಾರಿಯ ಹಣೆಯಲ್ಲಿ ದಾರಿದ್ರ್ಯವೇ ಬರೆದಿರುತ್ತದೆ. ಭೂಮಿಯನ್ನು ಉತ್ತು ಬಿತ್ತಿ ಮಾಡಿದ ನಂತರ ಬೇಕಾದರೆ, "ಮುಂದಿನದು ಮಳೆರಾಯನ ಕೈಯಲ್ಲಿ" ಎಂದು ರೈತನು ಹೇಳಬಹುದು. ಸಮುದ್ರವನ್ನು ಹಿಮ್ಮೆಟ್ಟಿಸಬಹುದು; ಪರ್ವತವನ್ನು ಒಡೆಯಬಹುದು; ಎಂದಾಗ ದುರ್ಯೋಧನನ ಕಥೆ ಏನು?" – ಎಂದಳು.

ತಾನು ಇಷ್ಟು ಹೇಳಿದ ಮೇಲೆ, ಭೀಮನು ಮಾತಾಡುವಂತೆ ಪ್ರೋತ್ಸಾಹಿಸಿದಳು. ಅವನಾದರೊ ಇನ್ನೂ ಚುಚ್ಚಿ ನುಡಿದನು. "ನಾನು ಮತ್ತು ಈ ನಿನ್ನ ಪ್ರತಿವಿಂಧ್ಯನ ತಾಯಿ, ಇಬ್ಬರೂ ನಿನ್ನ ಕಷ್ಟವನ್ನು ನೋಡಿ ಸಂತಾಪ

ಪಡುತ್ತೇವೆ. ದುರ್ಯೋಧನನಿಗೆ ರಾಜ್ಯವು ದೊರೆತದ್ದರಿಂದ ನಮಗೆ ಯಾವ ಕಲ್ಯಾಣವೂ ಆಗದು. ಹಸುವಿನ ಮೈತಡವಿದರೆ ಅದು ಹಾಲನ್ನೂ ಕೊಡುತ್ತದೆ, ಪುಣ್ಯವೂ ಸಿಕ್ಕುತ್ತದೆ. ಕತ್ತೆಯ ಮೈತಡವಿ ಏನು ಪ್ರಯೋಜನ? ಬರಿ ಮೈಲಿಗೆ ತಾಗುತ್ತದೆ"-- ಎಂದನು.

ಆಗ ಯುಧಿಷ್ಠಿರನು ಸ್ಪಷ್ಟವಾಗಿ ಹೀಗೆ ಉತ್ತರಿಸಿದನು : "ನಾನು ವನವಾಸದ ಪ್ರತಿಜ್ಞೆ ಮಾಡಿದ್ದು ಸಭೆಯಲ್ಲಿ. ನಾನು ಸತ್ಯವನ್ನು ಬಿಡುವವನಲ್ಲ. ಪ್ರಾಣಕ್ಕಿಂತಲೂ ಪ್ರತಿಜ್ಞೆಯು ನನಗೆ ಪ್ರಿಯವಾದದ್ದು. ನೀವು ರೈತನ ದೃಷ್ಟಾಂತವನ್ನು ಕೊಡುವಿರಲ್ಲವೆ? ಹಾಗಾದರೆ, ಅವನು ಹೇಗೆ ಫಲಕ್ಕಾಗಿ ಕಾಯುವನೋ ಹಾಗೆಯೇ ನೀವೂ ಸ್ವಲ್ಪ ಹೊತ್ತು ಕಾಯಿರಿ" ಎಂಬುದಾಗಿ.

ಇಲ್ಲಿಗೆ ಈ ಪ್ರಸಂಗವು ಮುಗಿಯುತ್ತದೆ. ಆದರೆ ಭೀಮದ್ರೌಪದಿಯರ ಮನಸ್ಸಿನಲ್ಲಿ ಸಂತಾಪದ ಬೆಂಕಿ ಮಾತ್ರ ಹಾಗೆಯೇ ಉರಿಯುತ್ತಿರುತ್ತದೆ. ಯುಧಿಷ್ಠಿರನು ಶಾಂತವಾಗಿ ವಿಚಾರಮಾಡಿ ಅರ್ಜುನನನ್ನು ಅಸ್ತ್ರಪ್ರಾಪ್ತಿಗಾಗಿ ಕಳುಹಿಸುತ್ತಾನೆ.

ಮುಂದೆ, ಜಯದ್ರಥನು ದ್ರೌಪದಿಯನ್ನು ಅಪಹರಿಸಲು ಯತ್ನಿಸಿದ ಸಂದರ್ಭದಲ್ಲಿ ಯುಧಿಷ್ಠಿರನು, "ಜಯದ್ರಥನು ದುಶ್ಶಲೆಯ ಗಂಡ; ಅವಳು ನಮ್ಮ ಸೋದರಿ. ಅವನು ಓಡಿಹೋದ. ಹೋಗಲಿ ಬಿಡಿ. ದ್ರೌಪದಿಯನ್ನಂತೂ ನಾವು ಮರಳಿ ಪಡೆದೆವಷ್ಟೆ?" ಎನ್ನುತ್ತಾನೆ. ಆದರೆ ಅವನ ಮಾತು ದ್ರೌಪದಿಗೆ ಒಪ್ಪಿತವಾಗುವುದಿಲ್ಲ. ಭೀಮಾರ್ಜುನರನ್ನು ಜಯದ್ರಥನ ಹಿಂದೆ ಅಟ್ಟಿ, ಅವನನ್ನು ಹಿಡಿತರಿಸಿ, ಅವನು ಯುಧಿಷ್ಠಿರನೆದುರು ಕ್ಷಮೆಬೇಡುವಂತೆ ಮಾಡುತ್ತಾಳೆ. ವಧೆಯ ಬದಲು, ಅವನ ತಲೆಯಲ್ಲಿ ಐದು ಪಟ್ಟೆ ಕೂದಲು ತೆಗೆಯಿಸಿ, ಬಿಟ್ಟುಬಿಡುತ್ತಾಳೆ.

ವಿರಾಟಪರ್ವದಲ್ಲಂತೂ ಅವಳು "ಯಾರಿಗೆ ಯುಧಿಷ್ಠಿರನು ಗಂಡನಾಗಿ ಸಿಕ್ಕನೋ ಅವಳಿಗೆ ಸುಖವೆಲ್ಲಿ?" ಎಂದು ಸ್ಪಷ್ಟವಾಗಿಯೇ ಹೇಳುತ್ತಾಳೆ. ಹ್ಣಾ ಹ್ಣಾ ಎನ್ನುವಷ್ಟರಲ್ಲಿ ಅವಳ ಸಮತೋಲನವು, ಸಂತಾಪದ ಭರದಲ್ಲಿ ಭರಭರನೆ ಕೆಡುತ್ತಾ ಹೋಗುತ್ತದೆ. ಕೀಚಕ ವಧೆಯ ನಂತರ, ಬೃಹನ್ನಳೆಯ ರೂಪದಲ್ಲಿದ್ದ ಅರ್ಜುನನು, "ನೀನು ಕೀಚಕನಿಂದ ಹೇಗೆ ಬಿಡುಗಡೆ ಪಡೆದೆ? ಕೀಚಕ ಹೇಗೆ ಸತ್ತ? ಅದನ್ನು ಹೇಳು; ನನಗೆ ಕೇಳಬೇಕೆಂದು ಆಸೆ" ಎನ್ನುತ್ತಾನೆ. ಆಗ ಅವಳು,

ಅವನನ್ನು ಗದರಿಸಿ, "ಬೃಹನ್ನಳೆ ನಿನಗೆ ಸೈರಂಧ್ರಿಯೊಂದಿಗೆ ಏನು ಕೆಲಸ? ಈಗ ನೀನು ಅಂತಃಪುರದಲ್ಲಿ ಸುಖವಾಗಿದ್ದೀಯೆ; ಸೈರಂಧ್ರಿಗಿರುವ ದುಃಖ ನಿನಗಿಲ್ಲ. ಆದ್ದರಿಂದ ನೀನು ನನ್ನನ್ನು ನಗುನಗುತ್ತ ವಿಚಾರಿಸುತ್ತಿರುವೆ" ಎನ್ನತ್ತಾಳೆ.

ದ್ರೌಪದಿಯ ಬುದ್ಧಿಯ ಈ ಸ್ವರೂಪವನ್ನು ಚಿಕ್ಕಪುಟ್ಟ ಪ್ರಸಂಗಗಳಲ್ಲಿಯೂ ಅತ್ಯಂತ ಸಮತೂಕದಿಂದ ಸ್ಪಷ್ಟಪಡಿಸಿ ವ್ಯಾಸರು ನಮ್ಮ ಮನಸ್ಸಿನಿಂದ, ಅವಳ ಪಾರ್ಥಿವ ಸೌಂದರ್ಯದ ಮೋಹಿನಿಯನ್ನು ಒರೆಸಿ ತೆಗೆದು ಹಾಕುತ್ತಾರೆ. ಅವಳನ್ನು ಸಾಮ್ರಾಜ್ಞಿಯಾಗಿ ಮಾಡುತ್ತಾರೆ. ಪಾರ್ಥಿವ ಪರಿಪೂರ್ಣತೆಯ ಅಳತೆ ಗೋಲನ್ನು ಅವಳ ಉಡಿಯಲ್ಲಿ ಹಾಕುತ್ತಾರೆ. ಅವಳ ಪ್ರತಿಯೊಂದು ಪ್ರಸಂಗ ದಲ್ಲಿಯೂ ಎಲ್ಲರೂ ರಂಜಿಸಿದರೂ, ಅವಳ ಯಾವುದೇ ಚಿರಸಂಸ್ಕಾರವು ಮನಸ್ಸಿನ ಮೇಲೆ ಉಳಿಯಬಾರದೆಂದೇ ಅವಳ ಬಗೆಗೆ ವ್ಯಾಸರ ಸಂಕೇತವಿದ್ದಂತೆ ತೋರುತ್ತದೆ. ಸೀತೆ ಸಾವಿತ್ರಿಯರಂತೆ ಭಾರತೀಯರ ಮನಸ್ಸಿನಲ್ಲಿ ಅವಳಿಗೆ ಚಿರಂತನತ್ವವು ದೊರೆತಿಲ್ಲ. ಅವಳು ದೂರದ ಓರ್ವ ಕಮನೀಯ ನಾಯಕಿ ಯಾಗಿದ್ದಾಳೆ. ವಾದವಿವಾದಗಳ ಸಂದರ್ಭಗಳಲ್ಲಿ ಯಾವ ಸ್ತ್ರೀಯ ಮನಸ್ಸಿ ನಲ್ಲಾದರೂ ಜಾಗ್ರತಳಾಗುವಂತಹವಳು. ಆದರೆ ಭಾರತನಾರಿಯ ಸಂಸ್ಕಾರ ಜೀವನದಲ್ಲಿ ಅವಳ ಸ್ಥಾನವು ಗೌಣ. ಅವಳು ಜಾಗ್ರತಳಾಗುವುದು ಕೃಷ್ಣಕಥೆಯ ಆಧಾರದಿಂದ, ಪಾಂಡವರ ಕಥೆಯ ಆಧಾರದಿಂದ. ಯುಧಿಷ್ಠಿರನ ಸ್ವತಂತ್ರ ಆದರ್ಶವು ನಮ್ಮ ಮುಂದೆ ಇದೆ. ಗೀತೆಯ ಮೂಲಕ ಅರ್ಜುನನ ಜಿಜ್ಞಾಸೆಯು ಎಲ್ಲರ ಬಾಯಲ್ಲಿ ನಲಿಯುವಂತಾಗಿದೆ. ಆ ಇಬ್ಬರಂತೆ ಇವಳ ವ್ಯಕ್ತಿತ್ವವು ಕಮನೀಯವಾಗಿದ್ದರೂ ಪ್ರೇರಕವಾಗಿಲ್ಲ. ಅವಳಲ್ಲಿದ್ದ ಪಾರ್ಥಿವತೆಯ ವಿಲಕ್ಷಣ ವಾದ ಚೈತನ್ಯಮಯ ಸ್ರೋತವು ಕೇವಲ ಕೆಲವರಿಗಷ್ಟೇ, ಎಂದಾದರೊಮ್ಮೆ ಅರಿವಾಗುವಂತಹದಾಗಿದೆ.

# ಪರಿಶಿಷ್ಟ

## ಪ್ರಸ್ತಾವನೆಗಾಗಿ ಪ್ರಯೋಜನಕ್ಕೆ ಬಂದ ಸಾಹಿತ್ಯ


1. *ಶ್ರೀ ವಾಲ್ಮೀಕಿ ರಾಮಾಯಣಮ್.*

2. *ಆನಂದ ಕುಮಾರಸ್ವಾಮಿ : Figures of speech or figures of thought, ಲಂಡನ್ 1946.*

3. *ರೇ ಲಿವಿಂಗ್‌ಸ್ಟನ್ : The Traditional Theory of literature, ಮಿನಿಯಾ ಪೋಲಿಸ್, 1962.*

4. *ಎರಿಕ್‌ಗಿಲ್ : Art, ಲಂಡನ್, 1934.*

5. *ಕ್ಲೈವ್ ಬೆಲ್ : Art, ಲಂಡನ್, 1949.*

6. *ಫ್ರೆಡರಿಕ್ ಸ್ಪೀಗಲ್‌ಬರ್ಗ್ : Zen, Rocks and waters, ನ್ಯೂಯಾರ್ಕ್, 1961 ಹರ್ಬರ್ಟ್‌ರೀಡ್ ಅವರ ಪೀಠಿಕೆ.*

7. *ಗೆಡೀಸ್ ಮ್ಯಾಕ್‌ಗ್ರೆಗರ್ : Aesthetic Experience in Religion, ಲಂಡನ್, 1947.*

8. *ಕೆನೆತ್‌ವಾಕರ್ : Lifes Long Journey, ಲಂಡನ್, 1960.*

9. *ಜಾನ್‌ಸ್ಟುಅರ್ಟ್ : The Artist of Life (ಹ್ಯಾವ್‌ಲಾಕ್ ಎಲಿಸ್), ಲಂಡನ್ 1949.*

10. *ಆಂದ್ರೆ ಮಾಲ್ರೊ : The Metamorphosis of Gods (ಸ್ಟುಅರ್ಟ್‌ಗಿಲ್ ಅನುವಾದ) ಲಂಡನ್, 1960.*

11. *ರೆನಿರೋ ನೋಲಿ : The Aesthetic experience according to Abhinavagupta ರೋಮ್, 1956.*

12. ಮಿಗ್ವೆಲ್ ಡಿ ಉನಾಮುನೊ : *Tragic sense of Life* (ಜೆ.ಇ. ಕ್ರಾಫರ್ಡ್ ಅನುವಾದ), ಫ್ಲಿಟ್, 1954.

13. ಗಿಸೆಪ ತುಚಿ : *Budha Jayanthi* (ಲೇಖನ), ಈಸ್ಟ್ ಅಂಡ್‌ವೆಸ್ಟ್, 1954.

14. ಡಿ.ಎಚ್. ಲಾರೆನ್ಸ್ : *Selected Literary Criticism*, ಲಂಡನ್, 1961.

15. ಸ್ವಿನ್‌ಬರ್ನ್ : *A selection compiled and with an introduction by Edith Sitwell*, ಲಂಡನ್, 1961.

16. ರವೀಂದ್ರನಾಥಠಾಕುರ್ : "ಪ್ರಾಚೀನ ಸಾಹಿತ್ಯ" [ಮರಾಠಿ ಅನುವಾದ : ರಾಮಚಂದ್ರ ಬಲವಂತ ಆಠವಲೇ, ಪುಣೆ, 1944].

17. ಮಹಾಭಾರತದ ಎಲ್ಲಕ್ಕೂ ಹಳೆಯ ಕಲ್ಕತ್ತಾ ಪ್ರತಿ ಮತ್ತು ಚಿತ್ರಶಾಲಾ ಪ್ರೆಸ್ಸಿನ ನೀಲಕಂಠೀ ಟೀಕೆಯಿದ್ದ ಪ್ರತಿ.

